# ಹೊಸತು

ನೆಮ್ಮದಿಯ ನಾಳೆ ನಮ್ಮದು

## ಒಳಗೇನಿದೆ ...



ಚಿತ್ರಗಳು : ಮೋನಪ್ಪ, ಸ್ಯಾಮ್, ವೇಲ್, ಶ್ರೀಹರಿ, ವಿವೇಕಾನಂದ
ಜಿ. ಎಂ. ಬೊಮ್ನಳ್ಳಿ , ವಿಜಯಾನಂದ ಬಿ. ಕಾಲವಾಡ,
ವಿನ್ಯಾಸ : ನವಕರ್ನಾಟಕ ವಿನ್ಯಾಸ
ಮುಖಪುಟ : ಡಾ॥ ರಾಜಕುಮಾರ್, (ವರ್ಣಚಿತ್ರ : ಸೌಜನ್ಯ - ಕೆ.ಪಿ.ಎನ್.)
ಕಚೇರಿ ಸಹಕಾರ : ಜಿ. ವಿ. ತೇಜೋವತಿ

## ಈ ತಿಂಗಳು

**'ಹೊ**ಸತು' ಸಂಪಾದಕರ ಸದ್ಯದ ಶರೀರಧರ್ಮದಲ್ಲಿ ಅವರಿಗೆ ಹೃದಯಾಘಾತವಾಗುವ ಸಂಭವವಿಲ್ಲವೆಂದು ನುರಿತ ವೈದ್ಯರು ಅರ್ಹತಾಪತ್ರವನ್ನು ನೀಡಿದ್ದಾರೆ. ಆದರೂ ಡಾ॥ ರಾಜಕುಮಾರ್ ಅವರ ನಿಧನವು ಬೇರೆಯ ಅನೇಕರಿಗಿರುವಂತೆ ಅವರಿಗೂ ಆಘಾತಕರ. ದಾದಾಸಾಹೇಬ್ ಫಾಲ್ಕೆ ಪ್ರಶಸ್ತಿ ವಿಜೇತ ಡಾ॥ ರಾಜಕುಮಾರ್ ಅವರಿಗೆ 'ಹೊಸತು' ತನ್ನ ಗೌರವ ಸಲ್ಲಿಸುತ್ತದೆ. ವಿವಿಧ ಕಾರಣಗಳಿಂದಾಗಿ ಅವರ ಜೀವನ ಸಾಧನೆ ಮತ್ತು ಕಲಾ ನೈಪುಣ್ಯಗಳ ವಸ್ತುನಿಷ್ಠ ಮಾಪನವು ಗಣನೀಯ ಪ್ರಮಾಣದಲ್ಲಿ ಆಗಿಲ್ಲವೆಂಬ ಮಾತೊಂದಿದೆ. ಈ ಅಪಚಾರವನ್ನು ತೊಡೆದು ಹಾಕಲು ಮುಂದಿನ ದಿನಗಳಲ್ಲಿ ಸಾಧ್ಯವಾಗಲೆಂದು ಆಶಿಸೋಣ. ಹಂಪಿಯ ಕನ್ನಡ ವಿಶ್ವವಿದ್ಯಾನಿಲಯದ ಚಲನಚಿತ್ರ ಇತಿಹಾಸದ ಎರಡು ಸಂಪುಟಗಳ ವಿತರಣೆಯನ್ನು ತಡೆಹಿಡಿಯಲು ಕಾರಣರಾದವರು ರಾಜ್ ಅವರ ನಿಧನದ ನಂತರ ಉಂಟಾದ ಹಿಂಸಾಚಾರಗಳನ್ನು ಸಹ ನಿವಾರಿಸಲು ಶಕ್ತರಾಗಿದ್ದಿದ್ದರೆ ಚೆನ್ನಾಗಿರುತ್ತಿತ್ತು. ಅಂದಿನ ದಿನಗಳಲ್ಲಿ ಸಿನಿಮಾ ಲೋಕದ ಹಿರಿಯರನೇಕರು ಭಾವಪರವಶರಾಗಿ ವಿಶ್ವವಿದ್ಯಾನಿಲಯದ ಮೇಲೆ ಒತ್ತಡ ತರಲು ಮುಂದಾಗಿದ್ದರು ; ಆದರೆ ಇಂದು ರಾಜ್ ಅಭಿಮಾನಿಗಳಿಗೆ ಶಾಂತಿಯುತವಾಗಿ ತಮ್ಮ ದುಃಖವನ್ನು ಪ್ರಕಟಿಸುವಂತೆ ಮನವಿ ಮಾಡಿಕೊಳ್ಳುವುದರಲ್ಲಿ ಅವರೆಲ್ಲಾ ಸೋತಿದ್ದಾರೆ. ರಾಜ್ಯದ ಸಾಂಸ್ಕೃತಿಕ ಲೋಕದ ಒಬ್ಬ ಪ್ರತಿಷ್ಠಿತರ ಶವಸಂಸ್ಕಾರವನ್ನು ಮರ್ಯಾದೆಯಿಂದ ನಡೆಸುವಲ್ಲಿ ನಮ್ಮ ರಾಜ್ಯ ಸೋತಿದೆ. ಮೃತದೇಹವನ್ನು ಮೆರವಣಿಗೆಯಲ್ಲಿ ಕೊಂಡೊಯ್ಯುವ ಮುನ್ನ ಅದನ್ನು ಎಲ್ಲಿಗೆ ಕೊಂಡೊಯ್ಯಬೇಕು ಮತ್ತು ಅದರ ಹಾದಿ ಯಾವುದು ಎಂಬುದನ್ನು ಮೊದಲೇ ನಿಖರವಾಗಿ ಗೊತ್ತುಮಾಡಿಕೊಳ್ಳದೆ ಮೆರವಣಿಗೆ ಆರಂಭಿಸಿದ್ದರಿಂದ ಅದಕ್ಕೆ ಗೌರವಯುತ ನೆಲೆಯೇ ಇಲ್ಲವೇನೋ ಎಂಬಂತೆ ಎಲ್ಲೆಂದರಲ್ಲಿ ಎಳೆದಾಡಲು ಹುಚ್ಚು ಜನರಿಗೆ ಅವಕಾಶ ಮಾಡಿಕೊಟ್ಟಿದ್ದು ಕುಮಾರಸ್ವಾಮಿ – ಯಡಿಯೂರಪ್ಪ ಸರ್ಕಾರದ ಬೇಜವಾಬ್ದಾರಿತನಕ್ಕೆ ಸಾಕ್ಷಿ. ಶವಸಂಸ್ಕಾರ ಎಲ್ಲಿ ನಡೆಯಬೇಕೆಂದು ತೀರ್ಮಾನವಾಗದೆ ಗಲಿಬಿಲಿ ಉಂಟಾಗುವುದು ಯಾವುದೋ ಅನಾಥ ದೇಹದ ಪಾಲಿಗೆ ಬರಬಹುದು ; ಆದರೆ ಅದು ರಾಜಕುಮಾರ್ ಅವರ ಸಂದರ್ಭದಲ್ಲಿ ನಡೆದದ್ದು ಅತ್ಯಂತ ಅಸಹನೀಯ ನ್ಯೂನತೆ. ಅರಮನೆ ಆವರಣಕ್ಕೆ ದೇಹವನ್ನು ಕೊಂಡೊಯ್ಯುವ ವೇಳೆಗೆ ಅಲ್ಲೊಂದು ಸುಸಜ್ಜಿತ ವೇದಿಕೆ ನಿರ್ಮಾಣ ಮಾಡಿಸಲು ಸರ್ಕಾರಕ್ಕೆ ಆಗಲಿಲ್ಲವೆಂಬುದು ಖಂಡನೀಯ. ಗೊತ್ತುಗುರಿಯಿಲ್ಲದೆ ರಾಜ್ ಶರೀರವನ್ನು ಅರಮನೆಗೆ, ಒಂದು ಶಾಲೆಗೆ, ವಿಧಾನ ಸೌಧಕ್ಕೆ, ಕಂಠೀರವ ಕ್ರೀಡಾಂಗಣಕ್ಕೆ ಯಾವ ನಿಯಂತ್ರಣವೂ ಇಲ್ಲದೆ ಸಾಗಿಸಿದ್ದು ಎಲ್ಲರೂ ತಲೆತಗ್ಗಿಸಬೇಕಾದ ಪ್ರಸಂಗ. ಜೊತೆಗೆ ಒಂದಷ್ಟು ಸಾವುಗಳು ಬೇರೆ. 'ರಾಜ್ – ರಾಜ್' ಎಂದು ಸದಾ ಅವರನ್ನು ಶ್ಲಾಘಿಸುವ ನಮ್ಮ ರಾಜ್ಯಯಂತ್ರ ಮತ್ತು ಜನಯಂತ್ರಗಳೆರಡೂ ದಿಕ್ಕಾಪಾಲಾಗಿ ಹೋಗುವಷ್ಟು ಸಂಯಮ ಕಳೆದುಕೊಳ್ಳಬೇಕಾಗಿತ್ತೇಕೆ ? ಅದಕ್ಕೆ ಅಭಿಮಾನಿಗಳು ಕಾರಣರಲ್ಲವೆಂದು ಹೇಳಿಬಿಟ್ಟರೆ ಎಂಟು ಜನರ ಸಾವು ನಗಣ್ಯವಾಗುವುದಿಲ್ಲ. ದಾಂಧಲೆ ನಡೆಸುವ ಒಂದು ದೊಡ್ಡ ಗುಂಪನ್ನು ಚಲನಚಿತ್ರ ರಂಗವು ನಿರ್ಮಿಸಿದೆಯೆಂಬುದಂತೂ ನಿಜ. ಅಂತಹ ಕೆಟ್ಟ ಪದ್ಧತಿಯನ್ನು ಇನ್ನಾದರೂ ಸಾಕುಮಾಡುವುದು ಹಿತಕರ ಬೆಳೆವಣಿಗೆಯಾಗುತ್ತದೆ.

ರಾಜ್ ಅವರ ನಿಧನಕ್ಕೆ ಮುನ್ನ ನಮ್ಮ ರಾಜ್ಯದಲ್ಲಿ ಜನಸಾಮಾನ್ಯರು ಆಶಿಸುವಂತಹ ಪ್ರಜಾಪ್ರಭುತ್ವದ ಮರಣ ಆಗಿಹೋಗಿತ್ತು. ರಾಜ್ಯಸಭೆಗೆ ನಡೆದ ಚುನಾವಣೆಯಲ್ಲಿ ಇದು ಪ್ರಕಟಗೊಂಡಿತು. ಮೂರು ರಾಜಕೀಯ ಪಕ್ಷಗಳ ಅಭ್ಯರ್ಥಿಗಳನ್ನುಳಿದು ನಾಲ್ಕನೆಯವರು ಯಾರಾಗಬೇಕೆಂದು ನಿರ್ಧಾರವಾಗಿದ್ದು ಕೋಟಿಗಟ್ಟಲೆ ಹಣದ ದುರ್ವ್ಯವಹಾರದಿಂದ. ಕಳೆದ ಬಾರಿ ರಾಮಸ್ವಾಮಿ ಎಂಬ ಕುದುರೆ ಮಾಲೀಕ ಮೂವತ್ತು ಕೋಟಿ ರೂಪಾಯಿಗಳನ್ನು ಕೊಟ್ಟು ರಾಜ್ಯಸಭೆಗೆ ಹೋದನಂತೆ. ಆಮೇಲೆ ಅವನಿಗೆ ಕರ್ನಾಟಕದ ಜ್ಞಾಪಕ ಉಳಿಯಲಿಲ್ಲ. ಅವನ ಪತ್ನಿ ಸತ್ತಾಗ ಸಂತಾಪ ಸೂಚಿಸುವ ಮಾನ್ಯ ದೇವೇಗೌಡರು ಈ ರಾಮಸ್ವಾಮಿಯನ್ನು ಎಂದೂ ಕೇಳಲಿಲ್ಲ, ತನ್ನನ್ನು ಆಯ್ಕೆಮಾಡಿದ ರಾಜ್ಯವನ್ನು ಹೇಗೆ ಪ್ರತಿನಿಧಿಸುತ್ತಿದ್ದೀಯೆ, ಎಂದು. ಈಗ ಮತ್ತೆ ರಾಜೀವನೆಂಬ ಉದ್ಯಮಿಯ ಸರದಿ ಬಂದಿದೆ. ತನ್ನ ಉದ್ಯಮದಲ್ಲಿ ಕೆಲಸಗಾರರಿಗೆ ಪಂಗನಾಮ ಹಾಕಿ ಕಿರುಕುಳ ಕೊಡುವ ಈತ ಉದ್ಯಮದಲ್ಲಿ ಸೋತು ಈಗ ರಾಜಕೀಯದಲ್ಲಿ ಗೆದ್ದಿದ್ದಾನೆ. ಅದಕ್ಕಾಗಿ ಯಾರು ಯಾರಿಗೆ ಎಷ್ಟೆಷ್ಟು ನಿಧಿ ಸಲ್ಲಿಸಿ ರಾಜಕೀಯ ಬಂಡವಾಳ ಹೂಡಿದ್ದಾನೆಂಬುದು ತನಿಖೆಯಾದರೆ ಲೋಕಾಯುಕ್ತ ವೆಂಕಟಾಚಲರನ್ನು ಮೀರಿಸುವಂತಹ ಮಾಹಿತಿ ಹೊರಬರುವುದು ನಿಶ್ಚಿತ. ಇದನ್ನೆಲ್ಲಾ ಗಣನೆಗೆ ತೆಗೆದುಕೊಳ್ಳದೆ ಡಾ॥ ಯು. ಆರ್. ಅನಂತಮೂರ್ತಿಯವರನ್ನು ತೆಗಳಿ ತೃಪ್ತರಾದ ನಮ್ಮ ಬೌದ್ಧಿಕ ಮುಂದಾಳುಗಳು ಜನರಿಗೆ ಯಾವ ಸಮಜಾಯಿಷಿ ನೀಡುತ್ತಾರೋ ತಿಳಿಯದಾಗಿದೆ. ಅನಂತಮೂರ್ತಿಯವರು ಅವಕಾಶವಾದದಲ್ಲಿ ಹೇಗೆ ಪಟಿಂಗರೆಂಬುದನ್ನು ಅಸಾಹಿತ್ಯಕ ಶಬ್ದಗಳಲ್ಲಿ ಹೊರಗೆಡಹಿದ ಡಾ॥ ಜವರೇಗೌಡರಾದಿಯಾಗಿ ಎಲ್ಲರೂ ತಮ್ಮ ಮೂಗಿನ ನೇರಕ್ಕೆ ಮಾತನಾಡುವ ಬದಲು ರಾಜ್ಯದ ಜನರ ಹಾಗೂ ಪ್ರಜಾಪ್ರಭುತ್ವ ಪದ್ಧತಿಯ ಮೂಲ ಆಶಯಗಳನ್ನು ನೆನಪಿನಲ್ಲಿಡುವುದು

೭ನೇ ಪುಟಕ್ಕೆ


ತಿಂಗಳ ಪತ್ರಿಕೆ
**ಹೊಸತು**
ನೆಮ್ಮದಿಯ ಬಾಳೆ ನಮ್ಮದು
ನವಕರ್ನಾಟಕ ಪ್ರಕಾಶನ

ಸಂಪುಟ-೭ ಸಂಚಿಕೆ-೧೦ ಮೇ ೨೦೦೬

**ಸಂಪಾದಕ**

ಜಿ. ರಾಮಕೃಷ್ಣ

**ಸಹಸಂಪಾದಕರು**

ಸಿ. ಆರ್. ಕೃಷ್ಣರಾವ್
ಎನ್. ಗಾಯತ್ರಿ
ಕೆ. ಎಸ್. ಪಾರ್ಥಸಾರಥಿ
ಟಿ. ಶ್ರೀನಿವಾಸರಾಜು
ಕೆ. ಪಿ. ಸ್ವಾಮಿ
ಎಸ್. ಸುರೇಂದ್ರ

**ವ್ಯವಸ್ಥಾಪಕ**

ಎ. ಆರ್. ಉಡುಪ

**ಮುದ್ರಕ-ಪ್ರಕಾಶಕ**

ಆರ್. ಎಸ್. ರಾಜಾರಾಮ್
ವ್ಯವಸ್ಥಾಪಕ ನಿರ್ದೇಶಕ
ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.

**ಮುದ್ರಣ**

**ನವಕರ್ನಾಟಕ ಪ್ರಿಂಟರ್ಸ್**
೧೬೭ ಮತ್ತು ೧೬೮, ೧೦ನೇ ಮುಖ್ಯ ರಸ್ತೆ
೩ನೇ ಘಟ್ಟ, ಪೀಣ್ಯ ಕೈಗಾರಿಕಾ ಪ್ರದೇಶ
ಬೆಂಗಳೂರು - ೫೬೦ ೦೫೮
ದೂರವಾಣಿ: ೨೮೩೯೭೪೨೬

**ಹೊಸತು ಕಚೇರಿಯ ವಿಳಾಸ**



**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈವೇಟ್ ಲಿಮಿಟೆಡ್**
೧೫, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಅಂ. ಪೆ. ೫೧೫೯
ಕುಮಾರ ಪಾರ್ಕ್ ಪೂರ್ವ, ಬೆಂಗಳೂರು - ೫೬೦ ೦೦೧
ದೂರವಾಣಿ: ೩೦೫೭೮೦೨೯, ೨೨೨೦೩೫೮೦
ಫ್ಯಾಕ್ಸ್: ೩೦೫೭೮೦೨೩
**e-mail : nkp@bgl.vsnl.net.in**
**website : www.navakarnatakabooks.com**

# 'ಬಂಡವಾಳ ಪರಿವರ್ತನೆ'ಯಲ್ಲಿ 'ಪ್ರಕಾಶಿಸುವಂತಹುದು' ಏನೂ ಇಲ್ಲ

**ಆಹ್ವಾನಿತ ಸಂಪಾದಕೀಯ**

**ಮಾ**ರ್ಚ್ ೧೮ರಂದು ಭಾರತದ ರಿಸರ್ವ್ ಬ್ಯಾಂಕ್‌ನ ಸಮಾವೇಶವೊಂದನ್ನು ಉದ್ದೇಶಿಸಿ ಮಾತನಾಡುತ್ತ ಪ್ರಧಾನ ಮಂತ್ರಿ ಡಾ॥ ಮನಮೋಹನ್ ಸಿಂಗ್‌ರವರು, 'ಬಂಡವಾಳ ಪರಿವರ್ತನೆ'ಯ ವಿಷಯವನ್ನು ಮತ್ತೆ ಪರಿಶೀಲನೆಗೆ ಕೈಗೊಳ್ಳಬೇಕೆಂದು ತಾವು ಕೇಂದ್ರ ಹಣಕಾಸು ಸಚಿವರನ್ನೂ ಭಾರತದ ರಿಸರ್ವ್ ಬ್ಯಾಂಕ್ ಅನ್ನೂ ಕೇಳಿಕೊಂಡಿರುವುದಾಗಿ ತಿಳಿಸಿದರು. ಈ ಮಾತನ್ನು ಕೇಳಿದ ದೇಶದ ಚಿಂತನಶೀಲ ಜನರು ದಿಗ್ಭ್ರಾಂತರಾದರು, ತಲ್ಲಣಗೊಂಡರು. ಈ ಹೇಳಿಕೆ ತಲ್ಲಣಗೊಳಿಸಿತೇಕೆಂದರೆ – ದೇಶದ ಪ್ರಸಕ್ತ ಬೆಳವಣಿಗೆಯ ಸ್ಥಿತಿಯಲ್ಲಿ 'ಪೂರ್ಣ ಬಂಡವಾಳ ಪರಿವರ್ತನೆ' ಅನೇಕ ಅನಿಶ್ಚಿತತೆಗಳಿಗೆ ದಾರಿ ಮಾಡಿ ಕೊಡುತ್ತದೆ ಎಂಬುದು ಇಂದಿನ ಎಲ್ಲರ ಸಾಮಾನ್ಯ ಭಾವನೆ. ಇಂದು 'ಭಾಗಶಃ ಬಂಡವಾಳ ಪರಿವರ್ತನೆ' ಜಾರಿಯಲ್ಲಿದೆಯಷ್ಟೆ. ಅದು ವಿದೇಶೀ ಬಂಡವಾಳ ಹೂಡಿಕೆಯ ಮುಕ್ತ ಹರಿವಿಗೆ – ಇಂತಹ ಹರಿವು ದೇಶದ ಬೆಳವಣಿಗೆಗೆ ಅತಿ ಮುಖ್ಯವೆಂದು ಹೇಳುತ್ತಿರುವಾಗಲೂ – ಎಷ್ಟು ಮಾತ್ರವೂ ಅಡ್ಡಿಯಾಗಿಲ್ಲವಲ್ಲ! ಹಾಗಿರುವಾಗ 'ಪೂರ್ಣ ಬಂಡವಾಳ ಪರಿವರ್ತನೆ' ಏಕೆ ಬೇಕು ?

ನಮ್ಮ ಪ್ರಧಾನ ಮಂತ್ರಿಗಳು ವಿದೇಶಗಳಲ್ಲಿ ತರಬೇತು ಪಡೆದ ಒಬ್ಬ ನಿಷ್ಣಾತ ಅರ್ಥಶಾಸ್ತ್ರಜ್ಞರು, ಹಾಗಾಗಿ ಅವರು ಏನು ಹೇಳಿದರೂ ಅದು ದೇಶಕ್ಕೆ ಒಳಿತೇ ಆಗಿರಬೇಕು, ಎಂಬ ಭಾವನೆಯನ್ನು ಇಂದು ದೇಶದ ಜನರ ಮನಸ್ಸಿನಲ್ಲಿ ಬಿತ್ತಲಾಗುತ್ತಿದೆ. ಮೊದಲನೆಯದಾಗಿ, ಇಂಥ ನಂಬಿಕೆಯಲ್ಲಿನ ತಪ್ಪು ಭಾವನೆಯನ್ನು, ಮಿಥ್ಯೆಯನ್ನು, ನಿವಾರಿಸುವುದು ಅತ್ಯವಶ್ಯ. ಎರಡನೆಯದಾಗಿ – ಇದು ಇನ್ನೂ ಹೆಚ್ಚು ಮುಖ್ಯವಾದುದು – 'ಬಂಡವಾಳ ಪರಿವರ್ತನೆ' ಎಂಬ ವಿಷಯವು ತುಂಬ ಕ್ಲಿಷ್ಟವಾದ ತಾಂತ್ರಿಕ ವಿಷಯ, ಅದನ್ನು ತಜ್ಞ ಅರ್ಥಶಾಸ್ತ್ರಜ್ಞರಿಗೆ ಬಿಟ್ಟುಬಿಡುವುದು ಒಳಿತು, ಎಂಬಂಥ ಭಾವನೆಯಲ್ಲಿರುವ ಮಿಥ್ಯೆಯನ್ನೂ ನಿವಾರಿಸುವುದು ಅತ್ಯವಶ್ಯ.

ಇಲ್ಲಿ ನಾವು ಚರ್ಚಿಸುತ್ತಿರುವುದು ಭಾರತದ ನಾಣ್ಯ ರೂಪಾಯಿಯನ್ನು ಇತರ ದೇಶಗಳ ನಾಣ್ಯಗಳಿಗೆ ಪರಿವರ್ತಿಸುವ ಮತ್ತು ಇತರ ದೇಶಗಳ ನಾಣ್ಯಗಳನ್ನು ರೂಪಾಯಿಗೆ ಪರಿವರ್ತಿಸುವ ವಿಷಯ. ಆರ್ಥಿಕ ವಹಿವಾಟುಗಳನ್ನು ನಡೆಸುವ ಉದ್ದೇಶದಿಂದ ಇಂತಹ ಪರಿವರ್ತನೆ ಅವಶ್ಯ. ಇದನ್ನು ಎರಡು ಗುಂಪುಗಳಾಗಿ ವಿಂಗಡಿಸಬಹುದು – ಒಂದು, 'ಕರೆಂಟ್ ಅಕೌಂಟ್', ಇನ್ನೊಂದು 'ಕ್ಯಾಪಿಟಲ್ (ಬಂಡವಾಳ) ಅಕೌಂಟ್'. ವ್ಯಾಪಾರ, ಪರ್ಯಟನೆ, ವಿಹಾರ, ಯಾತ್ರೆ ಇತ್ಯಾದಿಗಳಿಗೆ ಸಂಬಂಧಿಸಿದುದು ಕರೆಂಟ್ ಅಕೌಂಟ್. ಬಾಂಡುಗಳು, ಷೇರುಗಳು, ಕಟ್ಟಡಗಳಲ್ಲೂ ಸಜ್ಜ ಸಾಧನಗಳಲ್ಲೂ ತೊಡಗಿಸುವಂಥ ಭೌತಿಕ ಆಸ್ತಿಗಳು, ಇತ್ಯಾದಿಗಳಿಗೆ ಸಂಬಂಧಿಸಿದ ವಹಿವಾಟು 'ಕ್ಯಾಪಿಟಲ್ ಅಕೌಂಟ್'. ಪ್ರಸ್ತುತದಲ್ಲಿ ಕರೆಂಟ್ ಅಕೌಂಟ್‌ನಲ್ಲಿ ರೂಪಾಯಿಯನ್ನು ಇತರ ನಾಣ್ಯಗಳಿಗೆ ಪರಿವರ್ತಿಸುವ ಸಂಪೂರ್ಣ ಅವಕಾಶವಿದೆ. ಅಂದರೆ, ವ್ಯಾಪಾರ, ಪ್ರವಾಸ, ಟೂರಿಸಂ, ಹೊರ ದೇಶಗಳಲ್ಲಿ ವಿದ್ಯಾಭ್ಯಾಸ ಮತ್ತು ಆರೋಗ್ಯ ಸೇವೆ ಇತ್ಯಾದಿಗಳಿಗಾಗಿ ರೂಪಾಯಿಯನ್ನು ವಿದೇಶೀ ನಾಣ್ಯಗಳಿಗೆ ಮತ್ತು ವಿದೇಶೀ ನಾಣ್ಯಗಳನ್ನು ರೂಪಾಯಿಗೆ ಪರಿವರ್ತಿಸುವ ಸಾಧ್ಯತೆ ಇದೆ ಎಂದರ್ಥ. ಆದರೆ 'ಕ್ಯಾಪಿಟಲ್ ಅಕೌಂಟ್'ನಲ್ಲಿ ಇಂತಹ ಪರಿವರ್ತನೆ ಸೀಮಿತ ಸ್ಥಿತಿಯಲ್ಲಿದೆ. ಭಾರತದಲ್ಲಿ ವಾಸಿಸುತ್ತಿರುವ ಭಾರತೀಯರು ಹೊರದೇಶಗಳಲ್ಲಿ ಆಸ್ತಿ, ಬಾಂಡುಗಳು, ಮನೆಗಳು ಇತ್ಯಾದಿಗಳನ್ನು ಕೊಳ್ಳಲು ಅಥವಾ ಕೊಳ್ಳಲೋಸುಗ ಸಾಲ ಎತ್ತುವ ರೂಪದಲ್ಲಿ ಹೊರದೇಶಗಳಲ್ಲಿ ಬಂಡವಾಳ ತೊಡಗಿಸಲು ರೂಪಾಯಿಯನ್ನು ಆಯಾ ವಿದೇಶೀ ನಾಣ್ಯಗಳಿಗೆ ಪರಿವರ್ತಿಸುವುದಕ್ಕೆ ಅನೇಕ ನಿರ್ಬಂಧಗಳಿವೆ. ಆದರೂ ಭಾರತೀಯ ಕಂಪನಿಗಳು ಅನುಮೋದಿತ ಆಕರಗಳ ಮೂಲಕ ಹೊರದೇಶಗಳಲ್ಲಿ ಬಂಡವಾಳ ತೊಡಗಿಸಲು ಹಾಗೂ ಸಂಪನ್ಮೂಲಗಳನ್ನು ಸೃಜಿಸಲು ಮುಂದಾಗಿವೆ. ಇದೇ ರೀತಿ, ವಿದೇಶೀ ವ್ಯಕ್ತಿಗಳು ಭಾರತದಲ್ಲಿ ಬಂಡವಾಳ ತೊಡಗಿಸಲು ಹಲಕೆಲವು ನಿರ್ಬಂಧಗಳಿದ್ದರೂ ವಿದೇಶೀ ಕಂಪನಿಗಳೂ ವಿದೇಶೀ ಸಾಂಸ್ಥಿಕ ಹೂಡಿಕೆದಾರರೂ, ವಿದೇಶಗಳಲ್ಲಿ ವಾಸಿಸುತ್ತಿರುವ ಭಾರತೀಯರೂ, ಭಾರತದಲ್ಲಿ ಬಂಡವಾಳ ಹೂಡಲು ಯಾವುದೇ ರೀತಿಯ ತೊಂದರೆ ಎದುರಿಸುತ್ತಿಲ್ಲ ಎಂದೇ ಹೇಳಬೇಕು. ಭಾರತದಲ್ಲಿ ವಿದೇಶೀ ನೇರ ಬಂಡವಾಳ ಹೂಡಿಕೆ (FDI)ಗೆ ಯಾವುದೇ ಹಿಡಿತ ಇಲ್ಲ. ದೇಶದ ರಕ್ಷಣೆಗೆ ಸಂಬಂಧಿಸಿದ ಸಜ್ಜ ಸಾಧನಗಳು, ಬೈಜಿಕ ಶಕ್ತಿ, ಚಿಲ್ಲರೆ ವ್ಯಾಪಾರ ವಿಭಾಗ – ಇವುಗಳಷ್ಟೆ ಮೇಲಿನದಕ್ಕೆ ಅಪವಾದ. ಹೀಗಿರುವಾಗ 'ಪೂರ್ಣ ಕ್ಯಾಪಿಟಲ್ ಅಕೌಂಟ್' ಪರಿವರ್ತನೆಗೂ ಅವಕಾಶ ನೀಡಿದಲ್ಲಿ, ಭಾರತದಲ್ಲಿ ವಾಸಿಸುತ್ತಿರುವ ಭಾರತೀಯರು ರೂಪಾಯಿಯನ್ನು ಯಾವುದೇ ವಿದೇಶೀ ನಾಣ್ಯಕ್ಕೆ ಪರಿವರ್ತಿಸಬಹುದು, ಬಾಂಡುಗಳನ್ನು, ಷೇರುಗಳನ್ನು ಅಥವಾ ಮನೆಗಳು, ಕಟ್ಟಡಗಳು ಇತ್ಯಾದಿಗಳಂಥ ಯಾವುದೇ ಆಸ್ತಿಗಳನ್ನು ಕೊಳ್ಳಲು ರೂಪಾಯಿಯನ್ನು ಯಾವುದೇ ನಿರ್ಬಂಧಗಳಿಲ್ಲದೆ ವಿದೇಶಗಳಿಗೆ ಕೊಂಡೊಯ್ಯಬಹುದು ಎಂದು ಅರ್ಥವಾಗುತ್ತದೆ. ಭಾರತೀಯ ಕಂಪನಿಗಳು ಬಡ್ಡಿದರ ಅತ್ಯಂತ ಕಮ್ಮಿ ಎಂದು ಭಾವಿಸುವಂಥ ಜಗತ್ತಿನ ಯಾವುದೇ ದೇಶದಲ್ಲಿ ಸಾಲ ಎತ್ತಬಹುದು ಎಂದೂ ಇದರ ಅರ್ಥವಾಗುತ್ತದೆ. ಹಾಗಾಗಿ ಭಾರತೀಯ ರೂಪಾಯಿಯನ್ನು ಯಾವುದೇ ವಿದೇಶೀ ನಾಣ್ಯಕ್ಕೆ ಪರಿವರ್ತಿಸುವುದಕ್ಕೆ ಮತ್ತು ಭಾರತೀಯ ರೂಪಾಯಿ ಜಗತ್ತಿನಲ್ಲಿ ಎಲ್ಲಿಗೇ ಹರಿದುಹೋಗುವುದಕ್ಕೆ ಯಾವುದೇ ರೀತಿಯ ನಿರ್ಬಂಧ, ನಿಯಂತ್ರಣ ಇಲ್ಲದಂತಾಗುತ್ತದೆ.

ಸಾಮಾನ್ಯವಾಗಿ ಯಾವುದೇ ದೇಶ ಆರ್ಥಿಕ ಸಮೃದ್ಧತೆಯನ್ನು ಸಾಧಿಸಿದ್ದಾಗಲಷ್ಟೆ, ಆರ್ಥಿಕವಾಗಿ ಬಲಶಾಲಿಯಾಗಿದ್ದಾಗಲಷ್ಟೆ, ಪೂರ್ಣ ಬಂಡವಾಳ ಪರಿವರ್ತನೆಯ ನೀತಿಯನ್ನು ಆಯ್ದುಕೊಳ್ಳುತ್ತದೆ. ಇದರಿಂದ ಆ ದೇಶ ಏನನ್ನೂ ಕಳೆದುಕೊಳ್ಳುವುದಿಲ್ಲ, ಬದಲು ತನ್ನ ಆರ್ಥಿಕ ಸ್ಥಿರತೆಯಿಂದಾಗಿ ಗಳಿಸುವುದೇ ಹೆಚ್ಚು. ದೇಶದಲ್ಲಿನ ಅಧಿಕ ಸಂಪನ್ಮೂಲಗಳನ್ನು ಹೊರದೇಶಗಳಿಗೆ ಸಾಗಹಾಕಲು ಇದೊಂದು ಸುವರ್ಣಾವಕಾಶ: ಆದರೆ ಭಾರತ ಅಂತಹ ಸ್ಥಿತಿಯಲ್ಲಿದೆಯೆ ? 'ಭಾರತ ಪ್ರಕಾಶಿಸುತ್ತಿದೆ' ಎಂದು ಏನೆಲ್ಲ ಅಬ್ಬರ ಪ್ರಚಾರದ ಮಾತುಗಳನ್ನಾಡಿದರೂ ವಾಸ್ತವವಾಗಿ ಭಾರತವು ಜಗತ್ತಿನ ಬಡಜನರ ಅರ್ಧಭಾಗಕ್ಕೆ ನೆಲೆವೀಡಾಗಿದೆ, ನಿರುದ್ಯೋಗವೂ ಅಸಮಾನತೆಗಳೂ ಹೆಚ್ಚುತ್ತಿರುವ ದೇಶವಾಗಿದೆ. ಇಂತಹ ಸ್ಥಿತಿಯಲ್ಲಿ 'ಪೂರ್ಣ ಬಂಡವಾಳ ಪರಿವರ್ತನೆ'ಯನ್ನು ಜಾರಿಗೆ ತರುವುದು ಅನೇಕ ಅಸ್ಥಿರತೆಯ ಅಂಶಗಳಿಗೆ ಆಸ್ಪದ

ನೀಡುತ್ತದೆ, ಭಾರತ ಸಾಧಿಸಿರುವ ಸೀಮಿತ ಪ್ರಗತಿಯನ್ನೂ ಗಂಡಾಂತರಕ್ಕೆ ಸಿಲುಕಿಸುತ್ತದೆ.

ಮೊದಲನೆಯದಾಗಿ, ಪ್ರಸಕ್ತ ಭಾರತೀಯ ಪರಿಸ್ಥಿತಿಯಲ್ಲಿ, 'ಪೂರ್ಣ ಬಂಡವಾಳ ಪರಿವರ್ತನೆ' ಯಲ್ಲಿ ಹೊರದೇಶಗಳಲ್ಲಿ ಆಸ್ತಿಗಳಿಸುವ ಅದುಮಿಟ್ಟ ಹೆಬ್ಬಯಕೆಗೆ ಹೆಬ್ಬಾಗಿಲು ತೆರೆದಿರಿಸುತ್ತದಷ್ಟೆ ಅಲ್ಲ, ಶಾಸನಬದ್ಧವಾಗಿ ಬಂಡವಾಳವನ್ನು ಹೊರ ದೇಶಗಳಿಗೆ – ಬಡ್ಡಿ ದರಗಳು ಅತ್ಯಂತ ಕಡಿಮೆ ಇರುವಂಥ ಮಾರಿಷಸ್ ಅಥವಾ ಬಹಾಮಾಗಳಂಥ ದೇಶಗಳಿಗೆ – ಸಾಗಿಸಲು ಭಾರತದಲ್ಲಿ ವಾಸಿಸುತ್ತಿರುವ ಬಂಡವಾಳಗಾರರಿಗೆ ಅಪಾರ ಅವಕಾಶ ಒದಗಿಸಿಕೊಡುತ್ತದೆ. ಇದು ೧೯೭೦ರ ಹಾಗೂ ೧೯೮೦ರ ದಶಕಗಳಲ್ಲಿ ಭಾರತೀಯ ಶ್ರೀಮಂತರಿಗೆ ಭಾರಿ ಅದೃಷ್ಟ ತಂದಿತಾದರೂ ಭಾರಿ ಲ್ಯಾಟಿನ ಅಮೆರಿಕನ್ ಸಾಲ ಸೃಜನೆಗೂ ಕಾರಣವಾಯಿತು. ಹೀಗೆ ದೇಶೀಯ ಸಂಪನ್ಮೂಲಗಳನ್ನು ಹೊರದೇಶಗಳಿಗೆ ಸಾಗಹಾಕಿ ದೇಶೀಯ ಆರ್ಥಿಕತೆಯನ್ನು ನಾಶಗೊಳಿಸಿ ದೇಶವನ್ನು ಸಾಲದ ಪ್ರಪಾತಕ್ಕೆ ತಳ್ಳಿದ ದೇಶಗಳಿಗೆ ಕುಖ್ಯಾತ ನಿದರ್ಶನಗಳೆಂದರೆ ಬ್ರೆಸಿಲ್, ಟರ್ಕಿ, ಇಂಡೋನೇಷ್ಯ ಹಾಗೂ ಮೆಕ್ಸಿಕೊ ದೇಶಗಳು. ನಮ್ಮ ರಾಜಕೀಯ ಹಾಗೂ ವ್ಯಾಪಾರೀ ವರಿಷ್ಠರು ಇಂತಹ ತಪ್ಪು ಮಾಡಹೋಗುವರೆಂದು ನಾವೇನೂ ಅವರ ಬುದ್ಧಿವಂತಿಕೆಯ ಕೀಳಂದಾಜು ಮಾಡಬೇಕಾಗಿಲ್ಲವೆನ್ನಿ.

ಎರಡನೆಯದಾಗಿ, ವಿನಿಮಯ ದರವು ಸಂಪೂರ್ಣವಾಗಿ ಹೆಚ್ಚುಕಮ್ಮಿಯಾಗುತ್ತ ಹರಿದಾಡುವ ಸ್ಥಿತಿಯೂ, ಬಡ್ಡಿದರಗಳು ಪ್ರಪಂಚದ ಮಾರುಕಟ್ಟೆ ಶಕ್ತಿಗಳಿಂದ ನಿರ್ದೇಶಿತವಾಗುವಂಥ ಸ್ಥಿತಿಯೂ, ದೇಶದೊಳಗೆ ಹಣಕಾಸು ಹಾಗೂ ಆರ್ಥಿಕ ನೀತಿ ಕ್ರಮಗಳನ್ನು ನಿಷ್ಪರಿಣಾಮಕಾರಿಯನ್ನಾಗಿ ನಿರರ್ಥಕವನ್ನಾಗಿ ಮಾಡುತ್ತವೆ. ಸಾಲ ಹಂಚಿಕೆಯಲ್ಲಿ ಇಂದಿನ ಗುರಿಗಮ್ಯಗಳಿಗೆ ಸಂಬಂಧಿಸಿದಂತೆ ಸಾಮಾಜಿಕ ಆದ್ಯತೆಗಳಲ್ಲಿ ಮತ್ತಷ್ಟು ಕ್ಷರಣ, ಸವೆತ ಉಂಟಾಗುತ್ತದೆ. ಉದಾಹರಣೆಗೆ, ಜನರಿಗೆ ಹೆಚ್ಚಿನ ನೌಕರಿ ಉದ್ಯೋಗ ಒದಗಿಸುತ್ತಿರುವ ಕೃಷಿ ಹಾಗೂ ಸಣ್ಣ ಪ್ರಮಾಣ ಕೈಗಾರಿಕೆಗಳಿಗೆ ನಿಗದಿಪಡಿಸಿರುವ ಸಂಪನ್ಮೂಲಗಳು ಮತ್ತಷ್ಟು ತುಯ್ಯಕ್ಕೊಳಗಾಗುತ್ತವೆ.

ಮೂರನೆಯದಾಗಿ, ಇಂದು ಹೊರದೇಶಗಳಿಂದ ನಮ್ಮ ದೇಶದೊಳಕ್ಕೆ ಬಂಡವಾಳ ನೇರವಾಗಿ ಹರಿದು ಬರುವುದಕ್ಕಾಗಲೀ, ಅವುಗಳಿಂದ ಲಭಿಸುವ ಲಾಭಗಳನ್ನು ಆಯಾ ದೇಶಗಳಿಗೆ ಸಾಗಿಸುವುದಕ್ಕಾಲೀ, ಯಾವುದೇ ರೀತಿಯ ಇತಿಮಿತಿಗಳಿಲ್ಲ. ಇಂತಹ ಪರಿಸ್ಥಿತಿಯಲ್ಲಿ ಕ್ಯಾಪಿಟಲ್ ಅಕೌಂಟ್ ಪರಿವರ್ತನೆಯ, ಪೂರ್ಣ ಬಂಡವಾಳ ಪರಿವರ್ತನೆಯ ನೀತಿಯನ್ನು ಜಾರಿಗೆ ತರುವುದು ದೇಶದೊಳಕ್ಕೆ ವಿದೇಶೀ ಬಂಡವಾಳದ ನೇರ ಹರಿವಿಗೆ ಯಾವುದೇ ರೀತಿಯಲ್ಲೂ ಹೆಚ್ಚಿನ ಪ್ರೋತ್ಸಾಹ ನೀಡುವುದೆಂದು ಹೇಳಲಾಗದು. ತದ್ವಿರುದ್ಧವಾಗಿ ಅದು ಭಾರತೀಯ ಆರ್ಥಿಕತೆಯನ್ನು ಅತ್ಯಂತ ಹೆಚ್ಚಿನ ಚಂಚಲತೆಗೆ ಈಡುಮಾಡುತ್ತದೆ. ಬಂಡವಾಳವು ಒಂದು ದೇಶದಿಂದ ಮತ್ತೊಂದಕ್ಕೆ ಹರಿದುಹೋಗಲು ಪೂರ್ಣಾವಕಾಶ ನೀಡುವ ನೀತಿಯನ್ನು ಜಾರಿಗೆ ತಂದಲ್ಲಿ, ಹೊರದೇಶದ ಹೂಡಿಕೆದಾರರು ಭಾರತದಿಂದ ತಮ್ಮ ಲಾಭ – ನಿಧಿಗಳನ್ನು ತಮ್ಮ ದೇಶಗಳಿಗೆ ಭಾರಿ ಪ್ರಮಾಣಗಳಲ್ಲಿ ಸಾಗಿಸಲು ಅವಕಾಶವಾಗುತ್ತದಷ್ಟೆ ಅಲ್ಲ, ಭಾರತೀಯ ಬಂಡವಾಳಗಾರರೂ ದೇಶೀಯ ಸಂಪತ್ತನ್ನು ಭಾರಿ ಪ್ರಮಾಣಗಳಲ್ಲಿ ಹೊರದೇಶಗಳಿಗೆ ಸಾಗಿಸಲು ಮುಕ್ತಾವಕಾಶ ಪಡೆದುಕೊಳ್ಳುತ್ತಾರೆ. ಇದರಿಂದ ದೇಶವು ಸ್ಥಿರವಾದ ವಿನಿಮಯ ದರಗಳನ್ನು ಕಾಯ್ದುಕೊಳ್ಳುವಲ್ಲಿ ತನ್ನ ಸಾಮರ್ಥ್ಯವನ್ನು ಕಳೆದುಕೊಳ್ಳುತ್ತದಷ್ಟೆ ಅಲ್ಲ, ದೇಶದ ಹಣಕಾಸಿನ ಪರಿಸ್ಥಿತಿ ಅಪಾರ ಆಪತ್ತಿಗೆ ಒಳಗಾಗುತ್ತದೆ.

ಭಾರತದ ರಿಸರ್ವ್ ಬ್ಯಾಂಕ್ ಬಂಡವಾಳ ಪರಿವರ್ತನೆಗೆ ಸಂಬಂಧಿಸಿ ೧೯೯೭ರಲ್ಲಿ 'ತಾರಾಪೂರ್ ಸಮಿತಿ'ಯನ್ನು ನೇಮಕ ಮಾಡಿದ್ದಿತು. ಈ ಸಮಿತಿಯು ೧೯೯೯- ೨೦೦೦ದ ವೇಳೆಗೆ ಪೂರ್ಣ ಬಂಡವಾಳ ಪರಿವರ್ತನೆಯನ್ನು ಜಾರಿಗೆ ತರಲು ಒಂದು ವಿವರವಾದ ವರದಿಯನ್ನು ಸಿದ್ಧಪಡಿಸಿಕೊಟ್ಟಿದ್ದಿತು ಎಂಬುದನ್ನು ಗಮನಿಸುವುದು ಸ್ವಾರಸ್ಯಕರ. ಆದರೆ ಈ ವರದಿಯನ್ನು ಒಪ್ಪಿಸಿದ ಕೆಲವೇ ತಿಂಗಳುಗಳಲ್ಲೇ, ೧೯೯೭ರಲ್ಲಿ, ಆಗ್ನೇಯ ಏಷ್ಯಾ ಬಿಕ್ಕಟ್ಟು ತಲೆದೋರಿತು. ಪೂರ್ಣ ಬಂಡವಾಳ ಪರಿವರ್ತನೆ ಎಷ್ಟು ಭಿದುರ ಎಂಬುದನ್ನು ಅದು ತೋರಿಸಿಕೊಟ್ಟಿತು. ಅಷ್ಟೇ ಅಲ್ಲ, ಆ ಕಾಲದಲ್ಲಿ ಭಾರತವು ಬಂಡವಾಳ ಪರಿವರ್ತನೆಗೆ ಸಂಬಂಧಿಸಿ ಅನೇಕ ನಿಯಂತ್ರಣಗಳನ್ನು ಜಾರಿಗೆ ತಂದಿದ್ದುದರ ಕಾರಣವಾಗಿಯೇ ಈ ಆಗ್ನೇಯ ಏಷ್ಯನ್ ಬಿಕ್ಕಟ್ಟಿನಿಂದ ಬಾಧಿತವಾಗಲಿಲ್ಲ, ಎಂಬ ಅಂಶವೂ ವಾಸ್ತವವಾಗಿ ಇದರಿಂದ ಸಾಧಿತವಾಯಿತು. ಈ ಒಳ್ಳೆಯ ತಿಳಿವಳಿಕೆಯೇ ತಾರಾಪೂರ್ ಸಮಿತಿಯ ಶಿಫಾರಸುಗಳನ್ನು ತಡೆಹಿಡಿದಿರಿಸಿದುದರ ಹಿಂದಿದ್ದಿತು. ಆದರೆ ಪ್ರಧಾನ ಮಂತ್ರಿಗಳ ಈಚೆಗಿನ ಹೇಳಿಕೆಯ ಪ್ರಕಾರ ಅದೇ ತಾರಾಪೂರ್‌ರವರು ಮತ್ತೆ ಎರಡನೆಯ ಬಾರಿಗೆ ಬಂಡವಾಳ ಪರಿವರ್ತನೆಗೆ ಸಂಬಂಧಿಸಿ ವಿವರ ವರದಿ ಸಿದ್ಧಪಡಿಸುವ ಸಮಿತಿಯ ಮುಖ್ಯಸ್ಥರಾಗಿದ್ದಾರೆ. ಈ ಮುನ್ನಿನ ತಾರಾಪೂರ್ ಸಮಿತಿಯು ಏನನ್ನು 'ಪೂರ್ವ ಷರತ್ತುಗಳು' ಎಂದು ಸಲಹೆ ಮಾಡಿದ್ದಿತೋ ಅವನ್ನೇ ಈಗ ಹಣಕಾಸು ಸಚಿವಾಲಯವು ಆರ್ಥಿಕತೆಯ ಪೂರೈಕೆಗೊಂಡ 'ಪ್ರಬಲ ಮೂಲಾಂಶಗಳು' ಎಂದು ಮುಂದೆ ತಂದಿದೆ. ದೇಶದ ಆರ್ಥಿಕತೆಯು ಈಗ ಚೆನ್ನಾಗಿ ಕೆಲಸ ಮಾಡುತ್ತಿದೆ ಎಂದು ಸರಕಾರವು ಭಾವಿಸಿದ್ದಲ್ಲಿ, ಈ ಆರ್ಥಿಕತೆಯನ್ನು ಪೂರ್ಣ ಬಂಡವಾಳ ಪರಿವರ್ತನೆಯ ಮೂಲಕ ಭಿದುರತೆಗೆ, ಚಂಚಲತೆಗೆ, ತೆರೆದಿರಿಸುವ ಆವಶ್ಯಕತೆಯೇ ಇರಲಿಲ್ಲ. ಈ ಎಲ್ಲ ದಿನಗಳಲ್ಲೂ ಬೆಳವಣಿಗೆ ಹಾಗೂ ಬಂಡವಾಳ ಪರಿವರ್ತನೆಯನ್ನು ಬೋಧಿಸಿದ ವಿಶ್ವ ಬ್ಯಾಂಕ್ ಈಗ ನ್ಯಾಯೋಚಿತತೆ (ಈಕ್ವಿಟಿ)ಯ ಪ್ರಾಮುಖ್ಯವನ್ನು ಒತ್ತಿ ಹೇಳುತ್ತ ಪೂರ್ಣವಾಗಿ ಹಿಮ್ಮುಖವಾಗಿರುವುದು ವಿಪರ್ಯಾಸವಾದರೂ ಸತ್ಯಸಂಗತಿಯಾಗಿದೆ. ತನ್ನ ಇತ್ತೀಚೆಗಿನ 'ಜಾಗತಿಕ ಬೆಳವಣಿಗೆ ವರದಿ –೨೦೦೦' ದಲ್ಲಿ ವಿಶ್ವ ಬ್ಯಾಂಕ್ ನ್ಯಾಯೋಚಿತತೆಯೇ (ಈಕ್ವಿಟಿ) ಎಲ್ಲ ಬೆಳವಣಿಗೆ ಎಂದು ಪ್ರಮಾಣ ಮಾಡಿ ಹೇಳುತ್ತದೆ ! ಬಂಡವಾಳ ಪರಿವರ್ತನೆಗೆ ಸಂಬಂಧಿಸಿ ಭಾರತೀಯ ಜನರು ನೀಡುತ್ತಿರುವ ಎಚ್ಚರಿಕೆಯ ಮಾತುಗಳೆಲ್ಲ ಎಡಪಂಥೀಯ ರಾಜಕಾರಣದ ಒಂದು ಭಾಗ ಎಂದು ತಳ್ಳಿಹಾಕುವ ಮುನ್ನ ಪ್ರಧಾನ ಮಂತ್ರಿಗಳ ಕಾರ್ಯಾಲಯವು 'ವಿಶ್ವ ಬೆಳವಣಿಗೆ ವರದಿ – ೨೦೦೬' ಅನ್ನು ಗಮನಕ್ಕೆ ತಂದುಕೊಳ್ಳುವುದು ಒಳಿತು. ಈ ವರದಿಯು ಆರ್ಥಿಕ ನೀತಿ ಆದ್ಯತೆಗಳನ್ನು ನಿರ್ಧರಿಸುವಾಗ, ಪೂರ್ಣ ಬಂಡವಾಳ ಪರಿವರ್ತನೆಯನ್ನು ಶುದ್ಧ ಅವಿವೇಕ ಎಂದು ತಳ್ಳಿಹಾಕಿ ನ್ಯಾಯೋಚಿತತೆಯ ಕಡೆಗೆ ಹಿಂದಿರುಗಿದೆ. ಇದನ್ನು ಪರಿಗಣಿಸುವ ಹಾಗೆ ಅಧಿಕಾರದಲ್ಲಿರುವವರಲ್ಲಿ ಸುಜ್ಞಾನ ಮೂಡಲಿರುವುದೆ, ಕಾದು ನೋಡಬೇಕಾಗಿದೆ !

**– ಡಾ|| ಡಿ. ನರಸಿಂಹ ರೆಡ್ಡಿ**

ನಿವೃತ್ತ ಅರ್ಥಶಾಸ್ತ್ರ ಪ್ರಾಧ್ಯಾಪಕರು, ಹೈದರಾಬಾದ್ ಕೇಂದ್ರೀಯ ವಿಶ್ವವಿದ್ಯಾನಿಲಯ









**ಚಂದಾ ವಿವರಗಳು**

| | |
|---|---|
| ಬಿಡಿ ಸಂಚಿಕೆ | ರೂ. ೧೨/- |
| ವಾರ್ಷಿಕ ಚಂದಾ | ರೂ. ೧೨೫/- |
| ಮೂರು ವರ್ಷಕ್ಕೆ | ರೂ. ೩೦೦/- |

**ನವಕರ್ನಾಟಕ ಶಾಖೆಗಳು**

೫ನೇ ಮುಖ್ಯ ರಸ್ತೆ, ಗಾಂಧಿನಗರ
ಬೆಂಗಳೂರು-೫೬೦ ೦೦೯
☎ : ೦೮೦-೨೨೨೫೧೩೮೨

ಕೆ. ಎಸ್. ಆರ್. ರಸ್ತೆ
ಮಂಗಳೂರು - ೫೭೫ ೦೦೧
☎ : ೦೮೨೪-೨೪೪೧೦೧೬

ರಾಮಸ್ವಾಮಿ ವೃತ್ತ
ಮೈಸೂರು - ೫೭೦ ೦೨೪
☎ : ೦೮೨೧-೨೪೨೪೦೯೪

ಸ್ಟೇಷನ್ ರಸ್ತೆ
ಗುಲ್ಬರ್ಗಾ - ೫೮೫ ೧೦೨
☎ : ೦೮೪೭೨-೨೨೪೩೦೨




'ಹೊಸತು' ಮಾಸ ಪತ್ರಿಕೆಯು ಅರ್ಥಪೂರ್ಣವಾಗಿ ಮೂಡಿಬರುತ್ತಿರುವುದು ಸಂತೋಷದ ವಿಚಾರ! ಅದರಲ್ಲೂ ವೈಚಾರಿಕ ವಿಚಾರಧಾರೆಯನ್ನೇ ಹೊರ ತರುತ್ತಿರುವುದು ಹೆಮ್ಮೆಯ ವಿಚಾರ. ಸಂಪಾದಕೀಯ ವಿಚಾರ ಇನ್ನಷ್ಟು ತೀಕ್ಷ್ಣವಾಗಿ, ಎದೆಗಾರಿಕೆಯಿಂದ ಮೂಡಿಬರಲಿ. ಮಲೆನಾಡನ್ನು ಚಿತ್ರಿಸುವ ಲೇಖನ, ಕರಾವಳಿಯ ಬಿಂಬಿಸುವ ಬರಹ... ಬಡತನ... ಸ್ಲಂ... ಸತ್ಯ ಬರಹಗಳು... ವೈಚಾರಿಕ, ಸಮಾಜವಾದದ ವಿಚಾರಗಳು ಯುವಜನತೆಯನ್ನು ಪ್ರೋತ್ಸಾಹಿಸುವ ಸ್ಫೂರ್ತಿ ನೀಡುವ ವಿಚಾರಗಳು ಹೊಸತಿನಲ್ಲಿ ಪ್ರಕಟವಾಗಲಿ.

ಬೆಂಗಳೂರು **ತಿರುಮಲ ಸೋನ**

### ಏಪ್ರಿಲ್ ಸಂಚಿಕೆ

ಸಂಚಿಕೆ ಬಂದೊಡನೆ ನಾನು ನೋಡಿದ್ದು ಮುಖಪುಟವನ್ನು. ವರ್ಣನಾತೀತ ಪ್ರಕೃತಿ ಚಿತ್ರ ಹೃನ್ಮನಗಳನ್ನು ತಣಿಸಿತು. ಮಾನವ ಪ್ರಕೃತಿಯ ಕೂಸು. ಪ್ರಕೃತಿಯೊಂದಿಗಿನ ಸಂಬಂಧ ಈಗ ಹಂತಹಂತವಾಗಿ ಕಳಚುತ್ತಿದೆ. ಕಾರಣ ಸುಖಲೋಲುಪನಾದ ಮಾನವ ಇಂದು ಪ್ರಕೃತಿಯನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಂಡು ತಾನು ತೋಡಿದ ಗುಂಡಿಗೆ ತಾನೇ ಬೀಳುವಂತಾಗಿದೆ. ಇಂದು ಮಾನವ ಏನೆಲ್ಲಾ ಸಾಧಿಸಿರಬಹುದು, ಆದರೆ ಪ್ರಕೃತಿಯ ಮುಂದೆ ಮಾತ್ರ ಕುಬ್ಜ. ಇಂತಹ ಮುಖಪುಟಗಳಿಗೆ ಹೊಸತು ಹೆಚ್ಚಿನ ಆದ್ಯತೆ ನೀಡುತ್ತಿರುವುದಕ್ಕೆ ಧನ್ಯವಾದಗಳು. ಪ್ರೊ|| ಜಿ. ವೆಂಕಟಸುಬ್ಬಯ್ಯನವರು ಮಾರ್ಮಿಕವಾಗಿ ಬರೆದಿದ್ದಾರೆ.

ಮೈಸೂರು **ಕಾಳೀಹುಂಡಿ ಕೆ. ವಿ. ಶಿವಕುಮಾರ್**

ಹಿಮಾಲಯದ ಒಂದು ಭಾಗದ ಮುಖಪುಟ ಹೊತ್ತ ಏಪ್ರಿಲ್ ಸಂಚಿಕೆಯು ತುಂಬಾ ಆಕರ್ಷಕವಾಗಿತ್ತು. 'ಹೊಸತು'ವಿನಿಂದ ''ಗುರುಶಿಷ್ಯರ'' ಅಪೂರ್ವ ಮಿಲನ ವಿಷಯ ತಿಳಿದು ಸಂತಸವಾಯಿತು. ಅಮ್ಮ ಮತ್ತು ಡಿ.ಎನ್.ಎ. ನೈಜ ಅನುಭವದ ಜೊತೆಗೆ ಪ್ರಾಣಿಗಳಿಗೆ ಯಾವ ಸ್ಥಾನಮಾನ ನೀಡಿದ್ದರೆಂಬುದು ಅರ್ಥವಾಗುತ್ತದೆ. ಮಾನವನಿಗಿಂತ ಪ್ರಾಣಿಯೇ ಮೇಲು ಎಂಬ ಭಾವನೆ ಮೂಡುತ್ತದೆ. ತಾಯಿಯ ಸ್ಥಾನ ಎಷ್ಟು ಉನ್ನತವೆಂಬುದು ತಿಳಿಯುತ್ತದೆ. ಕಪೋತಗಿರಿಯ ಗತವೈಭವ ಸಂಭ್ರಮ ವಿಚಾರ ಶ್ಲಾಘನೀಯವಾದುದು. ಹವ್ಯಾಸಿ ರಂಗಭೂಮಿ ಮತ್ತು ಮಹಿಳೆ ಅನುಭವದ ಮಾತು. ಸಾಧನೆಗೆ ತಕ್ಕ ಫಲ. ಭಾಷೆ ಮತ್ತು ಮಾಧ್ಯಮ ಅವರವರ ಭಾವಕ್ಕೆ ಅವರವರ ಭಕುತಿಗೆ ಎಂಬಂತೆ ಇದ್ದರೆ ಚೆನ್ನ. ಒತ್ತಡ ಹೇರುವುದು ಸರಿಯಲ್ಲ.

ವಿಠಲಾಪುರ **ಪಾಂಡವಪುರ ಮೃತ್ಯುಂಜಯ**

### ಡಾ|| ಅಂಬೇಡ್ಕರ್ ಮಹಾನ್

ಡಾ|| ಅಂಬೇಡ್ಕರ್ ಮಹಾನ್ ಅಂದು ಇಂದು ಎಂದೆಂದಿಗೂ ಪ್ರಸ್ತುತ. ೫೫ ವರ್ಷಗಳ ಸ್ವಾತಂತ್ರ್ಯದ ನಂತರವೂ ದೀನ ದಲಿತರ ಆಶೋತ್ತರಗಳಿಗೆ ದನಿಯಾಗಿ ತನ್ನ ಇರುವಿಕೆಯನ್ನು ಸಾದರಪಡಿಸುತ್ತಿರುವ ಡಾ|| ಅಂಬೇಡ್ಕರ್‌ರವರನ್ನು ಇಂದಿನ ರಾಜಕಾರಣಿಗಳು ದೇಶದ ಉದ್ದಗಲಕ್ಕೂ ಪ್ರತಿಷ್ಠಾಪಿಸಿ, ತಮ್ಮ ಹೊಲಸು ರಾಜಕೀಯ ದಾಳವಾಗಿ ಪರಿವರ್ತಿಸಿಕೊಂಡಿರುವುದು ಖೇದಕರ. ಭಾರತ ದೇಶದ ದಲಿತೋದ್ಧಾರದ, ಭಾವೈಕ್ಯತೆಯನ್ನು ಸಾರಿ ದಲಿತರ ಸ್ವಾಭಿಮಾನದ ಬಾಳಿಗೆ ದಾರಿ ತೋರಿದ ಈ ಮಹಾನ್ ಚೇತನ ಬಡವರ ಉದ್ಧಾರಕ್ಕಾಗಿ, ಶೋಷಣೆಗೆ ಒಳಗಾದ ಜನರಿಗಾಗಿ, ಹೋರಾಡಬೇಕೆಂದು ಸಾರಿದ ಪ್ರಜಾಪ್ರಭುತ್ವವಾದಿ. ಅಂಬೇಡ್ಕರ್ ಇತಿಹಾಸದ ಪುಟಗಳಲ್ಲಿ ಮಾತ್ರ ಇರದೆ ನಮ್ಮ ನಡುವೆ ಇಂದಿಗೂ ಚಿರಸ್ಥಾಯಿಯಾಗಿ ಉಳಿದಿದ್ದಾರೆ.

ತುಮಕೂರು **ಲಿಖಿತಸ್ವಾಮಿ ಹೆಚ್. ಆರ್., ಉತ್ತುಂಗ ಹೆಚ್. ಆರ್.**




ಶ್ರೀ ಸಿ. ಎಚ್. ಜಾಕೋಬ್ ಲೋಬೊ ಅವರ ಲೇಖನ ಅರ್ಥಪೂರ್ಣವಾಗಿ ಮೂಡಿಬಂದಿದೆ. 'ಅರಿತುಕೊಳ್ಳಲು ಅಸಮರ್ಥರಾದ ಸಂಪ್ರದಾಯವಾದಿಗಳಿಗೆ' ಅವರೊಬ್ಬ ಅಸ್ಪೃಶ್ಯರ ಮುಂದಾಳಾಗಿ ಮಾತ್ರ ಕಾಣಿಸುತ್ತಾರೆ. ಆದರೆ ಅವರೊಬ್ಬ ಮಹಾನ್ ಮಾನವತಾವಾದಿ, ರಾಷ್ಟ್ರಪ್ರೇಮಿ. ಎಲ್ಲಾ ಶೋಷಿತರ ಸಂರಕ್ಷಣೆಯ 'ಹರಿಕಾರ' ಎಂಬುದನ್ನು ಲೇಖಕರು ತುಂಬಾ ಚೆನ್ನಾಗಿ ವಿವರಿಸಿದ್ದಾರೆ.

ಮೈಸೂರು **ಶೋಭಾ ಧರ್ಮೇಶ್**

### ಗಾಂಧೀಜಿಯ ನೆನಪಿನಲ್ಲಿ

ಜಗತ್ತಿನ ಎಲ್ಲಾ ನಾಗರಿಕತೆಗಳಿಗೂ, ಹಾಗೂ ಎಲ್ಲಾ ಕಾಲಕ್ಕೂ ಸರಿಹೊಂದುವಂತಹ ವಿಚಾರಗಳನ್ನು ಪ್ರತಿಪಾದಿಸಿ ಅದರ ಸಾಕಾರತೆಗಾಗಿ ಜೀವನವನ್ನು ಮುಡಿಪಾಗಿಟ್ಟ ಮಾನವಶ್ರೇಷ್ಠ ಗಾಂಧೀಜಿಯ ಬಗ್ಗೆ ಅತ್ಯಂತ ಚಿಕ್ಕದಾದರೂ ಚೊಕ್ಕವಾದ ಸಕಾಲಿಕ ಲೇಖನವನ್ನು ಪ್ರಕಟಿಸಿದ್ದೀರಿ. ರಾಜಕೀಯ, ಧಾರ್ಮಿಕ, ಸಾಮಾಜಿಕ, ವೈಜ್ಞಾನಿಕ, ಶಿಕ್ಷಣ, ಕೈಗಾರಿಕೆ ಹಾಗೂ ಆರ್ಥಿಕ ರಂಗಗಳಿಗೆ ಸಂಬಂಧಪಟ್ಟಂತೆ ಅತ್ಯಂತ ಸರಳ ತತ್ತ್ವಗಳನ್ನು ತಿಳಿಸಿ ಬಡತನ ನಿರ್ಮೂಲನ, ಆರೋಗ್ಯ ಹಾಗೂ ಶುಚಿತ್ವಗಳಲ್ಲಿ ಮಾನವರು ಅಳವಡಿಸಿಕೊಳ್ಳಬಹುದಾದ ವ್ಯವಸ್ಥಿತ ವಿಧಾನಗಳನ್ನು ವಿವರಿಸಿ ಸರಳ ಬದುಕೆಂದರೆ ತನ್ನದೇ ಆದ ಬಾಳು ಎಂಬ ನಿದರ್ಶನದೊಂದಿಗೆ ಬದುಕಿದ ಗಾಂಧೀಜಿ ಕ್ಷಣ ಕ್ಷಣಕ್ಕೂ ನೆನಪಾಗುವ ದಾರ್ಶನಿಕ. ಅವರು ಕೇವಲ ದೇಶದ ಸ್ವಾತಂತ್ರ್ಯ ಹೋರಾಟಗಾರರಾಗಿದ್ದರು ಎಂಬ ವಿಚಾರವನ್ನು ಮಾತ್ರ ಭಾರತೀಯ ಯುವಕರಿಗೆ ವಿವರಿಸಿ ರಾಜಕೀಯ ಲಾಭಗಳಿಗಾಗಿ ಗಾಂಧಿ ಪ್ರತಿಮೆಗಳನ್ನು ಬಳಸಿಕೊಳ್ಳುವ ಭಾರತೀಯರು ಗಾಂಧೀಜಿಯ ಬಗ್ಗೆ ಹಚ್ಚಿಗ ತಿಳಿಸುವ ಪ್ರಯತ್ನ ಮಾಡದೇ ಇರುವುದು ಎಲ್ಲಾ ಸಮಸ್ಯೆಗಳಿಗೇ ಮೂಲಕಾರಣವಾಗಿದೆ. ಭೋಗ ಸಂಸ್ಕೃತಿಯಲ್ಲಿ ತಮ್ಮನ್ನು ತಿಳಿದುಕೊಳ್ಳುತ್ತಿರುವ ಭಾರತೀಯರು ಇಂದು ದೇಶ ಆರ್ಥಿಕವಾಗಿ ಬಲಿಷ್ಠವಾಗಿದೆ ಎಂಬ ಪೊಳ್ಳು ವದಂತಿಗಳನ್ನು ಸುದ್ದಿ ಮಾಧ್ಯಮದಲ್ಲಿ ವೈಭವೀಕರಿಸುತ್ತಿರುವುದರ ಬಗ್ಗೆ ತಿಳಿಯಲು ಹಳ್ಳಿಯ ನೀರಿನ, ರಸ್ತೆಯ ಹಾಗೂ ಆರೋಗ್ಯ ವ್ಯವಸ್ಥೆಗಳ ಬಗ್ಗೆ ನೋಡಿದಾಗ ಮನವರಿಕೆಯಾಗುತ್ತದೆ ನಮ್ಮ ಭ್ರಾಂತಿ.

ಬೆಂಗಳೂರು **ನರೇಂದ್ರ ಸಿರಕಜೆ**

### ಉಸಿರಾಟ

ಶ್ರೀ ರಾಧಾರಮೇಶ ಅವರು ಬೆಳೆಸಿರುವ ತರ್ಕ ನೋಡಿದರೆ ಮಾನವನ ಶರೀರಕ್ಕೆ ಯಾವ ವ್ಯಾಯಾಮವೂ ಅನಗತ್ಯ, ಶರೀರಕ್ಕೆ ಬೇಕಾದ್ದನ್ನೆಲ್ಲಾ ನಿಸರ್ಗವೇ ಅಳವಡಿಸಿದೆ, . ಎಂಬ ಅಭಿಪ್ರಾಯ ಮೂಡುತ್ತದೆ. ಹಾಗಿದ್ದರೆ ಆರೋಗ್ಯದ ವ್ಯತ್ಯಯ ಏಕುಂಟಾಗುತ್ತದೆ? ತುಕ್ಕು ಹಿಡಿಯಲು ಬಿಡದಂತೆ ಶರೀರವನ್ನು ಪೋಷಿಸುವುದು ಅನಾರೋಗ್ಯವನ್ನು ದೂರವಿಡಲು ಇರುವ ಒಂದು ಹಾದಿ. ಮನಸ್ಸನ್ನು ನಿಗ್ರಹಿಸುವುದು ಬೇಡ, ಆದರೆ ನಿಯಂತ್ರಿಸುವುದೂ ಬೇಡವೆ? ಪ್ರಾಣಾಯಾಮ ಮುಂತಾದ ಉಸಿರಾಟದ ಪದ್ಧತಿಗಳು ಆರೋಗ್ಯವರ್ಧಕಗಳೆಂದು ವೈಜ್ಞಾನಿಕವಾಗಿಯೇ ಸಾಬೀತಾಗಿದೆ, ನಿಷ್ಣಾತ ವೈದ್ಯರೂ ಅದನ್ನು ಒಪ್ಪಿದ್ದಾರೆ. ಆ ಬಗ್ಗೆ ನಡೆದಿರುವ ಸಂಶೋಧನೆಗಳು ಬೇಕಾದಷ್ಟಿವೆ. ರಾಮದೇವನೋ ಕೃಷ್ಣದೇವನೋ ಉಸಿರಾಟವನ್ನು ಕುರಿತು ಹೇಳುವುದಷ್ಟನ್ನೇ ನೋಡಿ ತೀರ್ಮಾನಕ್ಕೆ ಬರುವುದು ಬೇಡ, ನಿಸರ್ಗದ ನಿಯಮಗಳಿಗೆ ಹೊರತಾದದ್ದು ಪ್ರಾಣಾಯಾಮ ಎಂಬ ತೀರ್ಮಾನಕ್ಕೆ ರಾಧಾರಮೇಶರು ಬರಬೇಕಾಗಿಲ್ಲ.

ಮಡಿಕೇರಿ **ಎಸ್. ಆರ್. ವಸುಧಾ**

೩ನೇ ಪುಟದಿಂದ... (ಈ ತಿಂಗಳು)

ಅವಶ್ಯಕ. ಮಾನ್ಯ ಅನಂತಮೂರ್ತಿಯವರ ಎಲ್ಲ ಕ್ರಮಗಳನ್ನೂ ಸಮರ್ಥಿಸುವುದು ಇದರ ಉದ್ದೇಶವಾಗುವುದಿಲ್ಲ. ಮೂಲತಃ ಲಂಡನ್ನಿನ ಬ್ಲೇರ್ ಸರ್ಕಾರ ಮಾಡುವಂತೆ ಹಣವನ್ನು ಪಡೆದು ಒಬ್ಬ ಅಭ್ಯರ್ಥಿಯನ್ನು ರಾಜ್ಯಸಭಗೆ ಕಳಿಸುವುದು ಸರಿಯೇ ಎಂಬುದು ಪ್ರಶ್ನೆ. ಹಾಗೆ ಹಣದ ಚೀಲ ಹಿಡಿದು ನುಗ್ಗಿಬಂದವರ ಪರವಾಗಿ ನಿಲ್ಲುವುದು ಸಮರ್ಥನೀಯವೆ? ಕನ್ನಡದ ಹೆಸರು ಹೇಳಿದರೆ ತಾವು ಪಾವನರಾಗುವುದಾಗಿ ಅನಂತಮೂರ್ತಿಯವರು ಎಣಿಸಿದ್ದರೆ ಅದು ಅವರ ಭ್ರಮೆ. ಅವರು ಗೆದ್ದಿದ್ದರೆ ಕನ್ನಡ ವಿಜಯಿಯಾಗುತ್ತಿತ್ತೋ ಇಲ್ಲವೋ, ಆದರೆ ಹಣದ ಮದವು ಸೋಲುಣ್ಣಬೇಕಾಗುತ್ತಿತ್ತು. ನಮ್ಮನ್ನು ಪ್ರತಿನಿಧಿಸುವ ಉದ್ಯಮಪತಿಗಳ ಚಾರಿತ್ರ್ಯ ಎಂಥದ್ದೆಂಬುದನ್ನು ತಿಳಿಯಲು 'ಇಂಡಸ್ ಫಿಲ' ಎಂಬ ಇನ್ನೊಂದು ಉದ್ಯಮದ ದೊರೆಗಳ ಪರಾಕ್ರಮವನ್ನು ಅರಿಯಬೇಕು. ರಾಜೀವನೆಂಬ ಉದ್ಯಮಶ್ರೇಷ್ಠನೂ ನಾಳೆ ಅದನ್ನೇ ಮಾಡುತ್ತಾನೆ, ನಿನ್ನೆಯೂ ಹಾಗೆಯೇ ಮಾಡಿದ್ದ. ಅದನ್ನು ಅರಿಯುವುದಕ್ಕೆ ಸಾಮಗ್ರಿ ಇಲ್ಲದಿದ್ದರೆ ಮೀನಾಕ್ಷಿಸುಂದರಂ ಎಂಬ ಕಾರ್ಮಿಕ ನಾಯಕರನ್ನು ಕೇಳಿದರೆ ಗೊತ್ತಾಗುತ್ತದೆ. ಕಾರ್ಮಿಕರನ್ನು ಭೇಟಿಯಾಗಲು ಕಾರ್ಖಾನೆಯ ಬಳಿ ಹೋಗಿದ್ದಾಗ ಅವರನ್ನು ಅಪಹರಿಸಿ ಚೆನ್ನಾಗಿ ಹೊಡೆದು ಬಡಿದು ಬಿಸಾಟರು. ಅದಕ್ಕೆ ಗೂಂಡಾಪಡೆಯನ್ನು ಬಳಸಲಾಗಿತ್ತೆಂದು ಹೇಳಲಾಗಿದೆ. ನಮ್ಮ ಮಾಧ್ಯಮಗಳಿಗೆ ಇದು ಮಹತ್ವದ ವಿಷಯವಲ್ಲ. ಅವು ದೇವೇಗೌಡ – ಯಡಿಯೂರಪ್ಪ – ಪ್ರಕಾಶ್ ಮುಂತಾದ ಸಭ್ಯರ ರತ್ನದಂತಹ ನುಡಿಗಳನ್ನು ಕೇಂದ್ರೀಕರಿಸುವುದರಲ್ಲೇ ತೃಪ್ತಿ ಪಡೆಯುತ್ತವೆ. ಆಂಧ್ರಪ್ರದೇಶದ ಗಂಗವರಂನಲ್ಲಿ ಮೀನುಗಾರರನ್ನು, ಅವರ ಕುಟುಂಬಗಳನ್ನು, ಪೊಲೀಸರು ಸದೆಬಡಿದರು. ಅದು ಗುರ್‌ಗಾಂವ್ ಪಾತಕಗಳ ಮುಂದುವರಿಕೆಯಂತೆ ತೋರಿತು. ಎಲ್ಲಾ ಏತಕ್ಕೆ? ಖಾಸಗಿ ಉದ್ಯಮಪತಿಗಳ ಜೇಬು ತುಂಬಲು ಮತ್ತು ಅವರನ್ನು ಗೌರವಾನ್ವಿತ ವ್ಯಕ್ತಿಗಳನ್ನಾಗಿ ಮಾಡಲು! ಗಂಗವರಂನಲ್ಲಿ ಯಾವನೋ ದುರಾತ್ಮನು ಖಾಸಗಿ ಬಂದರು ನಿರ್ಮಿಸಿಕೊಳ್ಳಲು ಮೀನುಗಾರರನ್ನು ಒಕ್ಕಲೆಬ್ಬಿಸುವುದು ನಮ್ಮ ಪ್ರಭುತ್ವದ ದುರಂತಗಳ ಸರಮಾಲೆಗೆ ಒಂದು ನಿದರ್ಶನ, ಅಷ್ಟೆ. ಅದು ಬರುವ ದಿನಗಳಲ್ಲಿ ಮಂಗಳೂರಿನ ಬಳಿಯ ಕೆಲವು ಹಳ್ಳಿಗಳ ಅನುಭವಕ್ಕೂ ಬರಲಿದೆ. ನರ್ಮದಾ ಅಣೆಕಟ್ಟಿನ ಸಂದರ್ಭದಲ್ಲಿದ್ದಂತೆ ಇಲ್ಲಿಯೂ ಜನರ ಪುನರ್ವಸತಿಯ ಪ್ರಶ್ನೆಯನ್ನು ದೂರಮಾಡಿ ಉದ್ಯಮವೊಂದರ ಸ್ಥಾಪನೆ ಆಗಬೇಕಾಗಿದೆ. ನಮ್ಮಲ್ಲಿ ನೈಸ್ ಅಲ್ಲದ 'ನೈಸ್ ಕಂಪನಿ'ಗೆ ನ್ಯಾಯಾಲಯದ ಬೆಂಬಲ ದೊರೆತಿದೆ. ಉದ್ಯಮವೇ ಬೇಡವೆಂದು ಇದರರ್ಥವಲ್ಲ; ಪುನರ್ವಸತಿಯ ಕಾರ್ಯಕ್ರಮವನ್ನು ಸರಿಯಾಗಿ ಅನುಷ್ಠಾನಕ್ಕೆ ತರಬೇಕೆಂಬುದು ಆದ್ಯತೆಯ ಪ್ರಶ್ನೆ, ಅಷ್ಟೆ. ಮಧ್ಯಪ್ರದೇಶ, ರಾಜಸ್ಥಾನ, ಗುಜರಾತುಗಳಲ್ಲಿ ಮಧ್ಯವರ್ತಿ ನುಂಗಣ್ಣಗಳು ಪುನರ್ವಸತಿಯ ಹಣವನ್ನೆಲ್ಲಾ ತಮ್ಮದು ಮಾಡಿಕೊಂಡು, ಆಮೇಲೆ ಅದನ್ನು ಬೊಟ್ಟುಮಾಡಿ ತೋರಿಸಿದರೆ ಶ್ರೀಮತಿ ಮೇಧಾ ಪಾಟ್ಕರರ ಮೇಲೆ ಗೂಳಿಗಳಂತೆ ನುಗ್ಗುತ್ತಾರೆ ಮತ್ತು ನರಮೇಧೇಂದ್ರ ಮೋದಿ ನಾಟಕೀಯವಾಗಿ ಉಪವಾಸ ಕೂರುತ್ತಾರೆ. ಇಲ್ಲವೇ, ಅಮೀರ್ ಖಾನನಂತಹವರು ಸಿನಿಮೀಯವಾಗಿ ಜನರ ಗೋಳಿಗೆ ಸ್ಪಂದಿಸುವಂತೆ ನಟಿಸುತ್ತಾರೆ. ಈ ಸಿನಿಮಾ ನಾಯಕನಿಗೆ ಈವರೆಗೆ ಭೋಪಾಲ್ ಮತ್ತು ನರ್ಮದಾ ಜನರ ಬವಣೆ ತಿಳಿದಿರಲಿಲ್ಲವಂತೆ. ಈಗ ಆಕಸ್ಮಿಕವಾಗಿ ದೆಹಲಿಯ ಜಂತರ್-ಮಂತರ್ ಬಳಿ ಕುಳಿತಿದ್ದ ಸಂತ್ರಸ್ತರನ್ನು ಕಂಡು ಮನಸ್ಸು ಉಕ್ಕಿಬಂದು ಅವರೊಡನೆ ಸಂವಾದ ನಡೆಸಿ ಬೆಂಬಲ ವ್ಯಕ್ತಪಡಿಸಲು ತವಕಿಸುತ್ತಾನೆ. – ಅಂದರೆ, ತನ್ನ ಯಾವುದಾದರೂ ಸಿನಿಮಾ ಬೋರಲು ಹಾಕಿಕೊಂಡರೆ ಅಮೀರ್ ಖಾನ್ ಸಹ ಮಗನ ಅಪ್ಪ ದೇವೇಗೌಡರಂತೆ ಜನರಿಗಾಗಿ ಕಣ್ಣೀರು ಸುರಿಸುತ್ತಾನೆ. ಅದೇ ಮಾದರಿಯ ರಾಜೀವನನ್ನು ನಮ್ಮ ರಾಜ್ಯದ ಶಾಸಕರು ರಾಜ್ಯಸಭೆಗೆ ಕಳಿಸುತ್ತಾರೆ! ಅಂತಹ ಮೋಸಗಳನ್ನು ಮೊಟಕುಗೊಳಿಲು ನಮ್ಮ ಶಾಸಕರು ಹಣದ ಆಮಿಷಕ್ಕೆ ತುತ್ತಾಗಬಾರದಿತ್ತು, ಆದರೆ ಆದರು. ಅದು ಒಂದರ್ಥದಲ್ಲಿ ಜನರ ಆಶಯಗಳ ಸಾವು.

ಇನ್ನೊಬ್ಬ ಭಾರಿ ಉದ್ಯಮಪತಿ ಶ್ರೇಷ್ಠರೆಂದರೆ ನಾರಾಯಣಮೂರ್ತಿಗಳು. ಭೂಕಬಳಿಕೆಗೆ ಹೆಸರಾದ ರಾಜಕೀಯ ಧುರೀಣರನ್ನು ಮೀರಿಸುವ ಚಾಕಚಕ್ಯತೆ ಇವರಿಗಿದೆ. ಜನರನ್ನು ಬೆದರಿಸಿ ಹಣ ಕಿತ್ತುಕೊಳ್ಳುವ ದರೋಡೆಗಾರರಂತೆ 'ಕರ್ನಾಟಕದ ಜನೋಪಕಾರಿ' ಇನ್ಫೋಸಿಸ್ ಮೂರ್ತಿಗಳು ಸರ್ಕಾರವನ್ನು ಬೆದರಿಸಿ ಭೂಮಿ ಪಡೆದುಕೊಳ್ಳುತ್ತಾರೆ. ಬೆಂಗಳೂರಿನಲ್ಲಿ ಈಚೆಗೆ ೮೪೫ ಎಕರೆ ಭೂಮಿಯನ್ನು ತಮ್ಮದಾಗಿಸಿಕೊಂಡ ವಿಚಕ್ಷಣೆ ಇವರದು. ಮೊದಲೇ ಇದ್ದುದನ್ನು ಬಿಟ್ಟು ಈಗಿನ ಹೊಸ ಗಳಿಕೆ ಇದು. ಮೈಸೂರು-ಮಂಗಳೂರುಗಳಲ್ಲಿ ಇವರದು ಆರುನೂರು ಎಕರೆ ಭೂಮಿ ಇರಬಹುದು. ನಾಳೆ ಅವರ ಉದ್ಯಮ ಕುಸಿದರೆ ಮೂರ್ತಿಗಳು ಬೀದಿಗೆ ಬೀಳಬೇಕಾಗಿಲ್ಲ; ಎಸ್ಟೇಟ್ ಅಭಿವೃದ್ಧಿ ಉದ್ಯಮವನ್ನು ಆರಂಭಿಸಬಹುದು! ಎರಡು ಎಕರೆ ಜಮೀನಿನಲ್ಲಿ ಬಹು-ಅಂತಸ್ತುಗಳ ಒಂದಷ್ಟು ಕಟ್ಟಡಗಳಿದ್ದರೆ ಸಾಕು, ಇವರ ಉದ್ಯಮಕ್ಕೆ. ಆದರೆ ಅದಾಗದು, ಇವರಿಗೆ ಸಾವಿರಾರು ಎಕರೆ ಭೂಮಿ ಬೇಕು. ಮೂರ್ತಿ ಕಂಪನಿಯಲ್ಲಿ ವ್ಯವಹಾರ ಚತುರನಾಗಿ ಕೆಲಸಮಾಡುತ್ತಿದ್ದ ಪೈಗೆ ಈಗ ಬಡ್ತಿ ಸಿಕ್ಕಿದೆ. ''ಬೆಂಗಳೂರು ಸರಿಯಿಲ್ಲ, ನಮಗೆ ಹೈದರಾಬಾದೇ ಉತ್ತಮ'' ಎಂದು ಪತ್ರಿಕೆಗಳಿಗೆ ಹೇಳಿಕೆ ನೀಡಿದ್ದಕ್ಕಾಗಿ ಈ ಬಡ್ತಿಯೋ ಎಂದು ತಿಳಿಯದು. ಒಂದಂತೂ ನಿಜ: ಹೈದರಾಬಾದಿನಲ್ಲಿ ಇವರಿಗೆ ೧೫೦೦ ಎಕರೆ ಭೂಮಿ ಕೊಡುವಂತಹ ಸರ್ಕಾರವಿಲ್ಲ. ಮೂರ್ತಿ – ಪೈ ಅವರಂತೆ ಬೆದರಿಕೆ ಹಾಕುವವರು ಕೇಂದ್ರ ಸಚಿವ ಅರ್ಜುನ ಸಿಂಗರನ್ನು ಮೂದಲಿಸುತ್ತಿದ್ದಾರೆ. ಏಕೆಂದರೆ, ಇಂಡಿಯನ್ ಇನ್‌ಸ್ಟಿಟ್ಯೂಟ್ ಆಫ್ ಟೆಕ್ನಾಲಜಿಗಳಲ್ಲಿ ಹಿಂದುಳಿದವರಿಗೆ ಪ್ರವೇಶಕ್ಕೆ ಸ್ವಲ್ಪ ಅವಕಾಶ ಕಲ್ಪಿಸಬೇಕೆಂದು ಅವರು ಹೇಳಿದರು. ನಮ್ಮ ಪ್ರತಿಷ್ಠಿತರಿಗೆ ಇದು ಕಾರ್ಕೋಟಕ ವಿಷದಂತೆ ಗೋಚರಿಸುತ್ತದೆ. ಅವರಿಗೆ ಹೇಳಬೇಕಾದ್ದಿದು: ಇವೆಲ್ಲಾ ಐಐಟಿಗಳೂ ಪೂರ್ತಿಯಾಗಿ ಸರ್ಕಾರದ, ಅಂದರೆ ಸಾರ್ವಜನಿಕರ, ಹಣದಿಂದ ನಡೆಯುತ್ತವೆ; ಆದ್ದರಿಂದ ಸಾರ್ವಜನಿಕರ ಎಲ್ಲ ವಿಭಾಗಗಳಿಗೂ ಇಲ್ಲಿ ಪ್ರವೇಶವಿರಬೇಕು. ಅದು ಅಪಥ್ಯವೆನಿಸಿದರೆ, ನೀವು (ಅಂದರೆ ಶ್ರೀಮಂತ ಬುದ್ಧಿವಂತರು, ಪ್ರತಿಷ್ಠಿತರು) ನಿಮ್ಮದೇ ಹಣದಿಂದ ಖಾಸಗಿಯಾಗಿ ಐಐಟಿಗಳಿಗೆ ಸಮಾನವಾದ ಶಿಕ್ಷಣ ಸಂಸ್ಥೆಗಳನ್ನು ಸ್ಥಾಪಿಸಿಕೊಂಡು ಅಲ್ಲಿ ನೀವು ನೀವೇ ಓದಿಕೊಂಡು ಪಾರಂಗತರಾಗಿ, ಆಮೇಲೆ ಅಮೆರಿಕಾಕ್ಕೆ ಹೋಗಿ, ಎಂದು. ಅರ್ಹತೆಗೆ ಮನ್ನಣೆಕೂಡದೆಂದು ಯಾರೂ ಹೇಳುತ್ತಿಲ್ಲ; ಹೇಳುತ್ತಿರುವುದು ಇನ್ನೂ ಹೆಚ್ಚು ಜನ ಅರ್ಹತೆ ಗಳಿಸುವಂತಾಗಬೇಕು, ಎಂದು. ''ಅರ್ಹತೆ'' ಎಂಬುದು ಒಂದು ವರ್ಗಗುಣವಾಗಿ ಹೋಗಿರುವ ಸಂದರ್ಭ ನಮ್ಮದು. ಅಂದರೆ, ಹೆಚ್ಚು ಸೌಲಭ್ಯವಿರುವವರು ಹೆಚ್ಚು ಅರ್ಹತೆ ಪಡೆಯುತ್ತಾರೆ. ಝೋಪಡಿಗಳಲ್ಲಿ ವಾಸಿಸುತ್ತಾ, ಸೀಮೆಯೆಣ್ಣೆ ಬುಡ್ಡಿಗಳ ಬೆಳಕಿನಲ್ಲಿ ಓದುವಾಗ ಹಸಿದು ಕಂಗಾಲಾಗುವವರು ಸಹಜವಾಗಿಯೇ ಕಡಿಮೆ ಅರ್ಹತೆ ಪಡೆಯುತ್ತಾರೆ. ಈ ವರ್ಗಾಧಾರಿತ ಅರ್ಹತೆ ಇಲ್ಲವಾಗುವಂತೆ ಮಾಡಲು ಏನಾದರೂ ಕ್ರಮ ಕೈಗೊಂಡರೆ ಶ್ರೀಮಂತರೆಲ್ಲಾ ಅರಚಿಕೊಳ್ಳುತ್ತಾರೆ, ಅದು ಪತ್ರಿಕೆಗಳಲ್ಲಿ ಪ್ರತಿಧ್ವನಿಸುತ್ತದೆ. ಗೋಳಿಡುವವರ ಧ್ವನಿಗೆ ಪ್ರಚಾರ ಕೊಡುವ ಮಾಧ್ಯಮಗಳನ್ನು ಸೃಷ್ಟಿಸುವುದು ಹೇಗೆ? 'ಖಾಸಗಿ' ಎಂಬುದು ಶ್ರೇಷ್ಠ ಎನ್ನುವುದಾದರೆ ಶ್ರೀಮಂತರು ತಮ್ಮದೇ ಆದ ಖಾಸಗಿ ಶ್ರೇಷ್ಠ ವಿದ್ಯಾಲಯಗಳನ್ನು ತೆರೆದುಕೊಂಡು ಸರ್ಕಾರಿ ಸಂಸ್ಥೆಗಳನ್ನು ಬಿಟ್ಟುಬಿಡಲಿ. ನಾರಾಯಣಮೂರ್ತಿ ಪರಿವಾರದವರು ಇದಕ್ಕೆ ಸಿದ್ಧರಿದ್ದಾರೆಯೇ? ಇಲ್ಲ, ಏಕೆಂದರೆ ನೂರು ಅಡಿ ರಸ್ತೆ

### ಫಿಸಿಕ್ಸ್ ಮತ್ತು ಐನ್‌ಸ್ಟೈನ್

ಶ್ರೀ ಅಡ್ಯನಡ್ಕ ಕೃಷ್ಣಭಟ್ಟರ ಈ ಕೃತಿ ಓದತೊಡಗಿದಾಗ ಕೊನೆಮುಟ್ಟುವವರೆಗೆ ಕೆಳಗಿಡಲು ಮನಸ್ಸು ಬರಲಿಲ್ಲ. ಪಂಚೇಂದ್ರಿಯಗಳ ಮೂಲಕ ನಾವು ಅನುಭವಿಸುವ ಪ್ರಕೃತಿ ಬಹಳ ಸುಂದರವಾದುದು. ಶ್ರೀ ಕೃಷ್ಣಭಟ್ಟರು ಪ್ರಾರಂಭದಲ್ಲಿಯೇ ಮಳೆಯನ್ನೂ – ಓದುಗರು ಬೆರಗಾಗುವಂತೆ – ವಿವರವಾಗಿ ತದ್ವತ್ತಾಗಿ ವರ್ಣಿಸುತ್ತಾರೆ. ನಾನೇನು ಕಾದಂಬರಿ ಓದುತ್ತಿದ್ದೇನೆಯೋ ಎಂಬ ಸಂದೇಹವುಂಟಾಗುತ್ತದೆ. ಹಿಮ, ಆಕಾಶ, ಚಂದ್ರ, ಸೂರ್ಯರು, ನಕ್ಷತ್ರ ನೀಹಾರಿಕೆಗಳವರೆಗೆ ಅವರೊಡನೆ ನಮ್ಮ ಮನಸ್ಸು ಹಾರಿ, ಪ್ರಕೃತಿಯ ಅಂತರಾರ್ಥವನ್ನೂ ತಿಳಿಯಬಯಸುತ್ತದೆ. ಸರಳವೂ ಆಳವೂ ಆದ ಪ್ರಶ್ನೆಗಳನ್ನೆತ್ತಿ ಅದಕ್ಕೆ ಉತ್ತರಗಳನ್ನು ಹೇಳುತ್ತ, ಪ್ರಪಂಚದಲ್ಲಿ ಇದುವರೆಗೆ ಬಾಳಿ ಸತ್ವಶೋಧನೆ ಮಾಡಿದ ವಿಜ್ಞಾನಿಗಳ ಪ್ರಯತ್ನ-ಸಫಲತೆಗಳನ್ನು ಒಂದೊಂದೇ ಬೀಸಾದ ಅಧ್ಯಾಯಗಳಲ್ಲಿ ತಿಳಿಸಿ, ಸೂಕ್ತವಾದ ನಗೆಯೆಬ್ಬಿಸುವ ಚಿತ್ರಗಳಿಂದ ಅವನ್ನು ಸ್ಪಷ್ಟಪಡಿಸುತ್ತ ಐನ್‌ಸ್ಟೈನನ ಕಡೆಗೆ ತಲಪುತ್ತಾರೆ. ವಿಜ್ಞಾನಿಗಳು ಸೌಂದರ್ಯವನ್ನೂ ಕಂಡು ಆನಂದಿಸಿ, ಅದರಂತರಾಳದಲ್ಲಿರುವ ಸತ್ಯವನ್ನೂ ಅರಿತು ತಿಳಿಸಬಲ್ಲರು. ಪ್ರಕೃತಿಯ ಅನಂತ ರೂಪವನ್ನು ಕಂಡು ಆನಂದಿಸಿ, ಆಲೋಚಿಸಿ, ಅಡಗಿರುವ ರಹಸ್ಯವನ್ನೂ ಅರಿಯುವುದರಲ್ಲಿ ಅಪರಿಮಿತವಾದ ಆನಂದವಿದೆ. ಸಾಪೇಕ್ಷ ಸಿದ್ಧಾಂತ, ಬೆಳಕು, ಧ್ವನಿಯ ಪ್ರಸರಣ ರೀತಿಗಳು, ಕಾಲದಲ್ಲಿ ಅಡಗಿರುವ ಸತ್ಯಸಂಗತಿಗಳು, ಚಲನೆ-ವಿರಾಮಗಳಲ್ಲಿರುವ ಕೌತುಕದ ಸಂಗತಿಗಳು, ಬೆಳಕಿನ ದುರಂತ, ಜಾಗತಿಕ ಈಥರ್ – ಈ ಅಧ್ಯಾಯಗಳ ಸ್ವಾರಸ್ಯವನ್ನು ಓದಿಯೇ ಅರಿಯಬೇಕು. ಐನ್‌ಸ್ಟೈನನ ಜೀವನ ವೃತ್ತಾಂತ, ಸಾಧನೆಗಳು, ಅವನ ಮಾನವೀಯತೆ, ಪ್ರಕೃತಿ ಪ್ರೇಮಗಳನ್ನು ತಿಳಿಸುತ್ತ, ಋಷಿಸದೃಶನಾದ ಆ ಮಹಾ ವಿಜ್ಞಾನಿಯನ್ನು ಎಣೆಯಿಲ್ಲದ ಮೆಚ್ಚುಗೆಯಿಂದ ನೆನೆಯುತ್ತ ಅವನಿಗೂ ಹೀಗೆಯೇ ವಿಜ್ಞಾನವನ್ನು ಬೆಳೆಸಿದ ಮಹನೀಯರ ಪಾತ್ರ-ಪ್ರಯತ್ನಗಳನ್ನು ಬಣ್ಣಿಸುತ್ತ ಕೃತಿ ಮುಕ್ತಾಯಕ್ಕೆ ಬರುತ್ತದೆ. ಆದರೆ ನಮ್ಮನ್ನೂ ಪುನಃ ಪ್ರಾರಂಭಿಸಿ ಅವಲೋಕಿಸಲು ಪ್ರಚೋದಿಸುತ್ತದೆ.

ಮೈಸೂರು — ಬಿ. ಎಸ್. ರುಕ್ಕಮ್ಮ

ಸಹ ಅವರು ನಿರ್ಮಿಸಿಕೊಳ್ಳಲು ತಯಾರಿಲ್ಲ; ಅದನ್ನೂ ಸಾರ್ವಜನಿಕರ ಹಣದಿಂದ ಮಾಡಿಕೊಡಬೇಕು! ಈ ಹಿನ್ನೆಲೆಯಲ್ಲಿ ಕೃಷ್ಣಪ್ಪನವರಂತಹ ಪೊಲೀಸ್ ತಿಮಿಂಗಿಲಗಳು ೧೨-೧೫ ಕೋಟಿ ರೂಪಾಯಿಗಳ ಆಸ್ತಿ ಮಾಡಿಕೊಂಡರೆ ಒಂದೆರಡು ದಿನಗಳಲ್ಲಿ ನಮ್ಮ ಪತ್ರಿಕೆಗಳು ಅದನ್ನು ಮುಚ್ಚಿಹಾಕಿಬಿಡುತ್ತವೆ. ಅವರ ಕಳ್ಳ ಆಸ್ತಿಯನ್ನು ಸರ್ಕಾರ ಮುಟ್ಟುಗೋಲು ಹಾಕಿಕೊಳ್ಳುವುದಿಲ್ಲ ಮತ್ತು ಅವರು ಜೈಲಿಗೂ ಹೋಗುವುದಿಲ್ಲ. ಇದಕ್ಕೆಲ್ಲಾ ಕಾರಣ ಸರಳವಾಗಿದೆ : ಜೈಲಿನಲ್ಲಿ ಶಾಶ್ವತವಾಗಿ ಉಳಿಯಬೇಕಾದ ವರ್ಗವು ದೇಶದ ಅಧಿಕಾರ ಸ್ಥಾನದಲ್ಲಿದೆ ಮತ್ತು ಸಾಮಾಜಿಕ ನೈತಿಕತೆಯೆಂಬುದು ಆ ವರ್ಗದ ಶಬ್ದಕೋಶದಲ್ಲಿ ಇಲ್ಲ. ಪ್ರಾಸಂಗಿಕವಾಗಿ ಹೇಳಬಹುದಾದರೆ, ಇನ್‌ಸ್ಪೆಕ್ಟರ್ ಕೃಷ್ಣಪ್ಪ ವ್ಯಾಸಂಗ ಮಾಡಿದ ಕಾಲೇಜಿನಲ್ಲೇ ಮುಖ್ಯಮಂತ್ರಿ ಕುಮಾರಸ್ವಾಮಿಯವರು ಸಹ ವ್ಯಾಸಂಗ ಮಾಡಿರುವುದು !

ಪ್ರಜಾಪ್ರಭುತ್ವದ ಅಣಕವನ್ನು ಹಸನು ಮಾಲಿನಂತೆ ಪ್ರದರ್ಶನಕ್ಕಿಡಲು ಆಡಳಿತ ವರ್ಗವು ರಚಿಸಿಕೊಂಡಿರುವ ಇನ್ನೊಂದು ಅಂಗಸಂಸ್ಥೆಯೆಂದರೆ ಚುನಾವಣಾ ಆಯೋಗ. ಅದಕ್ಕೆ ಎಲ್ಲೆಯಿಲ್ಲದ ಅಹಂಕಾರವಿದೆ, ದರ್ಪವಿದೆ. ತನಗೆ ಯಾವ ರೀತಿ-ನಿಯಮಗಳೂ ಇಲ್ಲವೆಂದು ಅದು ಬೇರೆಯವರಿಗೆ ಅರ್ಥರಹಿತವಾದ ಹೀನಾಯ ನಿಯಮಗಳನ್ನು ವಿಧಿಸುತ್ತದೆ. ಸಾರ್ವಜನಿಕರ ಬುದ್ಧಿಮತ್ತೆಗೆ ಸಗಣಿ ಎಸೆಯುವ ಕೆಲಸ ಈ ಆಯೋಗದ್ದು. ಏನು ಮಾಡಬೇಕು, ಏನು ಮಾತನಾಡಬೇಕು ಮತ್ತು ಹೇಗೆ ಎಂಬುದನ್ನೆಲ್ಲಾ ಈ ಆಯೋಗದ ಪ್ರಭುಗಳು ನಿರ್ಧರಿಸುತ್ತಾರೆ. ಚುನಾವಣೆ ಘೋಷಿತವಾದ ನಂತರ ಯಾವುದಾದರೂ ಊರಿನಲ್ಲಿ ನೂರು ಮನೆಗಳು ನೆಲಸಮವಾದರೆ ಅದನ್ನು ಸರ್ಕಾರವು ಸರಿಪಡಿಸಕೂಡದೆಂಬ ನಿಯಮವನ್ನು ಈ ಆಯೋಗ ಯಾವಾಗ ಜಾರಿಗೊಳಿಸುತ್ತದೆಂದು ಕಾದು ನೋಡಬೇಕು! ಹೀಗಿದೆ ಅದರ ಕಾರ್ಯವಿಧಾನ, ಕಾರ್ಯದಕ್ಷತೆ. ಪಶ್ಚಿಮ ಬಂಗಾಳದಲ್ಲಿ ಚುನಾವಣೆ ಸಂದರ್ಭದಲ್ಲಿ ಗೋಡೆ ಬರಹ ಕೂಡದು ಮತ್ತು ಬ್ಯಾನರ್‌ಗಳು ಕೂಡದು ಎಂದಿತು ಆಯೋಗ. ಇನ್ನೇನು ಆಯೋಗದ ತಲೆಯ ಮೇಲೆ ಬರೆಯಲಾಗುತ್ತದೆಯೆ? ಆದ್ದರಿಂದ ಜನ ಏನು ಮಾಡಿದರೆಂದರೆ ತಮ್ಮ ಹಣೆಗಳ ಹಾಗೂ ಪೃಷ್ಠಗಳ ಮೇಲೆ ಪಕ್ಷಗಳ ಚಿಹ್ನೆಗಳನ್ನು ಬರೆದುಕೊಂಡರು! ಚುನಾವಣಾ ಆಯೋಗವು ಯಾವ ದೇಶದಲ್ಲಿದೆ, ಎಂತಹ ಪರಿಸರದಲ್ಲಿದೆ, ಜನರ ಬುದ್ಧಿವಂತಿಕೆ ಎಷ್ಟಿದೆ, ಎಂಬುದನ್ನೆಲ್ಲಾ ತಿಳಿದುಕೊಂಡರೆ ಒಳ್ಳೆಯದು. ''ನಿನಗೆ ಸ್ವರ್ಗ ತೋರಿಸುತ್ತೇನೆ'' ಎಂದು ಹೇಳಿದವರಿಗೆ ಮತ ಚಲಾಯಿಸುವ ಕಾಲ ಆಗಿಹೋಯಿತು. ಆಯೋಗಕ್ಕೆ ಮಾತ್ರ ಅದಿನ್ನೂ ತಿಳಿದಿಲ್ಲ. ತಿಳಿದರೆ ಅಧಿಕಾರ ಚಲಾಯಿಸುವ ದರ್ಪ ಕಡಿಮೆಯಾಗಿಬಿಡುತ್ತದೆ !

ಅಮೆರಿಕಾದ ತೆಕ್ಕೆಯಲ್ಲಿ ಸಿಲುಕಿಕೊಳ್ಳುತ್ತಿರುವ ನಮ್ಮ ದೇಶದ ವಿದೇಶಾಂಗ ಕಾರ್ಯದರ್ಶಿ ಶಾಮ ಶರಣ್ ನಜರು ಒಪ್ಪಿಸಲು ಅಮೆರಿಕಾಕ್ಕೆ ಹೋಗುವುದು ಹೆಚ್ಚುತ್ತಿದೆ. ಹೀಗೇ ಮುಂದುವರಿದರೆ ನಮ್ಮ ವಿದೇಶಾಂಗ ಕಾರ್ಯದರ್ಶಿ ಖಾಯಂ ಆಗಿ ಅಮೆರಿಕಾದಲ್ಲೇ ಉಳಿಯಬೇಕು; ಇನ್ನು ಸ್ವಲ್ಪ ಕಾಲದ ನಂತರ ನಮ್ಮ ದೇಶಕ್ಕೆ ವಿದೇಶಾಂಗ ಸಚಿವಾಲಯವೂ ಬೇಕಾಗದೆ ಹೋಗಬಹುದು. ಕಂಡಾಲಿಸ್ಸ ರೈಸ್ ನೇರವಾಗಿ ತಾನೇ ನಮ್ಮ ವ್ಯವಹಾರಗಳ ಉಸ್ತುವಾರಿ ನೋಡಿಕೊಳ್ಳಲು ಹಿಂದೇಟು ಹಾಕಲಾರಳು. ಶಾಮ ಶರಣ್ ಹೋಗಿ ಅಮೆರಿಕಾದ ಶಾಸಕರನ್ನು ಭೇಟಿಯಾಗುತ್ತಾರಂತೆ, ಪರಮಾಣು ಒಪ್ಪಂದದ ಪರ ನಿಲ್ಲಬೇಕೆಂದು ಅವರ ಮನವೊಲಿಸುತ್ತಾರಂತೆ. ಅದು ಮುಖ್ಯವಾಗಿ ಬುಷ್-ರೈಸ್ ಮಾಡಬೇಕಾದ ಕೆಲಸ. ಅದನ್ನವರು ಮಾಡಲಾಗದಿದ್ದರೆ ಒಪ್ಪಂದವನ್ನು ಹರಿದು ಬೆಂಕಿಗೆ ಹಾಕಬಹುದು. ಅದನ್ನು ಮಾಡದೆ ಮನಮೋಹನ ಸಿಂಗ್ ಸರ್ಕಾರವು ನಮ್ಮ ನಿಲುವನ್ನು ಅಮೆರಿಕಾದ ಶಾಸಕರಿಗೆ ತಿಳಿಸಿ ಅವರನ್ನು ನಮ್ಮತ್ತ ಸೆಳೆಯಲು ಮೂರು ಕಂಪನಿಗಳಿಗೆ ಕಾಂಟ್ರಾಕ್ಟ್ ಕೊಟ್ಟಿದೆ, ಅದಕ್ಕೆ ಕೋಟಿಗಟ್ಟಲೆ ಹಣದ ಅಪವ್ಯಯವಾಗುತ್ತಿದೆ. ಲಂಚ ಕೊಟ್ಟು ಅಮೆರಿಕಾ ಶಾಸಕರ ಬೆಂಬಲ ಪಡೆಯುವ ಅನಿವಾರ್ಯತೆಯುಂಟೆ? ಎರಡು ರಾಷ್ಟ್ರಗಳಿಗೂ ಅನುಕೂಲವಾಗುವ, ಒಪ್ಪಿತವಾಗುವ ಒಪ್ಪಂದ ಅದಲ್ಲದಿದ್ದರೆ ಅದನ್ನು ಬೆಂಬಲಿಸಬೇಕೆಂದು ನಮ್ಮ ದೇಶವೇಕೆ ಮಂಡಿಯೂರಿ ಕುಳಿತುಕೊಳ್ಳಬೇಕೋ ತಿಳಿಯದಾಗಿದೆ. ಹೀಗೆ ದೇಶವನ್ನು ನಾಚಿಕೆಗೆಟ್ಟ ದೇಶವನ್ನಾಗಿ ಪರಿವರ್ತಿಸುತ್ತಿರುವ ಆಳುವ ವರ್ಗಕ್ಕೆ ಧಿಕ್ಕಾರ ಹೇಳಿ ಕುಕ್ರಮಗಳಿಂದ ಹಿಂದೆ ಸರಿಯುವಂತೆ ಮಾಡಬೇಕಾಗಿದೆ.

[signature]




ನಾನೊಂದು ಝರಿ
ಪರ್ವತದಲ್ಲಿ ಹುಟ್ಟಿ
ಹರಿಯಲಾರಂಭಿಸುತ್ತೇನೆ.
ಹಾದಿಯಲ್ಲಿವೆ ಕಲ್ಲು ಮುಳ್ಳು
ಆದರೆ ಒಂದು ದಿನ ಸಾಗರ ಸೇರುವ
ಆಸೆಯಲಿ ಹರಿಯುತ್ತಾ ಹೋಗುತ್ತೇನೆ
ಕಿರಿದಾಗಿ ಹೊರಟ ನಾನು ಕಾಲ ಹೋದಂತೆ
ಮಹತ್ತರದ್ದೇನೋ ಆಗಲು ಹಂಬಲಿಸಿದೆ.

ನಾನೊಂದು ನದಿ
ಶುದ್ಧ ಅಶುದ್ಧ
ನೋವು ನಲಿವುಗಳೆರಡೂ ಇವೆ.
ಕೆಲವರು ನನ್ನಲ್ಲಿ ಮೀಯುತ್ತಾರೆ
ಇನ್ನು ಕೆಲವರು ಬೇಡದ್ದನ್ನು ಎಸೆಯುತ್ತಾರೆ
ನನ್ನ ಗುರಿ ಸಮುದ್ರ : ಮುಟ್ಟುವ
ಹಾದಿಯಲ್ಲಿ ನಾನೆದುರಿಸಬೇಕು
ಎಡರು ತೊಡರು

ನಾನು ಸಮುದ್ರದಂತೆ
ನಿಚ್ಚಳ ಶುದ್ಧ ಮತ್ತು ನಿಷ್ಕಳಂಕ
ಮನಸ್ಸು ಹೃದಯದಲ್ಲಿ
ಜೀವನದೆಲ್ಲಾ ಅನುಭವಗಳನ್ನು ಸೇರಿಸಿಕೊಳ್ಳುತ್ತೇನೆ
ಎಲ್ಲಾ ಝರಿಗಳು ಸೇರುತ್ತವೆ ನನ್ನನ್ನು
ಮುಕ್ತ ಸರಳ ತೆರೆದ ಹೃದಯದವಳು
ನಾನೆಲ್ಲರಿಗು.

ನಾನೊಂದು ಪುಸ್ತಕ
ಒಬ್ಬರು ಬರೆಯುತ್ತಾರೆ
ಮತ್ತೊಬ್ಬರು ಓದುತ್ತಾರೆ
ಕೆಲವರು ನನ್ನನ್ನು ಓದಿ
ಆನಂದಿಸುತ್ತಾರೆ ಮತ್ತೆ
ಕೆಲವರು ಅಳುತ್ತಾರೆ
ಪುಟಗಳಲ್ಲಿ ಮುಚ್ಚಿಹೋಗಿದ್ದೇನೆ ನಾನು
ನೋವು ನಲಿವುಗಳು ಹುದುಗಿವೆ ನನ್ನಲಿ
ಏನನ್ನೂ ಹೇಳದೆ ಬೇರೆಯವರು
ನನ್ನನು ಓದಲು ಬಳಸುತ್ತಾರೆ
ನನ್ನೊಳಗೆ ನಾನು ಮೌನದಿಂದಿರುತ್ತೇನೆ.

ನಾನು ಜ್ವಾಲೆಯಂತೆ
ಕೊಡುತ್ತೇನೆ ಬೆಳಕನ್ನು
ಆದರೆ ನಾನೇ ಉರಿದುಹೋಗುತ್ತೇನೆ
ಆನಂದವಾದಾಗ ಪ್ರಜ್ವಲಿಸುತ್ತೇನೆ
ಬೇಸರವಾದಾಗ ಮಿಣಮಿಣಕೆನ್ನುವೆ
ನಂದಿ ಹೋಗುವೆನೆಂದು ಬೆದರುತ್ತೇನೆ.

ನಾನೊಂದು ಕಲ್ಲು
ನನಗಿಲ್ಲ ಯಾವ ಭಾವನೆಗಳು
ಯಾರನ್ನೂ ನಾನು ನೋಯಿಸುವುದಿಲ್ಲ
ಆದರೆ ಬಳಸುತ್ತಾರೆ ನನ್ನನ್ನು
ನೋಯಿಸಲು ಬೇರೆಯವರನ್ನು
ಜನರು ವಿರೋಧಿಸುತ್ತಾರೆ ನನ್ನನ್ನು
ನಾನು ಸಹಿಸುತ್ತಾ ಹೋಗುತ್ತೇನೆ

ಮೂಲ : ಒರಿಸ್ಸಾ ಮಹಿಳಾ ಕಾರ್ಯಕರ್ತರ ಅಭಿವ್ಯಕ್ತಿಗಳು (ದೆಹಲಿ)
ಅನುವಾದ : ಡಾ. ಹೇಮಲತ ಎಸ್. ಎಂ.
ಮಹಿಳಾ ಅಧ್ಯಯನ ವಿಭಾಗ, ಮಹಿಳಾ ವಿಶ್ವವಿದ್ಯಾಲಯ, ಬಿಜಾಪುರ

# ಡಾ|| ರಾಜಕುಮಾರ್

# ರೂಪದೊಳಗಿನ ರೂಪಕ

ಪ್ರೊ|| ಬರಗೂರು ರಾಮಚಂದ್ರಪ್ಪ



**ಡಾ||** ರಾಜಕುಮಾರ್ ಅವರ ನಿಧನದಿಂದ ಸದಭಿರುಚಿಯ ಒಂದು ಯುಗದ ಅಂತ್ಯವಾಗಿದೆಯೆಂದರೆ ಅದು ಅತಿಶಯೋಕ್ತಿಯಲ್ಲ. ಯಾರಾದರೂ ಸತ್ತಾಗ ಸಾಮಾನ್ಯವಾಗಿ ಸಂತಾಪ ಸೂಚನೆಗಳೂ ಕ್ಲೀಷೆಯಾಗಿ ಬಿಡುವುದುಂಟು. ಆದರೆ ರಾಜಕುಮಾರ್ ಅವರ ಸಜ್ಜನಿಕೆ, ಸರಳತೆ, ಸದಭಿರುಚಿ ನಿರ್ಮಾಣದ ಸಂಕಲ್ಪಗಳ ಬಗ್ಗೆ ಮಾಡುವ ಪ್ರಶಂಸೆಯ ಯಾವ ಮಾತುಗಳೂ ಕ್ಲೀಷೆಯಾಗುವುದಿಲ್ಲ. ಅವರು ಅಭಿನಯಿಸಿದ ಚಿತ್ರಗಳು ಮತ್ತು ನಿಜ ನಡವಳಿಕೆಯ ಗುರುತುಗಳು ತಮಗೆ ತಾವೇ ಸ್ಪಷ್ಟ ಸಾಕ್ಷಿಯಾಗಿ – ಸಾಕ್ಷಿಪ್ರಜ್ಞೆಯಾಗಿ – ನಿಲ್ಲುತ್ತವೆ.

ಡಾ|| ರಾಜಕುಮಾರ್ ಅವರು ಕೇವಲ ಸಿನಿಮಾ ಕಲಾವಿದರಾಗಿದ್ದರೆ ಇಷ್ಟೆಲ್ಲ ಜನಪ್ರೀತಿಗೆ ಪಾತ್ರರಾಗುತ್ತಿದ್ದರೊ ಇಲ್ಲವೊ ಹೇಳಲಾಗದು. ಅಥವಾ ಅದು ಸಿನಿಮಾ ಪ್ರೇಮಿಗಳ ಪ್ರೀತಿ ಮಾತ್ರವಾಗಿರುತ್ತಿತ್ತು. ರಾಜಕುಮಾರ್ ಚಿತ್ರರಂಗದೊಳಗಿದ್ದು, ಅದನ್ನು ಮೀರಿ ಬೆಳೆದರು. ಸಾಂಸ್ಕೃತಿಕವಾಗಿ ಮಹತ್ವಪೂರ್ಣ ವ್ಯಕ್ತಿತ್ವವಾದರು; 'ಜನಪ್ರಿಯ ಸಂಸ್ಕೃತಿ'ಯೊಳಗೆ ಸಾರ್ಥಕ ರೂಪಕವಾಗಿ ಅರ್ಥಪೂರ್ಣವಾದರು. ಜನಪ್ರಿಯ ಸಂಸ್ಕೃತಿಯನ್ನು ನಕಾರಾತ್ಮಕ ನೆಲೆಯಲ್ಲಿ ನೋಡುವವರಿಗೆ ಸಕಾರಾತ್ಮಕ ಉತ್ತರವಾದರು. ಅಪಾರ ಪ್ರಭಾವ ಬೀರುವ ಚಲನಚಿತ್ರದಂತಹ ಜನಪ್ರಿಯ ಮಾಧ್ಯಮವನ್ನು ಸರಿದಾರಿಯಲ್ಲಿ ನಡೆಸುವ ಸಾರ್ಥಕ ಸಾಧನವಾದದ್ದು ರಾಜಕುಮಾರ್ ಅವರ ಒಂದು ಸಾಧನೆ. ಚಲನಚಿತ್ರ ಸೃಷ್ಟಿಯಲ್ಲಿ ನಿರ್ದೇಶಕನೇ ನಾಯಕ ಎನ್ನುವುದು ನಿಜವಾದರೂ ಮುಖ್ಯವಾಹಿನಿಯ ಚಲನಚಿತ್ರಗಳಲ್ಲಿ ನಾಯಕನಟನ ಪಾತ್ರ ತನಗೆ ತಾನೇ ಮುಖ್ಯವಾಗುವುದು ಒಂದು ವಾಸ್ತವವಾಗಿದೆ. ಯಾಕೆಂದರೆ ನಾಯಕನಟನ ಜನಪ್ರಿಯತೆಯ ಮೇಲೆ ಬಂಡವಾಳ ಹೂಡುವವರೇ ಹೆಚ್ಚು. ಆಗ ನಾಯಕನಟ ತಾನು ಪಾತ್ರವಹಿಸುವ ಚಿತ್ರದ ವಸ್ತು ಹೇಗಿರಬೇಕೆಂಬ ಬಗ್ಗೆ ನಿರ್ಧರಿಸುವ ಪರಿಪಾಠ ನಮ್ಮಲ್ಲಿದೆ. ತನಗೆ ಒಪ್ಪಿಗೆಯಾದ ಕಥಾವಸ್ತುವುಳ್ಳ ಚಿತ್ರದಲ್ಲಿ ನಟಿಸಲು ಜನಪ್ರಿಯ ನಾಯಕನಟರು ಒಪ್ಪುವುದರಿಂದ ಜನಪ್ರಿಯ ಸಿನಿಮಾ ನಿರ್ಮಾಣದಲ್ಲಿ ಅವರ ಅಭಿಪ್ರಾಯ-ಆಯ್ಕೆಗಳಿಗೆ ಮಹತ್ವ ಇದ್ದೇ ಇದೆ. ರಾಜಕುಮಾರ್ ಅವರು ಆಯ್ಕೆ ಮಾಡಿದ ಕಥಾವಸ್ತುಗಳು ಯಾವತ್ತೂ ಸಮಾಜ ವಿರೋಧಿ ಆಶಯ ಹೊಂದಿರಲಿಲ್ಲ. ನಿರೂಪಣೆಯ ವಿಧಾನವು ಯಾವತ್ತೂ ಅಭಿರುಚಿಗೆ ಧಕ್ಕೆ ತರಲಿಲ್ಲ. ಅವರ ಮುಖ್ಯ ಚಿತ್ರಗಳು ಯಥಾಸ್ಥಿತಿವಾದವನ್ನು ಪೋಷಿಸಲಿಲ್ಲ. ಮುಖ್ಯವಾಹಿನಿಯ ಇತಿಮಿತಿಯಲ್ಲೇ ಚಲನಶೀಲ ಆಶಯಗಳನ್ನೂ ಅಭಿವ್ಯಕ್ತಿಸಿದವು. ಅವರು ಆಯ್ಕೆ ಮಾಡಿ ಅಭಿನಯಿಸಿದ ಭಕ್ತಿಪ್ರಧಾನ ಚಿತ್ರಗಳು 'ಸಾಂಸ್ಥಿಕ ಧರ್ಮ'ವನ್ನು ಪೋಷಿಸಲಿಲ್ಲ ಎಂಬುದನ್ನಿಲ್ಲಿ ಗಮನಿಸಬೇಕು. ಅವರು ನಾಯಕನಟರಾಗಿ ಅಭಿನಯಿಸಿದ ಮೊದಲ ಚಿತ್ರ 'ಬೇಡರ ಕಣ್ಣಪ್ಪ'ದಲ್ಲಿದ್ದ ಮುಗ್ಧ ಭಕ್ತಿಯು ಅವರ ವ್ಯಕ್ತಿತ್ವದಲ್ಲೂ ಬೆಳೆಯುತ್ತ ಬಂತು. ಮುಂದಿನ ಚಿತ್ರಗಳಲ್ಲೂ ಮೂಡಿಬಂತು. (ಬೇಡರ ಕಣ್ಣಪ್ಪ – ಚಿತ್ರಕ್ಕೆ ಮುಂಚೆ ೧೯೪೨ರಲ್ಲಿ 'ಪ್ರಹ್ಲಾದ' ಚಿತ್ರದಲ್ಲಿ ಬಾಲನಟನಾಗಿ, ೧೯೫೨ರಲ್ಲಿ 'ಶ್ರೀನಿವಾಸ ಕಲ್ಯಾಣ' ಚಿತ್ರದಲ್ಲಿ ಸಹನಟರಾಗಿ ರಾಜಕುಮಾರ್ ಅವರು ನಟಿಸಿದ್ದರು. ಆದ್ದರಿಂದ, ನಾಯಕನಟರಾಗಿ ಅಭಿನಯಿಸಿದ ಮೊದಲ ಚಿತ್ರ 'ಬೇಡರ ಕಣ್ಣಪ್ಪ' ಎಂದಿದ್ದೇನೆ.)

ಇದೇ ಸಂದರ್ಭದಲ್ಲಿ ರಾಜಕುಮಾರ್ ಅವರ 'ಭಕ್ತಿಭಾವ'ಕ್ಕೆ ಸಂಬಂಧಿಸಿದ ಒಂದು ಘಟನೆಯನ್ನು ಹೇಳಬೇಕು. ಆಂಧ್ರದಲ್ಲಿ ಎನ್. ಟಿ. ಆರ್. ಅವರು ಮುಖ್ಯಮಂತ್ರಿಯಾಗಿದ್ದಾಗ ರಾಜಕುಮಾರ್ ಅವರನ್ನು ತಿರುಪತಿ ಟ್ರಸ್ಟ್‌ನ ಒಬ್ಬ ಟ್ರಸ್ಟಿಯನ್ನಾಗಿ ನೇಮಿಸಿದರು. ಒಮ್ಮೆ ಟ್ರಸ್ಟ್‌ನ ಸಭೆಗೆ ಹೋಗಿದ್ದಾಗ ತಿರುಪತಿ ತಿಮ್ಮಪ್ಪನ 'ದರ್ಶನ' ಮಾಡಲು ಸಾಮಾನ್ಯ ಜನರ ಜೊತೆ ಕ್ಯೂನಲ್ಲಿ ನಿಂತುಕೊಂಡರು. ಇವರನ್ನು ನೇರವಾಗಿ ಗರ್ಭಗುಡಿಯಲ್ಲಿಗೆ ಕರೆದುಕೊಂಡು ಹೋಗುತ್ತಿದ್ದರಾದರೂ ಅದಕ್ಕೆ ಒಪ್ಪಲಿಲ್ಲ. ಭಕ್ತಿಯೆನ್ನುವುದು ವಿಶೇಷ ಸವಲತ್ತುಗಳಲ್ಲಿ ಪಡೆಯುವ 'ದರ್ಶನ'ದಲ್ಲಿ ಇಲ್ಲ – ಎಂಬುದು ಅವರ ಅಭಿಪ್ರಾಯವಾಗಿತ್ತು. ಭಕ್ತಿ ಇರುವುದೇ ನಿಜವಾದರೆ ತಾನೂ ಎಲ್ಲರಂತೆ ಎಲ್ಲರೊಂದಿಗೆ ಸಾಲಿನಲ್ಲಿ ನಿಂತುಹೋಗಬೇಕು ಎಂದು ಅವರು ಭಾವಿಸಿದ್ದರು. ಹೀಗೆ ಕ್ಯೂನಲ್ಲಿ ನಿಂತಿದ್ದಾಗ ಗುರುತಿಸಿದ ಜನರು 'ಏನ್ ಅಣ್ಣಾವ್ರೆ, ನೀವು ಇಲ್ಲಿ ನಮ್ಮಂಗೆ ನಿಂತಿದ್ದೀರಿ. ನಿಜವಾಗ್ಲೂ ನಿಮ್ಮಲ್ಲೇ ದೇವರು ನೋಡಿದಂತಾಯ್ತು' ಎಂದರಂತೆ. ಈ ಘಟನೆಯನ್ನು ನೆನೆಯುತ್ತ ರಾಜಕುಮಾರ್ ಅವರು ನನಗೊಮ್ಮೆ ಹೇಳಿದರು : 'ಆ ಜನರು ನನ್ನಲ್ಲೇ ದೇವರನ್ನು ಕಾಣಬೇಕಾದ್ರೆ ಅವ್ರಲ್ಲೂ ದೇವರಿರಬೇಕು. ಅವರಲ್ಲಿ ದೇವರು ಇರೋದ್ರಿಂದ್ಲೇ ನನ್ನಲ್ಲಿ ದೇವರನ್ನು ಕಂಡರು. ಅವತ್ತೆ ನನಗನ್ನಿಸಿತು ಈ ಜನರೇ ದೇವರು ಅಂತ. ಹಾಗಾಗಿ ನಾನು ಅಭಿಮಾನಿ ದೇವರುಗಳೇ – ಅಂತ ಸಂಬೋಧನೆ ಮಾಡಲು ಶುರುಮಾಡಿದೆ. ನಿಜವಾಗೂ ನನ್ನ ದೇವರುಗಳು ಅವರೇ. ಈ ದೇವಸ್ಥಾನ, ಪೂಜೆ ಎಲ್ಲಾ ಸುಮ್ಮನೆ ಸಂಕೇತ ಅಷ್ಟೆ. ಅವೆಲ್ಲ ಏನೂ ಪ್ರಯೋಜನ ಇಲ್ಲ. ತೋರಿಕೆ, ಎಲ್ಲಾ ತೋರಿಕೆ.'

ಡಾ|| ರಾಜಕುಮಾರ್ ಅವರು ಮೊಟ್ಟಮೊದಲು 'ಅಭಿಮಾನಿ ದೇವರುಗಳೇ' ಎಂದು ಬಹಿರಂಗವಾಗಿ ಸಂಬೋಧಿಸಿದ್ದು ಅವರಿಗೆ 'ಕರ್ನಾಟಕ ರತ್ನ' ಗೌರವ ಪ್ರದಾನ ಮಾಡಿದ ಸಮಾರಂಭದಲ್ಲಿ.

ಕನ್ನಡ ಸಾಹಿತ್ಯ ಕ್ಷೇತ್ರದ ಶಿಖರಪ್ರಾಯ ಚೇತನವಾದ ಕುವೆಂಪು ಅವರು ನಿಸರ್ಗದಲ್ಲಿ ದೇವರನ್ನು ಕಂಡರೆ, ಕನ್ನಡ ಚಲನಚಿತ್ರಕ್ಷೇತ್ರದ ಶಿಖರಪ್ರಾಯ ಪ್ರತಿಭೆಯಾದ ರಾಜಕುಮಾರ್ ಅಭಿಮಾನಿ ಜನರಲ್ಲಿ ದೇವರನ್ನು ಕಂಡರು. ಕುವೆಂಪು ಸಾಹಿತ್ಯ ಕ್ಷೇತ್ರವನ್ನು ಮೀರಿ ಸಾಂಸ್ಕೃತಿಕ ನಾಯಕರಾದಂತೆ ರಾಜಕುಮಾರ್ ಸಿನಿಮಾಕ್ಷೇತ್ರವನ್ನು ಮೀರಿದ ಸಾಂಸ್ಕೃತಿಕ ನಾಯಕರಾಗಿ ಬೆಳೆದರು. ಇವರನ್ನು ಕೇವಲ ಸಿನಿಮಾನಟರೆಂದು ಗೌರವಿಸಲಿಲ್ಲ. ಇವರೂ ಕೇವಲ ಸಿನಿಮಾ ನಟರಾಗಿ ಉಳಿಯಲಿಲ್ಲ. ಗೋಕಾಕ್ ಚಳವಳಿಯನ್ನು ಒಳಗೊಂಡಂತೆ ಕನ್ನಡನಾಡು-ನುಡಿಗೆ ಧಕ್ಕೆ ಬಂದಾಗ ಬೀದಿಗೆ ಬಂದು ಪ್ರಜಾಸತ್ತಾತ್ಮಕ ಹೋರಾಟಕ್ಕೆ ಬೆಂಬಲವಾಗುತ್ತಲೇ ಕೇಂದ್ರಶಕ್ತಿಯಾದರು. ಭೂಕಂಪಪೀಡಿತರಿಗೆ ಸ್ವಂತ ಹಣ ಕೊಟ್ಟದ್ದಲ್ಲದೆ ಬೀದಿಗೆ ಬಂದು ಹಣಸಂಗ್ರಹ ಮಾಡಿದರು. ಜೊತೆಯ ಕಲಾವಿದರು ಸಂಕಷ್ಟದಲ್ಲಿದ್ದಾಗ ಹಣಸಹಾಯ ಮಾಡಿ ಪ್ರಚಾರ ಮಾಡಿಕೊಳ್ಳದೆ ಮನದಲ್ಲೇ ಮಿಡಿದರು. ಸಹಾಯಮಾಡಿದ್ದು ಸ್ವಪ್ರಚಾರದ ಸಾಧನ ಆಗಬಾರದೆಂದು ಅವರು ಭಾವಿಸಿದ್ದರು. ಅರವತ್ತರ ದಶಕದಲ್ಲಿ ಕರ್ನಾಟಕದ ಜನರು ಪ್ರವಾಹಪೀಡಿತರಾದಾಗ ಕನ್ನಡ ಚಿತ್ರರಂಗದ ಕಲಾವಿದರೆಲ್ಲ ಸೇರಿ ನಾಡಿನುದ್ದಕ್ಕೂ ಪ್ರವಾಸ ಮಾಡಿದರು; ಹಣ ಸಂಗ್ರಹ ಮಾಡಿ ಪ್ರವಾಹ ಪರಿಹಾರ ನಿಧಿಗೆ ಅರ್ಪಿಸಿದರು. ಈ ಸಾಮಾಜಿಕ ಕಾಳಜಿಯ ಕ್ರಿಯೆಯಲ್ಲಿ ನಾಯಕತ್ವ ನೀಡಿದವರು ಡಾ|| ರಾಜಕುಮಾರ್.

ಡಾ|| ರಾಜಕುಮಾರ್ ಅವರು – ಚಿತ್ರಗಳಿಗಾಗಿ ಹಾಡಿದಾಗ ಬಂದ ಸಂಭಾವನೆಯ ಹಣವನ್ನು ಬೀದಿ ಹೆಣ್ಣುಮಕ್ಕಳ ಕಲ್ಯಾಣಕ್ಕಾಗಿ ನೀಡಿದರು. ರಸಮಂಜರಿ ಕಾರ್ಯಕ್ರಮ ನೀಡಿದಾಗ ಬಂದ ಸಂಭಾವನೆಯನ್ನು ಇದೇ ಕಾರ್ಯಕ್ಕೆ ನೀಡುತ್ತ ಬಂದರು. ಚಿತ್ರನಟನೆಗೆ ಹೊರತಾಗಿ ಬಂದ ಯಾವುದೇ ಹಣವನ್ನು ಸಾಮಾಜಿಕ ಕೆಲಸಗಳಿಗೆ ಕೊಡಬೇಕೆಂದು ಅವರು ಬಯಸಿದ್ದರು. ಅದರಂತೆ ಮನೆಯವರಲ್ಲಿ ಹೇಳಿದ್ದರು. ದಾದಾಫಾಲ್ಕೆ ಪ್ರಶಸ್ತಿಯಿಂದ ಬಂದ ಒಂದು ಲಕ್ಷ ರೂಪಾಯಿಗಳನ್ನು ಕನ್ನಡ ಸಾಹಿತ್ಯ ಪರಿಷತ್ತಿಗೆ ಕೊಟ್ಟದ್ದನ್ನು ಸಾಂಕೇತಿಕವಾಗಿ ಉದಾಹರಿಸಬಹುದು. ಸಾಹಿತಿಗಳಾದಿಯಾಗಿ ಸಾಂಸ್ಕೃತಿಕ ಕ್ಷೇತ್ರದ ಎಲ್ಲರಿಗೂ ವಿಶೇಷ ಗೌರವ ತೋರುತ್ತ ಬಂದರು. 'ಎನಗಿಂತ ಕಿರಿಯರಿಲ್ಲ' ಎಂಬ ಭಾವದಿಂದಲೇ ಹಿರಿಯರಾದರು.

ಮತ್ತೆ 'ಭಕ್ತಿಭಾವ'ದ ವಿಷಯಕ್ಕೆ ಬರುತ್ತೇನೆ. ಅವರು ಹಾಡಿದ ಭಕ್ತಿಗೀತೆಗಳ ಧ್ವನಿಸುರುಳಿಗಳು ಜನರ ಮನೆ-ಮನ ತಲುಪಿದವು. ನನ್ನಂಥವರು ದೇವರು-ಧರ್ಮಗಳ ವಿಷಯದಲ್ಲಿ ವಿರೋಧಿ ನೆಲೆಯಲ್ಲಿದ್ದರೂ ರಾಜಕುಮಾರ್ ಅವರು 'ಸಾಂಸ್ಥಿಕ ಧರ್ಮ'ಕ್ಕೆ ನೆರವಾಗಲಿಲ್ಲವೆಂಬುದನ್ನು ಮೆಚ್ಚಬೇಕಾಗುತ್ತದೆ. ಯಾಕೆಂದರೆ ಇವತ್ತು 'ಧರ್ಮ' ಸಂಸ್ಥೆಯಾಗಿ ಜಡವಾಗಿದೆ. ಸಾಂಸ್ಥಿಕ ಧರ್ಮದ ಜಡಸೂತ್ರಗಳನ್ನು ಮೀರಿ ಧಾರ್ಮಿಕತೆ ಒಂದು ಮನೋಧರ್ಮವಾಗಿದೆ. ಧಾರ್ಮಿಕವಾದ ಜನಸಾಮಾನ್ಯರನೇಕರಿಗೆ ಸಾಂಸ್ಥಿಕ ಧರ್ಮದ ಸೂತ್ರಗಳು ಗೊತ್ತಿಲ್ಲ. ಅವರಲ್ಲಿರುವುದು ಭಕ್ತಿ ಮಾತ್ರ. ರಾಜಕುಮಾರ್

ಅವರಲ್ಲಿ ಇದ್ದದ್ದು ಜನಸಾಮಾನ್ಯರಲ್ಲಿದ್ದ ಭಕ್ತಿ; ಇನ್ನೂ ಬಿಡಿಸಿಹೇಳಬೇಕೆಂದರೆ ಬೇಡರ ಕಣ್ಣಪ್ಪನ ಭಕ್ತಿ. ಧರ್ಮ, ಧಾರ್ಮಿಕತೆ, ಭಕ್ತಿ – ಇವುಗಳನ್ನು ಕುರಿತ ವಿಭಿನ್ನ ಚರ್ಚೆಗಳು ಸಾಧ್ಯ. ರಾಜಕುಮಾರ್ ಅವರ ಭಕ್ತಿ ಜನರನ್ನು ಒಡೆಯುವ ಸಾಧನವಾಗಲಿಲ್ಲ ಎಂಬುದು ಇಲ್ಲಿ ಮುಖ್ಯ. ಅವರಲ್ಲಿದ್ದ ಧಾರ್ಮಿಕತೆ ಕೋಮುವಾದಕ್ಕೆ ಕುಮ್ಮಕ್ಕು ಕೊಡಲಿಲ್ಲ ಎಂಬುದನ್ನೂ ಇಲ್ಲಿ ಗಮನಿಸಬೇಕು. ರಾಜಕುಮಾರ್ ಅವರ ಭಕ್ತಿಗೆ ಬಸವಣ್ಣನವರ ಭಕ್ತಿಯು ಮಾದರಿಯಾದಂತೆ ಕಾಣುತ್ತದೆ. ಅಂತರಂಗಕ್ಕೆ ಸಂಬಂಧಿಸಿದ ಭಕ್ತಿಭಾವದಲ್ಲಿ ಮಾತ್ರ ಡಾ|| ರಾಜ್ ಅವರಿಗೆ ನಂಬಿಕೆಯಿತ್ತು. ಜನಪದ ದೇವರುಗಳ ಬಗ್ಗೆ ವಿಶೇಷ ಆಸಕ್ತಿಯಿತ್ತು. ಅವರು ಹಾಡಿದ ಮಲೆಮಹದೇಶ್ವರನನ್ನು ಕುರಿತ ಹಾಡುಗಳನ್ನು ಇಲ್ಲಿ ನೆನೆಯಬಹುದು.

ಬಹುಮುಖ್ಯವಾದ ಸಂಗತಿಯೆಂದರೆ ತಮ್ಮ ದುಡಿಮೆಯ ಹಣವನ್ನು ರಾಜಕುಮಾರ್ ಅವರು ಸಾಮಾಜಿಕ ಕಾಳಜಿಯ ಕೆಲಸಗಳಿಗೆ, ಸಾಂಸ್ಕೃತಿಕ ಸಂಸ್ಥೆಗಳಿಗೆ ಕೊಟ್ಟಂತೆ, ದೇವಾಲಯಗಳಿಗೆ ಕೊಡಲಿಲ್ಲ ಎಂಬುದನ್ನಿಲ್ಲಿ ಗಮನಿಸಬೇಕು. ದೇವಸ್ಥಾನ ಕಟ್ಟಿಸಲು, ದೇವರಿಗೆ ಕಿರೀಟ ಮಾಡಿಸಲು ಅವರ ಹಣದ ಬಳಕೆಯಾಗಲಿಲ್ಲ. ಭಕ್ತಿಭಾವವಷ್ಟೇ ಮುಖ್ಯವಾಗಿತ್ತು. 'ದೇಗುಲೀಕರಣ'ದ ಮೂಲಕ ಕೋಮುವಾದವನ್ನು ಬೆಳೆಸುತ್ತಿರುವ ಇಂದಿನ ದಿನಗಳಲ್ಲಿ ಈ ಅಂಶ ನನಗೆ ಮುಖ್ಯವೆನಿಸುತ್ತದೆ.

ಆದರೆ ಧರ್ಮ ಧುರೀಣರೆಲ್ಲ ಡಾ|| ರಾಜಕುಮಾರ್ ಅವರನ್ನು ಸಮಾನವಾಗಿಯೇ ನಡೆಸಿಕೊಂಡರೆಂದು ಹೇಳಲಾಗದು. ಎಲ್ಲರೂ ಅವರಿಗೆ ಗೌರವ ಕೊಡತೊಡಗಿದ್ದು ಜನರು ಗೌರವಿಸತೊಡಗಿದ ಮೇಲೆ. ಇಲ್ಲಿ ಒಂದು ಪ್ರಸಂಗವನ್ನು ಉಲ್ಲೇಖಿಸಬೇಕು : 'ಮಂತ್ರಾಲಯ ಮಹಾತ್ಮೆ' ಚಿತ್ರದಲ್ಲಿ ರಾಘವೇಂದ್ರಸ್ವಾಮಿಯ ಪಾತ್ರ ಮಾಡಲು ರಾಜಕುಮಾರ್ ಅವರನ್ನು ಆಯ್ಕೆ ಮಾಡಿದಾಗ ಕೆಲವು ಜಾತಿವಾದಿಗಳು ಬಹಿರಂಗವಾಗಿಯೇ ವಿರೋಧಿಸಿದರು. ಜಾತಿ ವ್ಯವಸ್ಥೆಯ ಬಿಸಿಗೆ ಆಗಾಗ್ಗೆ ತುತ್ತಾಗುತ್ತಲೇ ಅದನ್ನು ಅನಿವಾರ್ಯ ತುತ್ತು ಎಂದು ನುಂಗಿಕೊಂಡು ನಗುತ್ತ ವೃತ್ತಿಬದುಕನ್ನು ಸಾಗಿಸುತ್ತಿದ್ದ ರಾಜಕುಮಾರ್ ಅವರಿಗೆ ಬಹಿರಂಗವಾಗಿ ಎದುರಾದ ಜಾತಿವಾದಿಗಳ ಬಿರುನುಡಿಗಳು ಸಾಕಷ್ಟು ನೋಯಿಸಿದವು. ಹಿಂದುಳಿದ ಜಾತಿಗೆ ಸೇರಿದ ಇವರಿಗೆ ರಾಘವೇಂದ್ರಸ್ವಾಮಿಯ ಪಾತ್ರ ಮಾಡಲು ಯಾವ ಅರ್ಹತೆಯಿದೆ ಎಂಬಂಥ ಟೀಕೆ ಎದುರಾದಾಗ, ಯಾವತ್ತೂ ಜಾತಿಯ ಬಗ್ಗೆ ಯೋಚಿಸದೆ ಇದ್ದ ಮತ್ತು ಹಿಂದುಳಿದ ಜಾತಿ-ವರ್ಗಗಳನ್ನು ಸ್ವಹಿತಕ್ಕೆ ಬಳಸದೇ ಇದ್ದ ರಾಜಕುಮಾರ್ ಪ್ರತಿಭೆಯಿಂದಲೇ ಉತ್ತರಕೊಡಲು ಮುಂದಾದರು. 'ಮಂತ್ರಾಲಯ ಮಹಾತ್ಮೆ' ಚಿತ್ರ ಮುಗಿಯುವವರೆಗೆ ತಮಗೆ ತುಂಬ ಪ್ರಿಯವಾದ ಮಾಂಸಾಹಾರ ಬಿಟ್ಟರು. ಕಾಲಿಗೆ ಚಪ್ಪಲಿ ಹಾಕಲಿಲ್ಲ. ಕಾಲಕಾಲಕ್ಕೆ ಉಪವಾಸ ವ್ರತ ಕೈಗೊಂಡರು. ಈ ಮಡಿವಂತಿಕೆಯ ಕ್ರಮ ನಮ್ಮಂಥವರಿಗೆ ಇಷ್ಟವಾಗದಿರಬಹುದು. ಸರಿಯೆನ್ನಿಸದೆ ಇರಬಹುದು. ಆದರೆ ಮಡಿವಂತಿಕೆಯ ಕ್ರಮಗಳಿಂದಲೇ ಮಡಿವಂತಿಕೆಯನ್ನು ಹತ್ತಿಕ್ಕುವ ಉತ್ತರಗಳಾಗಿ ಇವಕ್ಕೆ ಸಾಮಾಜಿಕ ಮಹತ್ವವಿದೆ. ನಮ್ಮಂಥವರಾದರೆ ಆ ಜಾತಿವಾದಿಗಳನ್ನು ನೇರವಾಗಿ ವಿರೋಧಿಸುತ್ತಿದ್ದೆವು. ರಾಜಕುಮಾರ್ ಅವರು ಜಾತಿವಾದದ ನಿಲುವುಗಳನ್ನು ನಿರರ್ಥಕಗೊಳಿಸಲು ಅವರದೇ ವಿಧಾನ ಮತ್ತು ತಮ್ಮ ಅನನ್ಯ ಪ್ರತಿಭೆಯನ್ನು ಬಳಸಿಕೊಂಡರು; ಗೆದ್ದರು.

ಡಾ|| ರಾಜಕುಮಾರ್ ಅವರು ರಾಘವೇಂದ್ರಸ್ವಾಮಿಯ ಪಾತ್ರ ಮಾಡಬಾರದೆಂದು ಹೇಳಿದ್ದವರು ಆಮೇಲೆ ಬಾಯಿಮುಚ್ಚಿ ಕೊಂಡದ್ದು ನಿಜವಾದರೂ ರಾಷ್ಟ್ರೀಯ ಸ್ವಯಂ ಸೇವಕ ಸಂಘದ ಸಂಪರ್ಕವಿದ್ದವರೊಬ್ಬರು ಮತ್ತೆ 'ರಾಘವೇಂದ್ರ ವೈಭವ' ಎಂಬ ಚಿತ್ರ ಮಾಡಿದರು. ಶ್ರೀನಾಥ್ ಅವರು ಮುಖ್ಯಪಾತ್ರ ವಹಿಸಿದ್ದರು. ಆದರೆ ಈ ಚಿತ್ರ ನೆಲಕಚ್ಚಿತು. ರಾಜಕುಮಾರ್ ಅವರ ಅಭಿನಯದ 'ಭಕ್ತ ಪುರಂದರದಾಸ' ಚಿತ್ರ ತೆರೆಕಂಡ ಮೇಲೆ ಮತ್ತೊಬ್ಬರು ಕೆ. ಎಸ್. ಅಶ್ವತ್ಥ್ ಅವರನ್ನು ಹಾಕಿಕೊಂಡು 'ಶ್ರೀ ಪುರಂದರದಾಸರು' ಚಿತ್ರ ತೆಗೆದರು. ಇದು ಸಹ ಯಶಸ್ವಿಯಾಗಲಿಲ್ಲ. ಯಶಸ್ವಿಯಾದದ್ದು ಜಾತಿಯನ್ನು ಮೀರಿ ಬೆಳೆದ ರಾಜಕುಮಾರ್ ಅವರ ಅಭಿನಯದ ಚಿತ್ರಗಳು. ಇದು ರಾಜಕುಮಾರ್ ಮತ್ತು ಸಾಮಾನ್ಯ ಕನ್ನಡಿಗರು ನಾಡಿಗೆ ನೀಡಿದ ಮೌನ ಸಂದೇಶವೆಂದೇ ನನ್ನ ತಿಳುವಳಿಕೆ.

ಈ ಹಿನ್ನೆಲೆಯಲ್ಲೇ ರಾಜಕುಮಾರ್ ಅವರನ್ನು ಮೆಚ್ಚಿಕೊಳ್ಳಲು ಇನ್ನಷ್ಟು ಕಾರಣಗಳಿವೆ. ರಾಜಕುಮಾರ್ ಅವರು ಸಾಮಾಜಿಕವಾಗಿ ಮತ್ತು ಆರ್ಥಿಕವಾಗಿ ತೀರಾ ಹಿಂದುಳಿದ ವಲಯದಿಂದ ಬಂದವರು. ಶೈಕ್ಷಣಿಕವಾಗಿಯೂ ಹಿಂದುಳಿದವರು. ಮೂರನೇ ತರಗತಿಯನ್ನೂ ಪೂರೈಸದ ಇವರು ಕಲಿತದ್ದು ಕಲೆಯ ಮೂಲಕ; ಬದುಕಿನ ಮೂಲಕ. ಜಾತಿ ಮತ್ತು ವರ್ಗವ್ಯವಸ್ಥೆಯ ಕರಾಳತೆ ಪ್ರಖರವಾಗಿರುವ ನಮ್ಮ ಸಾಮಾಜಿಕ ಸಂದರ್ಭದಲ್ಲಿ ನಿರ್ಲಕ್ಷಿತ ಸಾಮಾಜಿಕ-ಆರ್ಥಿಕ ವಲಯದಿಂದ ಬಂದವರೂ ಮೂರನೇ ತರಗತಿಯನ್ನೂ ಮುಗಿಸದೆ ಇರುವವರೂ ಆದ ರಾಜಕುಮಾರ್ ದೇಶದ ದೊಡ್ಡ ಪ್ರತಿಭೆಯಾಗಿ ಬೆಳೆದದ್ದೇ ಒಂದು ಅನನ್ಯ ಸಾಧನೆ. 'ದೊಡ್ಡ' ಜಾತಿಯ ಹಿನ್ನೆಲೆಯಿಲ್ಲ; ಶ್ರೀಮಂತಿಕೆಯ ಬೆಂಬಲವಿಲ್ಲ; ಶಿಕ್ಷಣದ ಒತ್ತಾಸೆಯಿಲ್ಲ. ಪ್ರತಿಭೆ; ಕೇವಲ ಪ್ರತಿಭೆ. ಅದಕ್ಕೆ ತಕ್ಕುದಾದ ಶ್ರದ್ಧೆ; ಶ್ರಮ; ಸಂಕಲ್ಪ; ಇವುಗಳಿಂದ ಸಾಮಾಜಿಕ-ಆರ್ಥಿಕ ವ್ಯವಸ್ಥೆಯ ಕರಾಳ ಕಟ್ಟಳೆಗಳನ್ನು ಮೀರಿ ಬೆಳೆದದ್ದು ರಾಜಕುಮಾರ್ ಅವರ ಅಸಾಧಾರಣ ಹಾದಿ. ರಾಜಕುಮಾರ್ ಕಲೆಯನ್ನು ಕಸುಬು ಎಂದುಕೊಂಡರು. 'ಕಲಾಸೇವೆ ಮಾಡ್ತೇನೆ ಅನ್ನೋದೆಲ್ಲ ಬರೀಮಾತು. ಹೊಟ್ಟೆಪಾಡಿಗಾಗಿ ಅಭಿನಯ ಮಾಡ್ತಾ ಬಂದೆ. ಅಭಿನಯ ಕಲೆ ನನ್ನ ಕಸುಬು. ಆಮೇಲೆ ಹಾಡಿದೆ. ಅದೂ ನನ್ನ ಕಸುಬು. ಹೀಗಾಗಿ ಕಲೆ ಅನ್ನೋದು ನನ್ನ ಪಾಲಿಗೆ ಕಸುಬು. ನನಗೆ ಗೊತ್ತಿರೋದು ಅದೊಂದೇ. ಅದನ್ನ ಮಾಡ್ತಾ ಬಂದೆ. ಮೊದಲು ರಂಗಭೂಮೀಲಿ. ಆಮೇಲೆ ಚಿತ್ರರಂಗದಲ್ಲಿ.' – ಇದು ಡಾ|| ರಾಜಕುಮಾರ್ ಅವರ ಅಂತರಾಳದ ಮಾತು. ಕಲೆಯನ್ನು ಕಸುಬು ಎಂದುಕೊಂಡು ಬಾಳಿದವರು ಶ್ರಮಜೀವಿ ವಲಯದಿಂದ ಬಂದ ಜನಪದ ಕಲಾವಿದರು. ರಾಜಕುಮಾರ್ ಅವರು ಸಹ ಶ್ರಮಜೀವಿ ವಲಯದಿಂದ ಬಂದವರು; ಒಪ್ಪೊತ್ತಿನ ಊಟಕ್ಕಾಗಿ ಕಡುಕಷ್ಟಗಳನ್ನು ಅನುಭವಿಸಿದವರು; ಕಲೆಯನ್ನು ನಂಬಿ ಹಸಿವಿಗೆ ಉತ್ತರ ಹುಡುಕಿದವರು. ಹೀಗಾಗಿ ಅವರನ್ನು ನಾನು 'ಬಂಗಾರದ ಮನುಷ್ಯ' ಎನ್ನುವ ಬದಲು 'ಬೆವರಿನ ಮನುಷ್ಯ' ಎಂದು ಕರೆಯುತ್ತ ಬಂದಿದ್ದೇನೆ. ಅವರಿಗೆ ಬೆವರಿನ ಬೆಲೆ ಗೊತ್ತಿತ್ತು. ಬಡತನದ ಬೇಗೆ ಭಾವನೆಗಳ ಭಾಗವಾಗಿತ್ತು. ಹೀಗಾಗಿ ಅವರಲ್ಲಿದ್ದ 'ಭಕ್ತಿ'ಗೂ ಬೆವರಿನ ಆಯಾಮ ಲಭ್ಯವಾಗಿತ್ತು.

ಹಾಗಾದರೆ ಚಿತ್ರರಂಗದಿಂದ ಗಳಿಸಿದ ಶ್ರೀಮಂತಿಕೆಯ ಬಗ್ಗೆ ಏನು ಹೇಳುತ್ತೀರಿ ಎಂದು ಕೇಳಬಹುದು. ಈ ಪ್ರಶ್ನೆ ಸಹಜವೂ ಹೌದು. ವಿಶೇಷವೆಂದರೆ, ರಾಜಕುಮಾರ್ ಅವರು ಸಂಪತ್ತನ್ನು ಗಳಿಸಿದ ಮೇಲೆಯೂ ಅದಕ್ಕೆ ಸವಾಲಾಗುವಂತೆ ಸರಳತೆಯನ್ನು ರೂಢಿಸಿಕೊಂಡರು. ಜೇಬಲ್ಲಿ ಹಣ ಇಡಲಿಲ್ಲ. ತಮಗೆ ಬರುವ ಸಂಭಾವನೆಯನ್ನು ಎಣಿಸಲಿಲ್ಲ. ಐದುನೂರು, ಸಾವಿರದ ನೋಟುಗಳು ಹೇಗಿವೆಯೆಂದು ನೋಡಲಿಲ್ಲ. ಆರಂಭದ ದಿನಗಳಲ್ಲಿ ಇವರಷ್ಟೇ ಸರಳರಾದ ಕಿರಿಯ ಸೋದರ ವರದರಾಜು ಅವರು ವ್ಯವಹಾರಗಳನ್ನು ನೋಡಿಕೊಂಡರು. ಅನಂತರ ಪತ್ನಿ ಪಾರ್ವತಮ್ಮನವರೇ ವ್ಯವಹಾರದ ಚುಕ್ಕಾಣಿ ಹಿಡಿದರು. ರಾಜಕುಮಾರ್ ಕಲೆಯ ಕಸುಬುದಾರರಾಗಿ ಪೂರ್ಣ ತೊಡಗಿಸಿಕೊಂಡರು : ತಾನು ಕೇವಲ ಕಲೆಯ ಕಸುಬುದಾರ ಎಂದು ಭಾವಿಸಿದರು. ಶ್ರೀಮಂತಿಕೆಯ ಸೋಂಕು ತಗುಲದಂತೆ ವೈಯಕ್ತಿಕ ಎಚ್ಚರ ವಹಿಸಿದರು. ಸರಳ ಉಡುಪು, ಸೌಜನ್ಯದ ನಡವಳಿಕೆ,





ಸಜ್ಜನಿಕೆಯ ದಾರಿ, ನೈತಿಕ ಮಾದರಿ – ಇವೇ ಅವರ ದಾರಿ. ಯಶಸ್ಸಿನ ಉತ್ತುಂಗದಲ್ಲಿದ್ದಾಗಲೂ ಅವರು ಅಹಂಕಾರಪಡಲಿಲ್ಲ. ಚಿತ್ರೀಕರಣದ ಸಂದರ್ಭದಲ್ಲಿ ಸಾಮಾನ್ಯ ಶ್ರಮಜೀವಿಗಳೊಂದಿಗೆ ಒಟ್ಟಿಗೇ ಕೂತು ಊಟಮಾಡುತ್ತಿದ್ದ ಏಕೈಕ ನಾಯಕನಟ ಎಂದರೆ – ರಾಜಕುಮಾರ್. ಸಹಪಂಕ್ತಿ ಭೋಜನದ ಮೂಲಕ ಚಿತ್ರೀಕರಣದ ವೇಳೆಯಲ್ಲಿ ಸಮಭಾವದ ವಾತಾವರಣ ನಿರ್ಮಾಣ ಮಾಡುತ್ತ ಬಂದದ್ದು ಒಂದುಕಡೆ; ಯಾವತ್ತೂ ಹಣದ ಕಾರಣಕ್ಕೆ ನಿರ್ಮಾಪಕರಿಗೆ ತೊಂದರೆ ಕೊಡದ ಕಲಾವಿದ ಮನಸ್ಸು ಇನ್ನೊಂದು ಕಡೆ. ಸಮಯಕ್ಕೆ ಸರಿಯಾಗಿ ಚಿತ್ರೀಕರಣಕ್ಕೆ ಹಾಜರಾಗುವ ಕರ್ತವ್ಯನಿಷ್ಠೆ ಮತ್ತೊಂದು ಕಡೆ. ಜೊತೆಗೆ ಕಿಂಚಿತ್ತೂ ಕಳಂಕವಿಲ್ಲದ ಕಲೆಯ ಕಸುಬು. ಯಶಸ್ಸಿಗೆ ಇನ್ನೇನು ಬೇಕು ?

ಡಾ॥ ರಾಜಕುಮಾರ್ ಅವರು ನೆಲದ ಮೇಲೆ ಹಾಸಿಗೆ ಹಾಸಿ ಮಲಗುತ್ತಿದ್ದರೆಂದರೆ ಆಶ್ಚರ್ಯವಾಗಬಹುದು. ಆದರೆ ಇದು ನಿಜ. ಮದ್ರಾಸಿನಲ್ಲಿದ್ದಾಗ ಬೆಲೆಬಾಳುವ ಮಂಚವೊಂದನ್ನು ಖರೀದಿಸಿ ಮನೆಗೆ ತಂದರಂತೆ. ಅದರ ಮೇಲೆ ಮಲಗಿದಾಗ ನಿದ್ದೆಯೇ ಬರಲಿಲ್ಲವಂತೆ. ಮೂರುದಿನ ಮಂಚದ ಮೇಲೆ ತಳಮಳಿಸಿ ಆನಂತರ ನೆಲವೇ ವಾಸಿಯೆಂದು ಮಂಚದ ಮೇಲೆ ಮಲಗುವುದನ್ನು ಬಿಟ್ಟರು. ಹೊರಗೆ ಹೋದಾಗ ಮಾತ್ರ ಮಂಚ. ಮನೆಯಲ್ಲಿ ನೆಲ. ಇದು ಕೇವಲ ಸರಳತೆಯಲ್ಲ. ಶ್ರೀಮಂತಿಕೆಯ ಸವಲತ್ತುಗಳಿಗೆ ದಾಸನಾಗದೆ ಇರಲು ನಡೆಸಿದ ಆಂತರಿಕ ಹೋರಾಟದ ಫಲ. ಇತ್ತೀಚಿನ ವರ್ಷಗಳಲ್ಲಂತೂ ಅವರು ಸದಾ ಬಸವಣ್ಣ, ಅಲ್ಲಮ, ದೇವರದಾಸಿಮಯ್ಯ, ಅಂಬಿಗರ ಚೌಡಯ್ಯ, ಅಕ್ಕಮಹಾದೇವಿ ಮುಂತಾದವರ ವಚನಗಳನ್ನು ಮಾತಿನ ಮಧ್ಯೆ ಸಾಕಷ್ಟು ಹೇಳುತ್ತಿದ್ದರು. ಕನಕದಾಸ, ಸರ್ವಜ್ಞರು ಬಂದುಹೋಗುತ್ತಿದ್ದರು. ಅನೇಕ ತತ್ವಪದಗಳನ್ನು ಉಲ್ಲೇಖಿಸುತ್ತಿದ್ದರು. ಅವರ ಸರಳತೆ, ಸಜ್ಜನಿಕೆಗಳು ಸಂತನ ರೂಪಾಂತರವನ್ನು ಪಡೆಯುತ್ತ ಬಂದವು. ರಾಜಕುಮಾರ್ 'ಸಂತ ಮನಸ್ಸಿನ ಮನುಷ್ಯ'ರಾಗುತ್ತ ಬಂದರು.

ಡಾ॥ ರಾಜಕುಮಾರ್ ಅವರೊಳಗೆ ಮೂಲದ 'ಮುತ್ತುರಾಜ್' ಸದಾ ಜೀವಂತವಾಗಿದ್ದುದು ಅವರ ವ್ಯಕ್ತಿತ್ವದ ಬಹುಮುಖ್ಯ ವಿಶಿಷ್ಟತೆ (ಮುತ್ತುರಾಜ್ – ರಾಜಕುಮಾರ್ ಅವರ ಮೂಲ ಹೆಸರು). ಬದುಕಿನ ಬೆಂಕಿಯಲ್ಲಿ ಹಾದುಬಂದವರು – ಮುತ್ತುರಾಜ್. ಕಲಾವಿದನಾಗಿದ್ದರ ಜೊತೆಗೆ ಸಾಮಾಜಿಕ-ಆರ್ಥಿಕ ಅನುಭವಗಳ ಮೂಸೆಯಲ್ಲಿ ಆಕಾರಗೊಂಡವರು – ಮುತ್ತುರಾಜ್. ಈ ಮುತ್ತುರಾಜ್ ಪ್ರಸಿದ್ಧ ಕಲಾವಿದರಾಗಿ 'ಡಾ॥ ರಾಜಕುಮಾರ್' ಆದರು. ಆದರೆ ಡಾ॥ ರಾಜಕುಮಾರ್ ಒಳಗೆ ಮುತ್ತುರಾಜ್ ಎಂಬ ಮನುಷ್ಯ ಬದುಕಿದ್ದ; ಸಾಕ್ಷಿಪ್ರಜ್ಞೆಯಾಗಿದ್ದ; ಅನುಭವಮಂಟಪವಾಗಿದ್ದ. ಡಾ॥ ರಾಜಕುಮಾರ್ ನಡೆ-ನುಡಿಯನ್ನು ನಿಯಂತ್ರಿಸುತ್ತಿದ್ದ; ಬೆಳೆಸುತ್ತಿದ್ದ. ಬಹಿರಂಗದ ಕಾಂತಿಗೆ ಅಂತರಂಗದ ಬೆಳಕಾಗಿದ್ದ.

ಅಂತರಂಗದಲ್ಲಿ 'ಮುತ್ತುರಾಜ್' ಇದ್ದಂತೆ ಬಹಿರಂಗದಲ್ಲಿ ಕಿರಿಯ ಸೋದರ 'ವರದರಾಜ್' ಇದ್ದರು. ಉತ್ತಮ ಹಾಸ್ಯನಟರಾಗಿದ್ದ ಇವರು ಅಣ್ಣ ರಾಜಕುಮಾರ್ ಅವರ ಕಲಾಬದುಕನ್ನು ರೂಪಿಸುವಲ್ಲಿ ಪ್ರಮುಖ ಪಾತ್ರ ವಹಿಸಿದರು. ಅನೇಕ ನಾಟಕಗಳು ಮತ್ತು ಮೂರ್‍ನಾಲ್ಕು ಚಿತ್ರಗಳಲ್ಲಿ ಅಭಿನಯಿಸಿದ ವರದರಾಜ್ ಅವರು ಅಣ್ಣ ರಾಜಕುಮಾರ್ ಅವರಿಗೆ ಬೆಂಬಲವಾಗಿ ನಿಂತು ಆತ್ಮೀಯ ಮಾರ್ಗದರ್ಶಿಯಾದರು. ತಮ್ಮ ನಟನೆಯನ್ನು ಬಿಟ್ಟರು. ಅನೇಕ ವರ್ಷ ಅಣ್ಣನ ಅಭ್ಯುದಯದಲ್ಲಿ ಆನಂದ ಕಂಡರು. ಒಳಗಿನ ಮುತ್ತುರಾಜ್ ಮತ್ತು ಹೊರಗಿನ ವರದರಾಜ್ – ಇಬ್ಬರೂ ಡಾ॥ ರಾಜಕುಮಾರ್ ಅವರ ವ್ಯಕ್ತಿತ್ವ ವಿಕಾಸದ ಪ್ರಮುಖ ಪ್ರೇರಕರು.

ಬಹುದೊಡ್ಡದಾಗಿ ಬೆಳೆದ ವ್ಯಕ್ತಿತ್ವಕ್ಕೆ ಗೌರವ ಕೊಡಲು ಒಬ್ಬೊಬ್ಬರು ಒಂದೊಂದು ವಿಧಾನ ಅನುಸರಿಸುತ್ತಾರೆ. ಜನಪ್ರಿಯ ಸಂಸ್ಕೃತಿಯ ಭಾಗವಾದ ಸಿನಿಮಾ ಜಗತ್ತಿನಲ್ಲಿ 'ಅಣ್ಣ' ಎಂದು ಕರೆಯುವುದೂ ಕಾಲಿಗೆ ಬಿದ್ದು ಗೌರವ ಸೂಚಿಸುವುದೂ ಒಂದು ರೂಢಿ. ಇದು ರಾಜಕುಮಾರ್ ಅವರ ವಿಷಯದಲ್ಲೂ ನಿಜ. ಆದರೆ ತನ್ನನ್ನು 'ಅಣ್ಣ' ಎನ್ನಬೇಕೆಂದು, ಕಾಲಿಗೆ ಬೀಳಬೇಕೆಂದು, ಅವರೆಂದೂ ಅಪೇಕ್ಷಿಸಿರಲಿಲ್ಲ. 'ಸ್ಟಾರ್‌ವ್ಯಾಲ್ಯು' ಎಂಬ ಪ್ರತಿಷ್ಠೆಯ ಪರಿಭಾಷೆಯೊಳಗೆ ಇವೆಲ್ಲ ಸಾಮಾನ್ಯವೆಂಬಂತೆ ನಡೆದುಬಿಡುತ್ತವೆ; ಆರಂಭದಲ್ಲಿ ಗೌರವಸೂಚಕವಾಗುತ್ತ ಆನಂತರ ರೂಢಿಯಾಗುತ್ತವೆ; ಅಭಿನಯವೂ ಆಗುತ್ತವೆ. ಇದೆಲ್ಲ ರಾಜಕುಮಾರ್ ಅವರಿಗೆ ಗೊತ್ತಿಲ್ಲವೆಂದೇನೂ ಅಲ್ಲ. ಕೆಲವು ವರ್ಷಗಳ ಹಿಂದೆ, ನನ್ನ ಮತ್ತು ಅವರ ಪರಿಚಯದ ಆರಂಭದಲ್ಲಿ ನಾನು ಹೇಳಿದೆ : 'ಸರ್, ನನಗೆ ಕಾಲಿಗೆ ಬಿದ್ದು ಅಭ್ಯಾಸವಿಲ್ಲ. ಹಾಗಂತ ಗೌರವ ಇಲ್ಲ ಅಂತ ಅಲ್ಲ. ನೀವು ತಪ್ಪು ತಿಳೀಬಾರ್ದು. ಮೊದ್ಲೇ ಹೇಳ್ತಿದ್ದೀನಿ' ಎಂದೆ. ಆಗ ಅವರು ನಕ್ಕು ನುಡಿದರು : 'ನಿಮ್ ಮುಖ ನೋಡಿದ್ರೆ ಗೊತ್ತಾಗಲ್ವ ಸಾರ್. ಬಂಡಾಯದ ಕಳೆ ಇದೆ ಅಲ್ಲಿ. ಪ್ರೀತಿ-ಗೌರವ ಅನ್ನೋದು ಕಾಲಿಗ್ ಬೀಳೋದ್ರಲ್ಲಿಲ್ಲ. ಇಲ್ಲಿ... ಇಲ್ಲಿರ್ಬೇಕು' ಎಂದು ಎದೆಮುಟ್ಟಿಕೊಂಡು ಹೇಳಿದರು. 'ಕಾಲಿಗ್ ಬಿದ್ದೋರೆಲ್ಲ ಗೌರವ ತೋರುಸ್ತಾರೆ ಅಂತ ನಾನ್ಯಾಕ್ ಅಹಂಕಾರ ಪಡ್ಲಿ; ಎಲ್ಲಾ ಒಳಗಿರ್ಬೇಕು ಎದೆ ಒಳಗೆ' ಎನ್ನುತ್ತ ನನ್ನನ್ನು ಗಟ್ಟಿಯಾಗಿ ಅಪ್ಪಿಕೊಂಡರು. ಹೀಗೆ ಆರಂಭವಾದ ಪರಿಚಯ ಮುಂದೆ ಮನಬಿಚ್ಚಿ ಮಾತಾಡುವ ಆತ್ಮೀಯತೆಯಾಯಿತು. ನನ್ನ ನೇರ ಸ್ವಭಾವವನ್ನು ಅವರೆಂದೂ ಅಪಾರ್ಥ ಮಾಡಿಕೊಳ್ಳಲಿಲ್ಲ. ಆದರೆ ರಾಜಕುಮಾರ್ ಅವರನ್ನು ಅಪಾರ್ಥ ಮಾಡಿ ವಿಘ್ನ ಸಂತೋಷ ಪಟ್ಟ ಸಿನಿಕ ಸಮೂಹವೂ ನಮ್ಮಲ್ಲಿದೆ. ಇದು ಕುವೆಂಪು ಅವರಂಥ ಮಹಾಕವಿಯನ್ನೂ ಬಿಟ್ಟಿರಲಿಲ್ಲ. ರಾಜಕುಮಾರ್ ಅವರಂಥ ಮಹಾನ್ ಕಲಾವಿದರನ್ನೂ ಬಿಡಲಿಲ್ಲ.

ವೈಯಕ್ತಿಕ ಮತ್ತು ಸಾಮಾಜಿಕ ಅಸಹನೆಗಳನ್ನು ಎದುರಿಸಿಯೇ ಅನೇಕರು ಬೆಳೆಯಬೇಕಾದ ಸನ್ನಿವೇಶ ನಮ್ಮದು. ಆದರೆ ಅಪಕ್ವ, ಅತಾರ್ಕಿಕ, ಅಪ್ರಬುದ್ಧ ಅಂಶಗಳು ತಾನಾಗಿಯೇ ಮೂಲೆ ಸೇರುವಂತೆ ಮಾಡಿದ ಮೌನಶಕ್ತಿಯ ಮಹಾನ್ ಪ್ರತಿಭೆಗಳು ನಮ್ಮಲ್ಲಿವೆ. ಅಂಥ ಪ್ರಮುಖ ಶಕ್ತಿಗಳಲ್ಲಿ ರಾಜಕುಮಾರ್ ಅವರೂ ಒಬ್ಬರು. 'ರಾಜಕುಮಾರ್ ಅವರು ಅದ್ಭುತ ಕಲಾವಿದರು, ನಿಜ. ಆದರೆ ಚಿತ್ರರಂಗಕ್ಕೆ ಏನು ಮಾಡಿದರು ?' – ಎಂದು ಕೆಲವರು ಕೇಳುವುದುಂಟು. ನನ್ನದೊಂದು ಪ್ರಶ್ನೆಯಿದೆ : ಪುಸ್ತಕ ಬರೆಯುವವರೆಲ್ಲ ಪ್ರಿಂಟಿಂಗ್ ಪ್ರೆಸ್ ಇಡಬೇಕೆ ? ಪುಸ್ತಕ ಬರೆಯುವುದೇ ಪುಸ್ತಕೋದ್ಯಮಕ್ಕೆ ಪೂರಕವಲ್ಲವೆ ? ಅದೇ ರೀತಿ ಕಲಾವಿದರೆಲ್ಲ ಸ್ಟುಡಿಯೋ ಕಟ್ಟಿಸಬೇಕೆ ? ಅಭಿನಯದ ಮೂಲಕ ಚಿತ್ರಮಂದಿರಕ್ಕೆ ಜನರು ಬರುವಂತೆ ಮಾಡುವುದೇ ಚಿತ್ರೋದ್ಯಮಕ್ಕೆ ಪೂರಕವಲ್ಲವೆ ? ಖ್ಯಾತ ಕಾದಂಬರಿಕಾರರಾದ ಅ. ನ. ಕೃಷ್ಣರಾಯರು ಬರೆದ ಕಾದಂಬರಿಗಳಿಂದ ಕನ್ನಡದಲ್ಲಿ ಓದುವ ಅಭಿರುಚಿ ವಿಸ್ತಾರವಾಯಿತು. ರಾಜಕುಮಾರ್ ಅವರಿಂದ ಕನ್ನಡ ಚಲನಚಿತ್ರ ಪ್ರೇಕ್ಷಕ ವಲಯ ವಿಸ್ತಾರವಾಯಿತು. ಅಷ್ಟೇ ಅಲ್ಲ, ಸದಭಿರುಚಿಯ ನಿರ್ಮಾಣವಾಯಿತು. ಇದು ಸಂಸ್ಕೃತಿಯ ಕೆಲಸವಲ್ಲವೇ ? ಅನೇಕರಿಗೆ ಗೊತ್ತಿಲ್ಲದ ಒಂದು ವಿಷಯವನ್ನು ತಿಳಿಸಬಯಸುತ್ತೇನೆ. ಹಿರಿಯನಟ ಟಿ. ಎನ್. ಬಾಲಕೃಷ್ಣ ಅವರು ನಿರ್ಮಿಸಿದ ಅಭಿಮಾನ್ ಸ್ಟುಡಿಯೋಗೆ ಆರಂಭದಲ್ಲಿ ರಾಜಕುಮಾರ್ ಅವರೂ ಒಬ್ಬ ಪಾಲುದಾರರಾಗಿದ್ದರು. ಆದರೆ ವ್ಯವಹಾರದಲ್ಲಿ ಕೆಟ್ಟ ಹೆಸರು ಬಂದೀತೆಂಬ ನೈತಿಕ ಅಳುಕಿನಿಂದ ಪಾಲುದಾರಿಕೆಯಿಂದ ಹಿಂದಕ್ಕೆ ಬಂದರು. ಆದರೆ ತಮ್ಮ ಪಾಲಿನ ಹಣವನ್ನು ಹಿಂದಕ್ಕೆ ಪಡೆಯಲಿಲ್ಲ. ಹೆಸರನ್ನು ಹಿಂದಕ್ಕೆ ಪಡೆದರು. ಕೆಲವರ ಸ್ವಭಾವಕ್ಕೆ ಒಗ್ಗದ ವಿಷಯಗಳಿರುತ್ತವೆ, ಅವುಗಳನ್ನು ಮಾಡಬೇಕೆಂದು ಒತ್ತಾಯಿಸುವ ಬದಲು ಸಾಮಾಜಿಕ ಜವಾಬ್ದಾರಿಯ ನಡವಳಿಕೆಯನ್ನು ನಿರೀಕ್ಷಿಸುವುದು ಸರಿ. ಎನ್. ಟಿ. ಆರ್. ಮತ್ತು ಎಂ. ಜಿ. ಆರ್. ಅವರು ರಾಜಕೀಯಕ್ಕೆ ಬಂದರೆಂದು ರಾಜಕುಮಾರ್ ಅವರಿಂದಲೂ ಅದನ್ನು ನಿರೀಕ್ಷಿಸಲಾದೀತೆ ? ರಾಜಕೀಯ ಇವರಿಗೆ ಒಗ್ಗದ ವಿಷಯ. ಯಾರು ಎಷ್ಟೇ

ಹೇಳಿದರೂ ಇವರು ರಾಜಕೀಯಕ್ಕೆ ಬರಲಿಲ್ಲ. ಎನ್. ಟಿ. ಆರ್. ಮತ್ತು ಎಂ. ಜಿ. ಆರ್. ರಾಜಕೀಯಕ್ಷೇತ್ರಕ್ಕೆ ಬಂದರು. ಯಾರನ್ನೂ ಆಕ್ಷೇಪಿಸುವಂತಿಲ್ಲ. ಅದು ಅವರವರ ಆಲೋಚನೆ ಮತ್ತು ಸ್ವಭಾವಕ್ಕೆ ಸಂಬಂಧಪಟ್ಟ ಸಂಗತಿ.

ಡಾ|| ರಾಜಕುಮಾರ್ ಅವರನ್ನು ಅರ್ಥಮಾಡಿಕೊಳ್ಳಲು ಕೆಲವು ಘಟನೆಗಳನ್ನು ಹೇಳಬಯಸುತ್ತೇನೆ.

೧. ನಾನು ರಾಜಕುಮಾರ್ ಅವರ ಸಂಸ್ಥೆಗಾಗಿ ಕೆಲಸ ಮಾಡಿದ ಒಂದೇ ಒಂದು ಚಿತ್ರ 'ಜನುಮದ ಜೋಡಿ'. ಇದಕ್ಕಾಗಿ ನಾನು ಮೂರು ಹಾಡು ಬರೆದೆ. ಚಿತ್ರಕತೆ ರಚನೆಯಲ್ಲಿ ಭಾಗವಹಿಸಿದೆ. ಪೂರ್ಣವಾಗಿ ಸಂಭಾಷಣೆ ಬರೆದೆ. ಶ್ರೀಮತಿ ಪಾರ್ವತಮ್ಮನವರು ತಮ್ಮ ಸಂಸ್ಥೆಯ ಚಿತ್ರಗಳಿಗೆಲ್ಲ ಬರೆಯುವಂತೆ ಕೇಳಿದರು. 'ನನಗೆ ಇಷ್ಟವಾಗುವ ಕಥಾವಸ್ತುವಿದ್ದರೆ ಮಾತ್ರ ಬರೆಯುತ್ತೇನೆ' ಎಂದು ನಾನು ಹೇಳಿದಾಗ ಅವರು ತಪ್ಪು ತಿಳಿಯಲಿಲ್ಲ. ಒಂದು ದಿನ ಮಾತನಾಡುತ್ತ ಕೂತಿದ್ದಾಗ ನಾನು ಕಾಲಮೇಲೆ ಕಾಲು ಹಾಕಿಕೊಂಡಿದ್ದೆ. ಎದುರಿಗೆ ರಾಜಕುಮಾರ್ ಅವರಿದ್ದರು. ಅವರ ಎದುರು ನಾನು ಹಾಗೆ ಕೂತದ್ದು ಸರಿಯಲ್ಲ ಎನ್ನಿಸಿ ಮಾತಾಡುತ್ತಲೇ ಅರಿವಾಗದಂತೆ ಕಾಲನ್ನು ತೆಗೆದು 'ಸರಿಯಾಗಿ' ಕೂತೆ. ಇದನ್ನು ಹೇಗೋ ಗಮನಿಸಿದ ರಾಜಕುಮಾರ್ ಅವರಿಗೆ ನಾನು ಕಾಲುತೆಗೆದದ್ದು ಸರಿಯೆನಿಸಲಿಲ್ಲ. 'ಯಾಕ್ ಹಾಗ್ ಮಾಡಿದ್ರಿ ? ಕಾಲ್ ಮೇಲ್ ಕಾಲ್ ಹಾಕ್ಕೊಂಡೇ ಕೂತ್ಕೊಳ್ಳಿ. ನಿಮಗೆ ಅದೇ comfortable ಅನ್ಸುತ್ತೆ. ನನ್ ನೋಡಿ ಇವ್ನ್ ಎದುರಿಗೆ ಕಾಲ್ ಮೇಲ್ ಕಾಲ್ ಹಾಕ್ಕೊಂಡ್ ಕೂತ್ರೆ ಹೆಂಗೊ ಏನೊ ಅಂತ ತೆಗೆದಿದ್ದೀರಿ ಅನ್ಸುತ್ತೆ. ದಯವಿಟ್ಟು ಮೊದಲ್ನಂಗೇ ಕೂತ್ಕೊಳ್ಳಿ. ನಾನ್ ಖಂಡಿತ ತಪ್ ತಿಳ್ಕಲ್ಲ' ಎಂದು ಒತ್ತಾಯಿಸಿದರು. ಅವರ ಒತ್ತಾಯಕ್ಕೆ ಮೊದಲಿನಂತೆ ಕಾಲುಮೇಲೆ ಕಾಲು ಹಾಕಿ ಕೂತೆ. ಆದರೆ ತುಂಬಾ uncomfortable ಆಗಿತ್ತು!

೨. ಡಾ|| ರಾಜಕುಮಾರ್ ಅವರು ತಮ್ಮ ಬೆಂಗಾವಲಿಗಿರುವ 'ಚನ್ನ' ಎಂಬ ವ್ಯಕ್ತಿಯ ಜೊತೆ ವಾಕಿಂಗ್ ಹೋಗುತ್ತಿದ್ದರು. ರಾತ್ರಿ ಹೊತ್ತು ಮುಖಕ್ಕೆ ಮಫ್ಲರ್ ಸುತ್ತಿಕೊಂಡು ಹೋಗುತ್ತಿದ್ದಾರೆ. ಸದಾಶಿವನಗರದ ಒಂದು ಬೀದಿ. ಹೊಸಮನೆ ಕಟ್ಟುತ್ತಿದ್ದಾರೆ. ಮನೆ ಕಟ್ಟುವ ಕಾರ್ಮಿಕರ ಗುಡಿಸಲು ಅಲ್ಲೇ ಇದೆ. ಗುಡಿಸಲಿಂದ ಕೋಳಿಸಾರಿನ ಸುವಾಸನೆ ಬರುತ್ತಿದೆ. ಡಾ|| ರಾಜ್ ಅವರು ಕ್ಷಣಕಾಲ ನಿಂತರು. 'ಚನ್ನ, ಕೋಳಿಸಾರು ತುಂಬಾ ಚೆನ್ನಾಗ್ ಮಾಡಿದಾರೆ ಅನ್ಸುತ್ತೆ. ಇಂಥ ವಾಸನೆ ನನಗೆಂದೂ ತಟ್ಟೇ ಇಲ್ಲ. ಸ್ವಲ್ಪ ಊಟ ಹಾಕ್ತಾರೇನೋ ಕೇಳ್ತೀಯಾ ?' ಎಂದರು. ಆತ ಎಷ್ಟು ಬೇಡವೆಂದರೂ ಕೇಳಲಿಲ್ಲ. 'ಕೆಲಸಗಾರರ ಗುಡಿಸಲಾದ್ರೇನು ? ನಾವೂ ಹಂಗೇ ಇದ್ದೋರಲ್ವ ? ಹೋಗಿ ಸುಮ್ನೆ ಕೇಳು' ಎಂದರು. ಆತ ಗುಡಿಸಲಿಗೆ ಹೋಗಿ ವಿಷಯ ತಿಳಿಸಿದ. ಅವರು 'ಬಡವರ ಊಟ' ಎಂದು ಹಿಂಜರಿದರು. ಡಾ|| ರಾಜಕುಮಾರ್ ಬಿಡಲಿಲ್ಲ. ಗುಡಿಸಲಿನ ಒಳಗೆ ಹೋಗಿ ಮುದ್ದೆ, ಕೋಳಿಸಾರಿನ ಊಟ ಮಾಡಿ ಅವರಿಗೆ ನಮಸ್ಕರಿಸಿ ಹಿಂತಿರುಗಿದರು. ಡಾ|| ರಾಜಕುಮಾರ್ 'ಮುತ್ತುರಾಜ್' ಆಗಿದ್ದರು.

೩. ಡಾ|| ರಾಜಕುಮಾರ್ ಅವರು ಒಮ್ಮೆ ನನಗೊಂದು ಘಟನೆಯನ್ನು ಹೇಳಿದರು : 'ನನಗೆ ಇವತ್ತು ನಿರೀಕ್ಷೆ ಮಾಡದೆ ಇರೋದೆಲ್ಲಾ ಸಿಕ್ಕಿದೆ. ಆದರೆ ನಮ್ಮ ಊರಿಗೆ ಹೋದಾಗ ಆಗೋ ಆನಂದ ಇನ್ನೆಲ್ಲೂ ಸಿಗೋದಿಲ್ಲ. ನಾನು ಊರಿಗೆ ಹೋದಾಗೆಲ್ಲ ಹೊಲ, ತೋಪು ಅಂತ ತಿರುಗಾಡ್ತೇನೆ. ಆಗ ಎಲ್ಲ ನೆನಪುಗಳೂ ಒತ್ತರಿಸಿ ಬರುತ್ವೆ. ಅದೆಷ್ಟು ಜನ ನನ್ನ ಜೊತೆ ಆಡಿದ್ರು; ನನ್ ಜೊತೆ ಬೆಳೆದಿದ್ರು ! ಎಲ್ಲಾ ನೆನಪಿಗೆ ಬರುತ್ವೆ. ಈಗ ಅವರಲ್ಲಿ ಅನೇಕರು ಬದುಕಿಲ್ಲ. ಅವರ ನೆನಪು ಕಾಡುತ್ತೆ. ಒಬ್ನೇ ಅಲ್ ಓಡಾಡ್ತ ಇದ್ರೆ ಮರಗಿಡಗಳಲ್ಲಿ ಎಲೆ ಅಲುಗಾಡೊ ಸದ್ದು, ಹಕ್ಕಿಗಳ ಚಿಲಿಪಿಲಿ, ಜೊತೆಗೆ ನನ್ ಕಿವೀಲಿ ಯಾರೂ ಪಿಸುಗುಟ್ಟಿದ ಅನುಭವ. ಗಾಳಿ ಮೂಲಕ ಮಾತಾಡಿದ ಹಾಗೆ; ಹಕ್ಕಿಗಳ ಮೂಲಕ ಮಿಡಿದ ಹಾಗೆ. ದೂರ್ದಲ್ಲಿ ನೋಡಿದ್ರೆ ಸಮಾಧಿಗಳು. ಆಗ ನಾನು ಒಬ್ನೇ ಅಂದ್ಕೋತೀನಿ – ಅಯ್ಯೊ ನಿಮ್ ಮನೆ ಕಾಯಾಗ್ ಹೋಗ, ಸುಮ್ನೆ ಯಾಕ್ ಪಿಸುಗುಡ್ತೀರಿ ? ಗಾಳೀಲ್ ಯಾಕ್ ತೇಲ್ತೀರಿ ? ರೂಪುಗಳಾಗ್ ಬನ್ರಪ್ಪ ರೂಪುಗಳಾಗ್ ಬನ್ರಿ ಅಂದ್ರೆ ಒಂದ್ ರೂಪಾನೂ ಇಲ್ಲ; ಬರೀ ಪಿಸುಗುಡೊ ಸದ್ದು! ಸಮಾಧಿ! ಆಗ ನಂಗೆ ಸಂಕಟ ತಡ್ಕಳಾಕಾಗಲ್ಲ ಒಬ್ನೇ ಕೂತು ಅತ್ ಬಿಡ್ತೇನೆ !'

ರಾಜಕುಮಾರ್ ಅವರ ಈ ಮಾತುಗಳಲ್ಲಿ ಕವಿತೆಯೊಂದರ ರೂಪಕ ಶಕ್ತಿಯಿದೆ. ಇಲ್ಲಿ ಕಾಡಿಸುವ, ತಳಮಳಿಸುವ ಮನಸ್ಸು ಬೇರಾವುದೂ ಅಲ್ಲ – ಮುತ್ತುರಾಜ್ !

೪. ವೀರಪ್ಪನ್ ಅಪಹರಣ ಮಾಡಿದಾಗ ೧೦೮ ದಿನಗಳ ಕಾಲ ಕಾಡುವಾಸ. ದಿನವೂ ಕಾಲ್ನಡಿಗೆ. ಮೊದಲೇ ಇದ್ದ ಮಂಡಿನೋವು ಹೆಚ್ಚಾಯಿತು. ಕಾಡಿನಿಂದ ಬಂದ ಮೇಲೆ ಕೆಲಕಾಲಾನಂತರ ಮಂಡಿ ಮತ್ತು ಸೊಂಟದ ನೋವಿಗೆ ಶಸ್ತ್ರಚಿಕಿತ್ಸೆ ಮಾಡಿಸಲಾಯಿತು. ಆದರೂ ಪೂರ್ಣ ಗುಣವಾಗಿರಲಿಲ್ಲ. ತೀರಾ ಇತ್ತೀಚೆಗೆ ರಾಜಕುಮಾರ್ ಅವರು ನನ್ನೊಂದಿಗೆ ಮಾತನಾಡುತ್ತ ಹೇಳಿದರು. 'ಆಪರೇಷನ್ ಮಾಡಿಸ್ದೆ ಇದ್ದಿದ್ರೆ ಏನಾಗಿತ್ತು ಸಾರ್, ನೋವು ಇರ್ತಾ ಇತ್ತು. ನಾವು ಮನುಷ್ಯರು ನೋವಿನ ಜೊತೆ ಬದುಕೋದ್ ಕಲೀಬೇಕು. ನೋವಿನ ಜೊತೆ ವಿಶ್ವಾಸ ಬೆಳುಸ್ಬೇಕು; ಸ್ನೇಹ ಬೆಳುಸ್ಬೇಕು. ಇಬ್ಬರೂ ವಿಶ್ವಾಸದಿಂದ ಜೊತೇಲ್ ಬಾಳ್ಬೇಕು; ಅಷ್ಟೆ!'

ದೈಹಿಕ ನೋವುಗಳನ್ನು ಕುರಿತ ಈ ಮಾತುಗಳಲ್ಲಿ ರೂಪಕ ಶಕ್ತಿಯಿದೆಯೆಂದು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ.

ಇಂತಹ ನೂರಾರು ಪ್ರಸಂಗಗಳ ಮೂಲಕ ರಾಜಕುಮಾರ್ ಅವರ ವ್ಯಕ್ತಿತ್ವವನ್ನು ನಿರೂಪಿಸುತ್ತ ಹೋಗಬಹುದು. ಒಂದೇ ಮಾತಿನಲ್ಲಿ ಹೇಳಬೇಕೆಂದರೆ, ನನಗೆ ತುಂಬಾ ಮಹತ್ವಪೂರ್ಣವೆನಿಸಿದ್ದು – ಡಾ|| ರಾಜಕುಮಾರ್ ಎಂಬ ರೂಪದೊಳಗಿನ ರೂಪಕ ಮತ್ತು ಮೈಯ್ಯೊಳಗಿನ ಮನಸ್ಸು ಮುತ್ತುರಾಜ್.

ಮುತ್ತುರಾಜ್ ಮಣ್ಣಾಗಿದ್ದಾರೆ. ಆದರೆ ರೂಪಕಗಳ ಮೂಲಕ ಮಾತಾಡುತ್ತಲೇ ಇರುತ್ತಾರೆ.




**ಪ್ರೊ|| ಬರಗೂರು ರಾಮಚಂದ್ರಪ್ಪ**
೨೭೫, ೧೧ನೇ 'ಬಿ' ಅಡ್ಡರಸ್ತೆ, ಜೆ. ಪಿ. ನಗರ
೨ನೇ ಹಂತ, ಬೆಂಗಳೂರು - ೫೬೦ ೦೭೮




# ರೂಪಾಯಿಯ ಮುಕ್ತ ವ್ಯಾಪಾರ ಸೂಕ್ತವೇ ?

ವಿದೇಶೀಯರ ಅಥವಾ ಅನಿವಾಸಿ ಭಾರತೀಯರ ಹೂಡಿಕೆಯ ನಿರೀಕ್ಷೆಯನ್ನು ಅವಲಂಬಿಸಿದರೆ ಅನುಕೂಲಕ್ಕಿಂತ ಅಪಾಯವೇ ಹೆಚ್ಚು. ಹಾಗೆಯೇ ಅಂತರರಾಷ್ಟ್ರೀಯ ವಲಯದಲ್ಲಿ ನಮ್ಮ ಪ್ರಭಾವ ಹೆಚ್ಚಬೇಕಾದರೆ ಎಲ್ಲಕ್ಕಿಂತ ಮೊದಲು ನಮ್ಮಲ್ಲಿರುವ ಬಡತನ, ವಿದ್ಯಾವಿಹೀನತೆ, ಅನಾರೋಗ್ಯ, ಸಂಶೋಧನಾ ಸಾಮರ್ಥ್ಯ, ಆಡಳಿತದಲ್ಲಿ ದಕ್ಷತೆ ಮತ್ತು ಪ್ರಾಮಾಣಿಕತೆ, ಖಾಸಗಿವಲಯದಲ್ಲಿ ಸಾಮಾಜಿಕ ಪ್ರಜ್ಞೆ ಮತ್ತು ಸಾಮರ್ಥ್ಯ ಮೊದಲಾದವುಗಳು ತೀಕ್ಷ್ಣವಾಗಿ ಬದಲಾಯಿಸಬೇಕಾದುದು ಅವಶ್ಯಕ.

**ಡಾ|| ಕೆ. ಎಸ್. ಕೃಷ್ಣಸ್ವಾಮಿ**

ಆರ್ಥಿಕ ಸುಧಾರಣೆಗಳು ಮತ್ತು ವಿಶ್ವವ್ಯಾಪಾರ ಸಂಸ್ಥೆಯ ಸದಸ್ಯತ್ವದ ಪರಿಣಾಮವಾಗಿ ದೇಶದ ವಿದೇಶೀ ವಿನಿಮಯದ ಪ್ರಚಲಿತ ಖಾತೆಯಲ್ಲಿ (current account) ೧೯೯೦ರ ದಶಕದಲ್ಲಿ ಸಾಕಷ್ಟು ಪರಿವರ್ತನೆಯಾಗಿದೆ. ವ್ಯಾಪಾರದ ಆಯವ್ಯಯಗಳು, ಸೇವಾಶುಲ್ಕಗಳು, ವಿದೇಶೀ ಪ್ರಯಾಣ, ಅಂತರ ರಾಷ್ಟ್ರೀಯ ಸುಂಕಗಳು ಇತ್ಯಾದಿಗಳ ಮೇಲಿದ್ದ ನಿರ್ಬಂಧಗಳು ಬಹುಮಟ್ಟಿಗೆ ಕಡಿಮೆಯಾಗಿವೆ. ಆದರೆ ವಿದೇಶೀ ವಿನಿಮಯದ ಬಂಡವಾಳ ಖಾತೆಯಲ್ಲಿ (capital account) ಸಾಲಸೋಲಗಳು, ಬಂಡವಾಳ ಹೂಡಿಕೆ ಮೊದಲಾದವುಗಳ ಮೇಲಿನ ನಿರ್ಬಂಧಗಳು ಸ್ವಲ್ಪಮಟ್ಟಿಗೆ ಮಾತ್ರ ಸಡಿಲಿಸಲ್ಪಟ್ಟಿವೆ. ಈ ಖಾತೆಯ ಪರಿವರ್ತನೆ (convertibility) ಯನ್ನು ೧೯೯೭ರಲ್ಲಿ ರಿಸರ್ವ್ ಬ್ಯಾಂಕಿನ ಉಪ ಗವರ್ನರ್ ಆಗಿದ್ದ ಶ್ರೀ ತಾರಾಪೋರ್‌ರವರ ನೇತೃತ್ವದ ಸಮಿತಿಯೊಂದು ಪರಿಶೀಲಿಸಿ ಕೆಲವು ಸಲಹೆಗಳನ್ನು ಮಾಡಿತ್ತು. ಆದರೆ ಅದೇ ಸಮಯದಲ್ಲಿ ಸರ್ವಾಂಗೀಣ ಪರಿವರ್ತನೆ (full convertibility)ಯನ್ನು ಅನುಸರಿಸಿದ್ದ ದಕ್ಷಿಣ ಪೂರ್ವ ಏಷ್ಯಾದ ಕೆಲವು ಪ್ರದೇಶಗಳು, ಮೆಕ್ಸಿಕೊ ಮುಂತಾದವು ಅನುಭವಿಸಿದ ಷೇರು ಪೇಟೆ ಕುಸಿತ ಮುಂತಾದ ಉತ್ಕಟ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಭಾರತವು ವಿಧಿಸಿದ ನಿರ್ಬಂಧಗಳಿಂದ ಸ್ಥಳೀಯ ಆರ್ಥಿಕ ವ್ಯವಹಾರಗಳ ಮೇಲೆ ಆಗುವ ದುಷ್ಪರಿಣಾಮಗಳನ್ನು ತಪ್ಪಿಸಿಕೊಳ್ಳಲು ಸಾಧ್ಯವಾಯಿತು. ಅಲ್ಲಿಂದೀಚೆಗೆ ದೇಶದ ಪ್ರಗತಿ, ವಿದೇಶೀ ವಿನಿಮಯ ಸಂಗ್ರಹಣೆ, ಬಜೆಟ್ ಮತ್ತು ಬೆಲೆಗಳು ಉತ್ತಮ ಸ್ಥಿತಿಗೆ ಬಂದಂತೆ ಬಂಡವಾಳ ಖಾತೆಯ ಕೆಲವು ನಿಯಮಗಳನ್ನೂ ಬದಲಾಯಿಸಲು ಸಾಧ್ಯವಾಗಿದೆ. ನಮ್ಮ ದೇಶದ ಸಂಸ್ಥೆಗಳು ಅಥವಾ ಪ್ರಜೆಗಳು ಪರದೇಶಗಳಲ್ಲಿ ಮಾಡಬಹುದಾದ ಹೂಡಿಕೆ ಅಥವಾ ಸಾಲಗಳ ಪ್ರಮಾಣವನ್ನು ಹೆಚ್ಚಿಸಿರುವುದಲ್ಲದೆ ಆಡಳಿತ ನಿಯಮಗಳನ್ನು ಸರಳೀಕರಣಗೊಳಿಸಲಾಗಿದೆ. ಇವೆಲ್ಲವೂ ಕ್ರಮೇಣ ಜಾರಿಗೆ ಬಂದಿರುವುದರಿಂದ ಹಣಕಾಸು ಮಾರುಕಟ್ಟೆಗಳಲ್ಲಿ (financial markets) ತೀವ್ರ ಏರುಪೇರುಗಳಿಗೆ ಅವಕಾಶವಾಗಿಲ್ಲ. ಮಾರುಕಟ್ಟೆಗಳ ನಿರೀಕ್ಷಣೆಯಲ್ಲಿ ಈ ಖಾತೆಯ ಪರಿವರ್ತನೆ ಮುಂದೆಯೂ ನಿಧಾನಗತಿಯಲ್ಲಿ ಮುಂದುವರೆಯಬಹುದೆಂದು ನಿರೀಕ್ಷಿಸಲಾಗಿತ್ತು. ಆದರೆ, ಈಗ ದಿಢೀರನೆ ಪ್ರಧಾನಿ ಮನಮೋಹನ್ ಸಿಂಗ್‌ರ ಸೂಚನೆಯ ಫಲವಾಗಿ ರಿಸರ್ವ್ ಬ್ಯಾಂಕಿನ ಮಾಜಿ ಉಪ ಗವರ್ನರ್ ಶ್ರೀ ತಾರಾಪೋರ್‌ರವರ ಅಧ್ಯಕ್ಷತೆಯಲ್ಲಿ ಮತ್ತೊಂದು ಸಮಿತಿಗೆ ಜುಲೈ ೩೧ರ ಒಳಗೆ ವರದಿ ಒಪ್ಪಿಸಬೇಕೆಂಬ ತರಾತುರಿಗೆ ಕಾರಣವೇನಿರಬಹುದು ? ದೇಶದ ಆರ್ಥಿಕ ಪರಿಸ್ಥಿತಿಯಲ್ಲಾಗಲಿ, ವಿದೇಶೀ ವಿನಿಮಯ ಮಾರುಕಟ್ಟೆಗಳಲ್ಲಾಗಲಿ, ಸರ್ಕಾರಗಳ ಬಜೆಟ್‌ನಲ್ಲಾಗಲಿ, ಜನತೆಯ ಜೀವನ ಸೌಕರ್ಯಗಳಲ್ಲಾಗಲಿ, ಹಾಗೆ ಆಗಿರಬಹುದಾದ ಬದಲಾವಣೆಗಳು ಕ್ರಾಂತಿಕಾರಕ ಬದಲಾವಣೆಗಳೇನು ? ಅಥವಾ ಪ್ರಧಾನಿಯವರ ಮೇಲಿರುವ ಇತರೆ ಒತ್ತಡಗಳ ಪರಿಣಾಮವೆ ?

ತಮ್ಮ ಮುಂಬಯಿ ಭಾಷಣದಲ್ಲಿ ಪ್ರಧಾನಿಯವರು ಬಂಡವಾಳ ಖಾತೆಯ ಪರಿವರ್ತನೆ (capital account convertibility or CAC)ಯ ಪುನರ್ವಿಮರ್ಶೆಗೆ ಕೊಟ್ಟಿರುವ ಕಾರಣಗಳೆಂದರೆ : (೧) ದೇಶದ ಸಮಗ್ರ ಉತ್ಪನ್ನದ (GDP) ವಾರ್ಷಿಕ ಬೆಳವಣಿಗೆ ಈಗಾಗಲೇ ಸರಾಸರಿ ಶೇಕಡ ೮ರಷ್ಟಾಗಿದೆ. ಇದು ಆದಷ್ಟು ಬೇಗ ಸರಾಸರಿ ೧೦ರಷ್ಟಾಗಲು ಪ್ರಯತ್ನಿಸಬೇಕು; (೨) ಹಣದುಬ್ಬರ ಮತ್ತು ಸಗಟು ಬೆಲೆಗಳ ಸೂಚ್ಯಂಕಗಳು ಹತೋಟಿಯಲ್ಲಿವೆ. ಮತ್ತು ರಾಷ್ಟ್ರ ಮತ್ತು ರಾಜ್ಯ ಸರ್ಕಾರಗಳ ಒಟ್ಟಾರೆ ಬಜೆಟ್ ಖೋತಾ ಕೂಡ ನಿಯಮಿತ ಸ್ಥಿತಿಯಲ್ಲಿದೆ; (೩) ವಿದೇಶೀ ವಿನಿಮಯ ಸಂಗ್ರಹಣೆ ಅಮೆರಿಕನ್ ಡಾಲರ್ ೧೪೦ ಬಿಲಿಯನ್ನುಗಳಿಗಿಂತ ಮೀರಿ ಇರುವುದರಿಂದ ವಿದೇಶೀ ವಿನಿಮಯದ ಮೇಲಿರುವ ನಿರ್ಬಂಧಗಳನ್ನು ತೆಗೆಯಲು (ಅಥವಾ ಕಡಿಮೆ ಮಾಡಲು) ಅವಕಾಶವಿದೆ; (೪) ವಿದೇಶೀ ಬಂಡವಾಳಗಾರರು ಭಾರತದಲ್ಲಿ ತಮ್ಮ ಹೂಡಿಕೆಯನ್ನು ವಿಸ್ತರಿಸಲು ಉತ್ಸುಕರಾಗಿದ್ದಾರೆ. ಇದರ ಲಾಭವನ್ನು ಪಡೆಯಲು ಇದು ಸೂಕ್ತ ಸಮಯ; (೫) ಅಂತರರಾಷ್ಟ್ರೀಯ ಮಾರುಕಟ್ಟೆಗಳಲ್ಲಿ ರುಪಾಯಿಯ ಮೌಲ್ಯ ಸಾಕಷ್ಟು ಸ್ಥಿರವಾಗಿರುವುದಲ್ಲದೆ ಇಲ್ಲಿಯ ಬಡ್ಡಿದರಗಳು ಆಕರ್ಷಕವಾಗಿರುವುದರಿಂದ ಅನಿವಾಸಿ ಭಾರತೀಯರು ಮತ್ತು ಇತರರು ಇಲ್ಲಿ ತಮ್ಮ ಉಳಿತಾಯವನ್ನು ಹೂಡಲು ಪರಿಸ್ಥಿತಿ ಅನುಕೂಲವಾಗಿದೆ; ಮತ್ತು (೬) ಸಿಎಸಿ (CAC)ಯ ಪರಿಣಾಮವಾಗಿ ಭಾರತದ ವ್ಯಾಪಾರ ವ್ಯವಹಾರಗಳು ಅಂತರರಾಷ್ಟ್ರೀಯ ಮಟ್ಟದಲ್ಲಿ ಹೆಚ್ಚು ಪ್ರಭಾವಶಾಲಿಯಾಗಲು ಸಾಧ್ಯವಾಗುತ್ತದೆ. ದೇಶದ ಸಮಗ್ರ ಉತ್ಪನ್ನ, ಬೆಲೆಗಳ ಮೇಲಿನ ಹತೋಟಿ, ವಿದೇಶೀ ವಿನಿಮಯದ ಸಂಗ್ರಹಣೆ ಇತ್ಯಾದಿಗಳು ಈಗ ಸಾಕಷ್ಟು ಉತ್ತಮಗೊಂಡಿರುವುದೇನೋ ವಾಸ್ತವ. ಮುಂದಿನ ಬೆಳವಣಿಗೆಗೆ ದೇಶದಲ್ಲಿನ ಹೂಡಿಕೆ ಇನ್ನೂ ಹೆಚ್ಚಬೇಕಾಗಿರುವುದೂ ನಿರ್ವಿವಾದ. ಆದರೆ ಇದರ ತಳಹದಿ ಭದ್ರವಾಗಿರಬೇಕಾದರೆ ದೇಶದೊಳಗಿನ ಉಳಿತಾಯದ ಪ್ರಮಾಣ ಗಣನೀಯವಾಗಿ ಹೆಚ್ಚಬೇಕು. ವಿದೇಶೀಯರ ಅಥವಾ ಅನಿವಾಸಿ ಭಾರತೀಯರ ಹೂಡಿಕೆಯ ನಿರೀಕ್ಷೆಯನ್ನು ಅವಲಂಬಿಸಿದರೆ ಅನುಕೂಲಕ್ಕಿಂತ ಅಪಾಯವೇ ಹೆಚ್ಚು. ಹಾಗೆಯೇ ಅಂತರರಾಷ್ಟ್ರೀಯ ವಲಯದಲ್ಲಿ ನಮ್ಮ ಪ್ರಭಾವ ಹೆಚ್ಚ ಬೇಕಾದರೆ ಎಲ್ಲಕ್ಕಿಂತ ಮೊದಲು ನಮ್ಮಲ್ಲಿರುವ ಬಡತನ, ವಿದ್ಯಾವಿಹೀನತೆ, ಅನಾರೋಗ್ಯ, ಸಂಶೋಧನಾ ಸಾಮರ್ಥ್ಯ, ಆಡಳಿತದಲ್ಲಿ ದಕ್ಷತೆ ಮತ್ತು ಪ್ರಾಮಾಣಿಕತೆ, ಖಾಸಗಿವಲಯದಲ್ಲಿ ಸಾಮಾಜಿಕ ಪ್ರಜ್ಞೆ ಮತ್ತು ಸಾಮರ್ಥ್ಯ ಮೊದಲಾದವುಗಳು ತೀಕ್ಷ್ಣವಾಗಿ ಬದಲಾಯಿಸಬೇಕಾದುದು ಅವಶ್ಯಕ.

ಬಂಡವಾಳ ಖಾತೆಯ ಪರಿವರ್ತನೆಗೆ ಮೊದಲು ನಮ್ಮ ಹಣಕಾಸು ಸಂಸ್ಥೆಗಳು ಈ ಬದಲಾವಣೆಯನ್ನು ಅರಗಿಸಿಕೊಳ್ಳಲು ಶಕ್ತವಾಗಿವೆಯೇ ಎಂದು ಪರಿಶೀಲಿಸುವುದು ಅಗತ್ಯ. ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ರೂಪಾಯಿ ಮೇಲಿರುವ ನಿರ್ಬಂಧಗಳನ್ನು ತೊಡೆದುಹಾಕಿ ಎಲ್ಲಾ ವಿಧವಾದ ವ್ಯವಹಾರಗಳಿಗೆ ಮುಕ್ತ ಅವಕಾಶ ಕೊಡುವುದರಿಂದ ಅನೇಕ ವಿಧದ ತುರ್ತುಪರಿಸ್ಥಿತಿಗಳ ನಿರ್ಮಾಣಕ್ಕೆ ಅನುಕೂಲ ಮಾಡಿಕೊಟ್ಟಂತಾಗುತ್ತದೆ. ಭಾರತೀಯರು ಪರದೇಶಗಳಲ್ಲಿ ಮತ್ತು ಪರದೇಶದವರು ಭಾರತದಲ್ಲಿ ಮನಬಂದಂತೆ ಆಸ್ತಿಪಾಸ್ತಿಗಳನ್ನು ಮಾರಾಟ ಮಾಡಬಹುದು. ಅಥವಾ ಬೆಲೆಗಳು ಮತ್ತು ಬಡ್ಡಿದರಗಳ ಏರಿಳಿತದಂತೆ ಒಂದು ದೇಶದಿಂದ ಮತ್ತೊಂದಕ್ಕೆ ಹಣವನ್ನು ಸುಲಭವಾಗಿ ವರ್ಗಾಯಿಸಲು ಸಾಧ್ಯವಾದಾಗ, ಹೂಡಿಕೆದಾರರು ಮತ್ತು ಠೇವಣಿದಾರರು ಏಕಾಏಕಿ ಕಾಡೆಮ್ಮೆಗಳ ಹಿಂಡಿನಂತೆ ದಿಕ್ಕೆಟ್ಟು ಓಡುವುದರಿಂದ ಮಾರುಕಟ್ಟೆಗಳೆಲ್ಲಾ ಅಸ್ತವ್ಯಸ್ತವಾಗಿ ದೇಶದ ಪ್ರಗತಿ ಕುಂಠಿತವಾಗುವುದನ್ನು ಅನೇಕ ರಾಷ್ಟ್ರಗಳು ಈಗಾಗಲೇ ಅನುಭವಿಸಿವೆ. ಮೇಲೆ ತಿಳಿಸಿದಂತೆ ೧೯೯೭ರಲ್ಲಿ ಏಷ್ಯಾ ಮತ್ತು ದಕ್ಷಿಣ ಅಮೆರಿಕಾದ ಅನೇಕ ದೇಶಗಳು ತೊಂದರೆಗೀಡಾಗಿದ್ದು

ಅಂತರ್ರಾಷ್ಟ್ರೀಯ ಹಣಕಾಸು ಸಂಸ್ಥೆಯು ಈ ಕುರಿತು ನೀಡಿದ ಸಲಹೆಯನ್ನು ಪಾಲಿಸಿ, ಅವಸರದಲ್ಲಿ ತಮ್ಮ ನಾಣ್ಯಗಳನ್ನು ಮುಕ್ತವಾಗಿ ವಿಶ್ವ ಮಾರುಕಟ್ಟೆಯಲ್ಲಿ ವ್ಯಾಪಾರ ಮಾಡಲು ಅವಕಾಶ ಕಲ್ಪಿಸಿದುದರಿಂದ. ಅಲ್ಲಿಂದೀಚೆಗೆ ಆ ದೇಶಗಳೂ ಈ ವಿಷಯದಲ್ಲಿ ಎಚ್ಚರವಹಿಸಿ ಹಿಂದೆ ಸರಿದಿದ್ದಾವೆ; ಆದರೆ ಆ ಸಂದರ್ಭದಲ್ಲಿ ಅನೇಕ ಕಷ್ಟಕೋಟಲೆಗಳನ್ನು ಅನುಭವಿಸಿದ್ದಲ್ಲದೆ ತಮ್ಮ ಹಣಕಾಸು ಸಂಸ್ಥೆಗಳು ಬೀದಿಪಾಲಾದುದನ್ನೂ ನೋಡಬೇಕಾಯಿತು. ಹಣಕಾಸು ವಲಯದಲ್ಲಿ ಮುಕ್ತ ವ್ಯಾಪಾರಕ್ಕೆ ಅವಕಾಶವಾದಾಗ ತೀವ್ರತರನಾದ ಆತಂಕ ಒಂದು ದೇಶದಿಂದ ಮತ್ತೊಂದಕ್ಕೆ ಸಾಂಕ್ರಾಮಿಕ ರೋಗದಂತೆ ಹರಡಿ ಎಲ್ಲಾ ಮಾರುಕಟ್ಟೆಗಳಲ್ಲೂ ವಿಪರೀತ ಏರುಪೇರುಗಳಾಗುವುದು ಸಾಮಾನ್ಯ. ಈ ಬಗೆಯ ಭೀತಿ ಹರಡಲು ಯಾವುದಾದರೂ ಕ್ಷುಲ್ಲಕ ಕಾರಣವಿದ್ದರೆ ಸಾಕು. ಅನೇಕ ಬಾರಿ ಆರ್ಥಿಕ ಪರಿಣತರೆನ್ನಿಸಿದಂತಹ ಕೆಲವರ ಅಭಿಪ್ರಾಯದಿಂದಲೇ ಮಾರುಕಟ್ಟೆಗಳು ಅಸ್ತವ್ಯಸ್ತವಾಗಬಹುದು. ರಾಜಕೀಯ ಘಟನೆ, ಬಹುರಾಷ್ಟ್ರೀಯ ಕಂಪನಿಯೊಂದರ ಕುಸಿತ, ಷೇರು ಮಾರುಕಟ್ಟೆಗಳಲ್ಲಿ ತೀವ್ರ ಇಳಿತ, ಯುದ್ಧಭೀತಿ ಇಂಥವೇ ಯಾವುದಾದರೂ ಕಾರಣದಿಂದ ಪ್ರಾರಂಭವಾಗುವ ಈ ಜಾಡ್ಯ ಬಹುಬೇಗ ಇತರ ದೇಶಗಳ ಆರ್ಥಿಕ ವ್ಯವಸ್ಥೆಯನ್ನು ಸಂಕಟಕ್ಕೀಡುಮಾಡಬಹುದು.

ಇಂತಹ ಸೂಕ್ಷ್ಮ ಪರಿಸ್ಥಿತಿಯಲ್ಲಿ ಪ್ರಧಾನಿಯವರು ಬಂಡವಾಳ ವ್ಯವಹಾರಗಳ ಖಾತೆಯನ್ನು ಸಂಪೂರ್ಣವಾಗಿ ಮುಕ್ತಗೊಳಿಸುವುದರಲ್ಲಿ ತೋರುತ್ತಿರುವ ಆತುರಕ್ಕೆ ಕಾರಣವೇನು ? ವಿಶ್ವಬ್ಯಾಂಕ್, ಐ.ಎಂ.ಎಫ್., ವಿಶ್ವವ್ಯಾಪಾರ ಸಂಸ್ಥೆ ಮೊದಲಾದ ಬಹುರಾಷ್ಟ್ರೀಯ ಸಂಸ್ಥೆಗಳಲ್ಲಿ ನಿರ್ಧರಿಸಲ್ಪಡುವ ನೀತಿಗಳೆಲ್ಲಾ ಹೆಚ್ಚಾಗಿ ಅಭಿವೃದ್ಧಿಹೊಂದಿರುವ ಪಾಶ್ಚಾತ್ಯ ದೇಶಗಳ ಪರವಾಗಿರುವುದು ಎಲ್ಲರಿಗೂ ತಿಳಿದಿರುವ ವಿಷಯ. ಈಗಾಗಲೇ ಸಾಕಷ್ಟು ಮುಕ್ತಗೊಳಿಸಿರುವ ಪ್ರಚಲಿತ ವ್ಯಾಪಾರ ಖಾತೆಯನ್ನು ಇನ್ನೂ ಹೆಚ್ಚು ಅನಿರ್ಬಂಧಿತಗೊಳಿಸಬೇಕೆಂದು ಒತ್ತಾಯಿಸುತ್ತಿರುವ ಯೂರೋಪ್ ಮತ್ತು ಅಮೆರಿಕಾ ದೇಶಗಳು ಇತರ ದೇಶಗಳಿಂದ ತಮ್ಮ ದೇಶದೊಳಕ್ಕೆ ಬರಬಹುದಾದ ಆಮದಿಗೆ ನಾನಾ ತರಹದ ಅಡಚಣೆಗಳನ್ನು ಒಡ್ಡಿದ್ದು, ಅವುಗಳನ್ನು ತೆಗೆದುಹಾಕುವ ಸೂಚನೆಯನ್ನೇನೂ ಕೊಡುತ್ತಿಲ್ಲ. ಈ ಅಸಮತೆ ಇರುವವರೆಗೆ ಅಂತರರಾಷ್ಟ್ರೀಯ ವ್ಯವಹಾರಗಳಲ್ಲಿ ಅಭಿವೃದ್ಧಿಶೀಲ ದೇಶಗಳಿಗೆ ನ್ಯಾಯ ದೊರಕುವುದಿಲ್ಲ. ಅಲ್ಲದೆ, ಪಾಶ್ಚಾತ್ಯ ದೇಶಗಳ ವಿತ್ತ ಸಂಸ್ಥೆಗಳ ಬೃಹತ್ಪ್ರಮಾಣದ ಸಂಪನ್ಮೂಲವಾಗಲಿ, ಶಕ್ತಿಯಾಗಲಿ ನಮ್ಮ ದೇಶದ ಬ್ಯಾಂಕು ಇತ್ಯಾದಿಗಳಿಗೆ ಇಲ್ಲದಿರುವುದರಿಂದ ಮುಕ್ತ ಮಾರುಕಟ್ಟೆಗಳಲ್ಲಿ ಸ್ಪರ್ಧಿಸುವುದು ಕಷ್ಟ.

ಬಂಡವಾಳ ವ್ಯವಹಾರಗಳನ್ನು ಪೂರ್ಣವಾಗಿ ಮಾರುಕಟ್ಟೆಯ ಸ್ವಾಧೀನಕ್ಕೆ ಬಿಟ್ಟರೆ ಆದರಿಂದ ಇಲ್ಲಿಯ ಕೈಗಾರಿಕಾ ಅಥವಾ ವ್ಯವಸಾಯ ಸಂಬಂಧ ಕ್ಷೇತ್ರಗಳಲ್ಲಿ ಹೂಡಿಕೆ ಹೆಚ್ಚುವುದೆಂಬ ಎಣಿಕೆಗೆ ಆಧಾರವೇನೂ ಇಲ್ಲ. ಹೊರದೇಶದಿಂದ ಬರಬಹುದಾದ ಬಂಡವಾಳಗಳೆಲ್ಲಾ ಸ್ಥಿರ ಆಸ್ತಿಪಾಸ್ತಿಗಳಿಗಾಗಿ ಮಾತ್ರವಲ್ಲ; ಅದಕ್ಕಿಂತ ಹೆಚ್ಚಾಗಿ ಷೇರು ಮಾರ್ಕೆಟ್ಟಿನ ವ್ಯಾಪಾರಗಳಿಗೆ ಬಂದ ಈ ವಿಧವಾದ ಹೂಡಿಕೆಗಳು ಬಂದಷ್ಟೇ ಶೀಘ್ರವಾಗಿ ಬೇರೆ ಕಡೆಗಳಿಗೆ ಹರಿದುಹೋಗಬಹುದು. ಹಣಪ್ರಪಂಚದ ವ್ಯಾಪಾರಗಳೆಲ್ಲಾ ಲಾಭಕ್ಕಾಗಿ ನಡೆಯುವುದರಿಂದ ಅವು ನಮ್ಮ ಅನುಕೂಲಕ್ಕೆ ಅನುಗುಣವಾಗುತ್ತವೆಂದು ನಂಬುವುದು ಶುದ್ಧ ಅವಿವೇಕ. ಎಲ್ಲಕ್ಕಿಂತ ಹೆಚ್ಚಾಗಿ ಬಂಡವಾಳ ಖಾತೆಯನ್ನು ಸಂಪೂರ್ಣ ಮುಕ್ತಗೊಳಿಸಿದರೆ ಭಾರತೀಯರು ಕೂಡ ತಮ್ಮ ಉಳಿತಾಯಗಳ ಹೂಡಿಕೆಯನ್ನು ಅಂತರರಾಷ್ಟ್ರೀಯವಾಗಿ ಎಲ್ಲಿ ಬೇಕಾದರೂ ಮಾಡಬಹುದು. ತಾವು ಮಾಡುವ ರಫ್ತಿನಿಂದ ದೊರಕುವ ಮೊತ್ತವನ್ನು ಈಗಿನಂತೆ ರಿಸರ್ವ್ ಬ್ಯಾಂಕಿಗೆ ಒಪ್ಪಿಸುವುದರ ಬದಲು ಬೇರೆಲ್ಲಾದರೂ ಠೇವಣಿಮಾಡಿ ಹೇಗೆ ಬೇಕೋ ಹಾಗೆ ಹೊರದೇಶಗಳಲ್ಲಿ ಉಪಯೋಗಿಸಬಹುದು. ಈ ಅವಕಾಶಗಳೆಲ್ಲವೂ ಇದ್ದರೆ ಅಂತರರಾಷ್ಟ್ರೀಯ ಮಾರುಕಟ್ಟೆಯಲ್ಲಿ ರೂಪಾಯಿ ದರ ಹೇಗೆ ಬದಲಾಯಿಸುತ್ತದೆ ಎಂಬುದು ಯಾರ ಅಧೀನದಲ್ಲೂ ಇರುವುದಿಲ್ಲ. ಅದರ ಏರಿಳಿತದಂತೆ ನಮ್ಮ ಆಮದು ರಫ್ತುಗಳೆಲ್ಲಾ ಯದ್ವಾತದ್ವಾ ವ್ಯತ್ಯಾಸವಾಗಿ, ನಾವು ಸಂಗ್ರಹಿಸಿರುವ ವಿದೇಶೀ ವಿನಿಮಯವೆಲ್ಲಾ ಬಹುಬೇಗ ಕರಗಿಹೋಗಲು ಸಾಧ್ಯ. ಅಂತೆಯೇ ದೇಶದೊಳಗಿನ ಬೆಲೆಗಳು ಮತ್ತು ಬಡ್ಡಿದರಗಳು ಅನಿಶ್ಚಿತವಾಗಿ ಎಲ್ಲಾ ವಿಧವಾದ ಯೋಜನೆಗಳೂ ತೊಂದರೆಗೊಳಗಾಗುತ್ತವೆ. ಸಾರ್ವಜನಿಕ ಕ್ಷೇತ್ರದಲ್ಲಿ ಮಾತ್ರವಲ್ಲ, ಖಾಸಗಿ ಕಂಪನಿಗಳಿಗೂ ಮೇರೆ ದಾಟಿ ಬರುವ ಹೂಡಿಕೆಗಳಲ್ಲಿ (cross-border investments) ದೀರ್ಘಕಾಲದವು ಯಾವುವು, ಅಲ್ಪಾವಧಿಯವು ಯಾವುವು ಎನ್ನುವುದು ಸ್ಪಷ್ಟವಾಗುವುದಿಲ್ಲ. ತುರ್ತುಪರಿಸ್ಥಿತಿಯೇನಾದರೂ ಕಂಡುಬಂದರೆ ಎಲ್ಲ ಹೂಡಿಕೆಗಳೂ ಹಿಂಡುಹಿಂಡಾಗಿ ಹೊರಬೀಳುವುದು ಎಲ್ಲ ದೇಶಗಳ ಅನುಭವ. ಇದರಿಂದ ವಿನಿಮಯ ದರ (exchange rate) ಪ್ರತಿಕೂಲವಾದರೂ ಹೊರಹೋಗುವ ಮೊತ್ತವೇನೂ ಕಡಿಮೆಯಾಗುವುದಿಲ್ಲವಾದ್ದರಿಂದ ಪರಿಸ್ಥಿತಿ ಬಹುಬೇಗ ಬಿಕ್ಕಟ್ಟಿಗೆ ಸಿಲುಕುತ್ತದೆ.




ಅರ್ಥಶಾಸ್ತ್ರಜ್ಞರಾದ ಪ್ರಧಾನಿಯವರಿಗೆ ಇದೆಲ್ಲಾ ತಿಳಿಯದ ವಿಷಯವೇನೂ ಅಲ್ಲ. ಆದರೂ ಈ ಸಮಯದಲ್ಲಿ ಶ್ರೀ ತಾರಾಪೋರ್‌ರವರನ್ನು ಪರಿವರ್ತನೆಯ ಸಾಧ್ಯತೆಯನ್ನು ಪುನರ್ವಿಮರ್ಶಿಸಲು ಕೇಳಿರುವುದು ಸಾಕಷ್ಟು ಊಹಾಪೋಹಗಳಿಗೆ ಎಡೆಮಾಡಿಕೊಟ್ಟಿದೆ. ತಮ್ಮ ಮೊದಲನೆಯ ವರದಿಯಲ್ಲೇ ಶ್ರೀ ತಾರಾಪೋರ್‌ರವರು ರೂಪಾಯಿಯನ್ನು ಮುಕ್ತಗೊಳಿಸುವ ಆತುರತೆ ತೋರಿದ್ದರಿಂದ ಇನ್ನೆರಡು ಮೂರು ತಿಂಗಳಲ್ಲಿ ಸಲ್ಲಿಸಬೇಕಾಗಿರುವ ವರದಿಯಲ್ಲಿ ಸಹ ಅದೇ ಆತುರತೆಯನ್ನು ನಿರೀಕ್ಷಿಸಬಹುದು. ಆದರೆ ಪ್ರಧಾನಿಯವರ ನಿಲುವಿಗೆ ಕಾರಣವೇನಿರಬಹುದು ? ಕೆಲಕಾಲದ ಹಿಂದೆ ಭಾರತಕ್ಕೆ ಬಂದಿದ್ದ ಅಂತರರಾಷ್ಟ್ರೀಯ ಹಣಕಾಸು ಸಂಸ್ಥೆಯ ವ್ಯವಸ್ಥಾಪಕ ನಿರ್ದೇಶಕ ಶ್ರೀ ರಾಡ್ರಿಗೋ ರಾಕೋರವರು ಅಭಿವೃದ್ಧಿನಿರತ ರಾಷ್ಟ್ರಗಳು ಕಷ್ಟಗಳಿಂದ ಬೇಗ ಚೇತರಿಸಿಕೊಳ್ಳಲು ಸಮರ್ಥವಾಗಿರುವುವೆಂದು ಹೇಳಿದ್ದಾರೆ. ಮನಮೋಹನ್ ಸಿಂಗ್‌ರವರು ಇದರಿಂದ ಪ್ರಭಾವಿತರಾಗಿದ್ದಾರೆಯೆ ? ಅಥವಾ ಹೊರದೇಶಗಳಲ್ಲಿ ಬಂಡವಾಳ ಹೂಡಲು ಆತುರರಾಗಿರುವ ಸ್ಥಳೀಯರು ಮತ್ತು ಸ್ಥಿತಿವಂತರಾದ ಅನಿವಾಸಿ ಭಾರತೀಯರ ಒತ್ತಡವೇ ? ರಾಜಕೀಯವಾಗಿ ಅಮೆರಿಕಾದೊಡನೆ ನಡೆಯುತ್ತಿರುವ ಅಣುಶಕ್ತಿ ವಿದ್ಯುದುತ್ಪಾದನೆಯ ಚರ್ಚೆಗಳಿಗೇನಾದರೂ ಸಂಬಂಧಿಸಿದೆಯೆ ? ಇಂತಹ ಪ್ರಶ್ನೆಗಳು ಏಕೆ ಉದ್ಭವಿಸುತ್ತವೆಯೆಂದರೆ ಬಂಡವಾಳ ಖಾತೆ ಮತ್ತು ರುಪಾಯಿಯ ಮುಕ್ತತೆಯಿಂದ ಭಾರತದ ಶೇಕಡ ೯೫ರಷ್ಟು ಜನತೆಗೆ ಆಗುವ ನೇರ ಉಪಯೋಗವೇನೂ ಕಾಣುವುದಿಲ್ಲ. ಪರದೇಶದಿಂದ ಬರಬಹುದಾದ ಹೂಡಿಕೆಗಳೆಲ್ಲಾ ಹೊಸ ಉದ್ಯಮಗಳಿಗೆ ಅಥವಾ ಅನುಕೂಲಗಳಿಗೆ ಸಹಾಯವಾಗುವ ಬದಲು ಈಗಾಗಲೇ ಉತ್ತಮ ಸ್ಥಿತಿಯಲ್ಲಿರುವ ಕೈಗಾರಿಕೆ, ವ್ಯವಸಾಯ ಮತ್ತು ವ್ಯಾಪಾರ ಸಂಸ್ಥೆಗಳನ್ನು ಅಥವಾ ಸ್ಥಿರಾಸ್ತಿಗಳನ್ನು ಕೊಳ್ಳಲು ಅವಕಾಶವಿರುವುದರಿಂದ ಕ್ರಮೇಣ ವಿದೇಶೀಯರು ನಮ್ಮ ಆರ್ಥಿಕ ವ್ಯವಸ್ಥೆಯ ಬಹುಭಾಗವನ್ನು ತಮ್ಮ ಹತೋಟಿಗೆ ತೆಗೆದುಕೊಳ್ಳಲು ಶಕ್ತರಾಗುತ್ತಾರೆ. ಹೀಗೇನಾದರೂ ಆದರೆ ಸಮಗ್ರ ಉತ್ಪನ್ನ ಹೆಚ್ಚಿದರೂ ಅದಕ್ಕೆ ತಕ್ಕಂತೆ ಉದ್ಯೋಗಾವಕಾಶಗಳು ಹೆಚ್ಚುವ ಖಾತರಿಯಿಲ್ಲ. ಈಗಾಗಲೇ ಈ ಪರಿಸ್ಥಿತಿ ಕೈಗಾರಿಕಾ ಕ್ಷೇತ್ರದಲ್ಲಿ ಕಂಡುಬಂದಿರುವುದಲ್ಲದೆ ದೊರಕುವ ಉದ್ಯೋಗಾವಕಾಶಗಳೆಲ್ಲಾ ಉನ್ನತ ಶಿಕ್ಷಣ ಹೊಂದಿರುವವರಿಗೆ ಮಾತ್ರ ಲಭ್ಯವಿರುತ್ತವೆ.

ಎಲ್ಲಕ್ಕಿಂತ ಹೆಚ್ಚಾಗಿ ಸಮಗ್ರ ಉತ್ಪನ್ನದ ವಾರ್ಷಿಕ ಬೆಳವಣಿಗೆ ಹೆಚ್ಚಿದರೂ ಅಸಮಾನತೆಗಳು ಹೆಚ್ಚುವ ಸಾಧ್ಯತೆ ಹೆಚ್ಚುತ್ತದೆಯೇ ಹೊರತು ಗ್ರಾಮೀಣ ಪ್ರದೇಶದಲ್ಲಿರುವ ಬಹುಸಂಖ್ಯಾತರಿಗೇನೂ ಪ್ರಯೋಜನವಾಗುವುದಿಲ್ಲ. ಇದನ್ನೆಲ್ಲಾ ಆಳವಾಗಿ ಅಧ್ಯಯನ ಮಾಡಿರುವ ಅಮೆರಿಕಾದ ಹಾರ್ವರ್ಡ್ ವಿಶ್ವವಿದ್ಯಾನಿಲಯದ ಪ್ರೊಫೆಸರ್ ಡಾನಿ ರಾಡ್ರಿಕ್‌ರವರು ಹೀಗೆ ಹೇಳಿದ್ದಾರೆ: ''ಈಗಾಗಲೇ ವ್ಯವಸ್ಥೆಯಲ್ಲಿ ಅಂತರ್ಗತವಾಗಿರಬಹುದಾದ ಅಪಾಯಕಾರಿ ಕೊರತೆಗಳು ಒಂದು ಮಾರುಕಟ್ಟೆಯಿಂದ ಮತ್ತೊಂದು ಮಾರುಕಟ್ಟೆಗೆ ಸಾಂಕ್ರಾಮಿಕರೋಗದಂತೆ ಹರಡುವ ಸಾಧ್ಯತೆಗಳನ್ನು ನಾವು ಹೆಚ್ಚಿಸುತ್ತೇವೆ... ಭಾರತದಂಥ ಅಭಿವೃದ್ಧಿಶೀಲ ದೇಶಗಳಲ್ಲಿ ಉಗಮಿಸುತ್ತಿರುವ ಮಾರುಕಟ್ಟೆಯ ಆರ್ಥಿಕ ನೀತಿಗಳನ್ನು ಲಂಡನ್, ಫ್ರಾಂಕ್‌ಫರ್ಟ್ ಮತ್ತು ನ್ಯೂಯಾರ್ಕ್ ನಗರಗಳಲ್ಲಿರುವ ಹತ್ತು ಹಲವು ದೇಶಗಳ ಮಾರುಕಟ್ಟೆಯ ವಿಮರ್ಶಕ ತಜ್ಞರು ತಮ್ಮ ಮನಬಂದಂತೆ ಆಡಿಸಿಬಿಡುತ್ತಾರೆ. ಒಬ್ಬ ಆರ್ಥಿಕ ತಜ್ಞನು ಕೇವಲ ವಿದೇಶೀ ಹೂಡಿಕೆದಾರರನ್ನು ತೃಪ್ತಿಪಡಿಸುವುದಕ್ಕೇ ಆದ್ಯತೆ ನೀಡಿದರೆ, ಆತ ಅಭಿವೃದ್ಧಿಯ ಉದ್ದೇಶಗಳನ್ನು ಕಡೆಗಣಿಸುವುದು ಸಹಜವೇ. ಅಂತರರಾಷ್ಟ್ರೀಯ ಬಂಡವಾಳದ ಮಾರುಕಟ್ಟೆಯ ಬಗ್ಗೆ ಅವುಗಳು ಸಮರ್ಥವೂ ವಾಸ್ತವಿಕವೂ ಎಂದು ನಂಬುವಂಥ ಅಂಧಶ್ರದ್ಧೆ ಇದ್ದಾಗ ಮಾತ್ರ ಈ ಎರಡೂ ಆದ್ಯತೆಗಳು ಸಾಕಾರವಾಗಬಹುದು.''

ಡಾ|| ಕೆ. ಎಸ್. ಕೃಷ್ಣಸ್ವಾಮಿ
ನಿವೃತ್ತ ಡೆಪ್ಯುಟಿ ಗವರ್ನರ್, ರಿಸರ್ವ್ ಬ್ಯಾಂಕ್ ಆಫ್ ಇಂಡಿಯಾ

ಭಾರತದಂತಹ ಸಾಮಾಜಿಕ ಸನ್ನಿವೇಶದಲ್ಲಿ ಹಲವಾರು ರೀತಿಯ ದ್ವಂದ್ವಗಳು, ವಿರೋಧಾಭಾಸಗಳು ಉಂಟಾಗುವುದು ಸಹಜವೇ. ಸಾಮಾಜಿಕ ನ್ಯಾಯದ ನೆಲೆಯಲ್ಲಿ ನಿಂತು ಯೋಚಿಸುವಾಗ ಜಾತಿ, ಉಪಜಾತಿ, ವರ್ಗ, ಭಾಷೆ, ಪ್ರಾಂತ್ಯ, ಧರ್ಮ, ಹೀಗೆ ಹತ್ತು ಹಲವು ಸಂಗತಿಗಳು ಧುತ್ತೆಂದು ಎದುರುಬಂದು ನಿಲ್ಲುತ್ತವೆ. ಹಲವಾರು ಸಿದ್ಧಾಂತಗಳಿಗೆ, ತತ್ವಗಳಿಗೆ, ಧರ್ಮಗಳಿಗೆ, ಚಳುವಳಿಗಳಿಗೆ, ನೆಲೆಯಾಗಿರುವ ಸಮಾಜದಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಸಹಜ ಪ್ರಕ್ರಿಯೆಯಾಗಿರುತ್ತವೆ. ಹಾಗಾಗಿ ಯಾವುದೇ ಒಂದು ಸಿದ್ಧಾಂತದಿಂದ ಎಲ್ಲಾ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ದೊರೆಯುವುದೆಂದು ಅಪೇಕ್ಷಿಸುವುದು ತಪ್ಪಾಗುತ್ತದೆ. ಹಾಗಾಗಿ, ಯಾವುದೇ ಸಂಘಟನೆ – ಪಕ್ಷವು ತನ್ನ ಸೈದ್ಧಾಂತಿಕ ನಿಲುವುಗಳನ್ನು ಸಡಿಲಗೊಳಿಸದೆಯೇ, ಇತರ ಸಂಘಟನೆಗಳೊಡನೆ ಕೈಜೋಡಿಸಿ ಹೋರಾಡುವುದು ಪ್ರಸ್ತುತ ಸಂದರ್ಭದಲ್ಲಿ ಅವಶ್ಯವೂ ಹೌದು, ನ್ಯಾಯೋಚಿತವೂ ಹೌದು. ಈ ರೀತಿಯ ಸಮಗ್ರ, ವಿಶಾಲ ದೃಷ್ಟಿಕೋನವನ್ನು ಸಂಘಟಿತ ಕಾರ್ಮಿಕ ವಲಯ ಬೆಳೆಸಿಕೊಂಡಲ್ಲಿ, ಮೇ ದಿನಾಚರಣೆ ಅರ್ಥಪೂರ್ಣವಾಗುತ್ತದೆ, ಸಾರ್ಥಕವಾಗುತ್ತದೆ.

# ಜಾಗತೀಕರಣ ಮೇ ದಿನಾಚರಣೆ ಮತ್ತು ಕಮ್ಯುನಿಸ್ಟ್ ಚಳುವಳಿ

ನಾ. ದಿವಾಕರ

**ಮೇ** ದಿನಾಚರಣೆ ವಿಶ್ವದ ಕಾರ್ಮಿಕರಿಗೆ, ದುಡಿಯುವ ವರ್ಗಗಳಿಗೆ, ಸ್ವಾತಂತ್ರ್ಯ ದಿನಾಚರಣೆಯಿದ್ದಂತೆ. ಬಂಡವಾಳಶಾಹಿಗಳ ಸಂಕೋಲೆಗಳಿಂದ ಮುಕ್ತರಾಗಿ, ಜಾಗತಿಕ ಮಟ್ಟದಲ್ಲಿ ತಮ್ಮದೇ ಆದ ಅಸ್ತಿತ್ವವನ್ನು ಕಂಡುಕೊಳ್ಳಲು, ಶತಮಾನಗಳಿಂದ ಆಳುವ ವರ್ಗಗಳ ವಿರುದ್ಧ ಹೋರಾಡುತ್ತಿದ್ದ ದುಡಿಯುವ ವರ್ಗಗಳಿಗೆ ಸಂಪೂರ್ಣ ಜಯ ಪ್ರಾಪ್ತವಾದದ್ದು ೧೮೮೬ರ ಮೇ ೧ರಂದು ಎಂದು ಹೇಳಿದರೆ ಅತಿಶಯೋಕ್ತಿಯಾಗಲಾರದು. ಈ ವಿಜಯದಿಂದ ಬಂಡವಾಳಶಾಹಿಯನ್ನು ಬುಡಸಮೇತವಾಗಿ ಕಿತ್ತೊಗೆಯಲಾಗದಿದ್ದರೂ, ಬಂಡವಾಳಶಾಹಿ ಶಕ್ತಿಗಳು ಮತ್ತು ದೇಶಗಳು ಕಾರ್ಮಿಕರ ಶೋಷಣೆಯ ತೀವ್ರತೆಯನ್ನು ಕಡಿಮೆ ಮಾಡಿದ್ದನ್ನು ಇತಿಹಾಸದಲ್ಲಿ ಗಮನಿಸಬಹುದು. ಈ ಪರಿವರ್ತನೆಗೆ ಬಂಡವಾಳಶಾಹಿಗಳ ಮತ್ತು ಆಳುವ ವರ್ಗಗಳ ಔದಾರ್ಯ ಕಾರಣವಾಗಿರಲಿಲ್ಲ. ಬದಲಾಗಿ, ಹೇ ಮಾರ್ಕೆಟ್ ಸ್ಕ್ವೇರ್‌ನಲ್ಲಿ ನಡೆದ ಕಾರ್ಮಿಕರ ವೀರೋಚಿತ ಹೋರಾಟ ಮತ್ತು ತಾತ್ವಿಕ ಗೆಲುವಿನಿಂದ ವಿಶ್ವದಾದ್ಯಂತ ದುಡಿಯುವ ವರ್ಗಗಳಲ್ಲಿ ಅದಮ್ಯ ಚೇತನ ಮೂಡಿತ್ತು. ತಮ್ಮ ಐಕ್ಯತೆ ಮತ್ತು ನಿರಂತರ ಹೋರಾಟದಿಂದ, ಬಂಡವಾಳಶಾಹಿಗಳ ವಿರುದ್ಧ ಹೋರಾಡುವುದೇ ಅಲ್ಲದೆ, ಗೆಲುವನ್ನೂ ಸಾಧಿಸಬಹುದು ಎಂಬ ಆತ್ಮಸ್ಥೈರ್ಯ ಕಾರ್ಮಿಕರಲ್ಲಿ ಮೂಡಿದ್ದು ಇಡೀ ವಿಶ್ವದ ಬಂಡವಾಳಶಾಹಿಗಳನ್ನು ಕಂಗೆಡಿಸಿತ್ತು. ೧೮೪೮ರಲ್ಲಿ ಕಾರ್ಲ್ ಮಾರ್ಕ್ಸ್ ಮತ್ತು ಏಂಗಲ್ಸ್‌ರವರು ಪ್ರತಿಪಾದಿಸಿದ ಸಮಾಜವಾದಿ ಸಿದ್ಧಾಂತ ಮತ್ತು ಕಮ್ಯುನಿಸ್ಟ್ ಪ್ರಣಾಳಿಕೆಯು ಜಗತ್ತಿನಾದ್ಯಂತ ದುಡಿಯುವ ವರ್ಗಗಳಿಗೆ, ವಿಮೋಚನೆಯ ದಾರಿ ತೋರಿದ್ದು, ೧೮೮೬ರ ಮೇ ದಿನದಂದು ಸ್ಪಷ್ಟವಾಗಿ ವ್ಯಕ್ತವಾಯಿತೆಂದು ಹೇಳಬಹುದು. ತದನಂತರದಲ್ಲಿ ಜರುಗಿದ ರಷ್ಯಾದ ಕ್ರಾಂತಿಯು ರಾಷ್ಟ್ರೀಯ ವಿಮೋಚನಾ ಚಳುವಳಿಗಳಿಗೆ ಒಂದು ರೀತಿಯ ಪ್ರಜಾತಾಂತ್ರಿಕ, ಜನಪರ ಸ್ವರೂಪ ನೀಡಿತ್ತು. ಜಾಗತಿಕ ಸಂಪತ್ತಿನ ಹಂಚಿಕೆಗಾಗಿ ಎರಡು ಮಹಾಯುದ್ಧಗಳನ್ನು ಹೂಡಿದ ಬಂಡವಾಳಶಾಹಿಗಳ ಕುತಂತ್ರ ಮತ್ತು ಪಿತೂರಿಗಳು ವಿಶ್ವದ ಕಾರ್ಮಿಕರನ್ನು ವಿಮೋಚನೆಯೆಡೆಗೆ, ಸ್ವಾತಂತ್ರ್ಯದೆಡೆಗೆ, ಶೋಷಣಾರಹಿತ ಸಮಾಜವಾದಿ ಸಮಾಜದೆಡೆಗೆ ನಡೆಯಲು ಪ್ರೇರೇಪಿಸಿತ್ತು. ಭಾರತ, ಕೊರಿಯಾ, ಚೀಣಾ, ವಿಯೆಟ್ನಾಂ, ಬರ್ಮಾ, ಇಂಡೋನೇಷಿಯಾ ಮತ್ತು ಅನೇಕ ಲ್ಯಾಟಿನ್ ಅಮೆರಿಕಾದ ದೇಶಗಳು, ಸಾಮ್ರಾಜ್ಯಶಾಹಿಗಳ ಸಂಕೋಲೆಗಳನ್ನು ಕಳಚಿ ಸ್ವತಂತ್ರರಾಷ್ಟ್ರಗಳಾದವು. ಈ ಎಲ್ಲ ರಾಷ್ಟ್ರೀಯ ವಿಮೋಚನಾ ಹೋರಾಟಗಳಲ್ಲಿ ಆಯಾ ದೇಶಗಳ ಕಾರ್ಮಿಕರ ಮತ್ತು ದುಡಿಯುವ ವರ್ಗಗಳ ಪಾತ್ರವು ಹಿರಿದಾದುದು. ಇದೇ ಅವಧಿಯಲ್ಲಿ ಎರಡು ಶತಮಾನಗಳ ಕಾಲ ಬ್ರಿಟಿಷರ ಆಳ್ವಿಕೆಗೊಳಗಾಗಿದ್ದ ಭಾರತದಲ್ಲೂ ಸ್ವಾತಂತ್ರ್ಯಸಂಗ್ರಾಮ ಒಂದು ನಿರ್ಣಾಯಕ ಹಂತ ತಲುಪಿತ್ತು. ಭಾರತೀಯ ರಾಷ್ಟ್ರೀಯ ಕಾಂಗ್ರೆಸ್ ನಾಯಕತ್ವದಲ್ಲಿ, ಗಾಂಧೀಜಿಯವರ ಅಹಿಂಸಾತ್ಮಕ ಚಳುವಳಿಯನ್ನು ಅನುಸರಿಸಿ ಬ್ರಿಟಿಷ್ ವಸಾಹತುಶಾಹಿಯ ವಿರುದ್ಧ ಹೋರಾಡುತ್ತಿದ್ದ ಭಾರತೀಯ ಜನತೆಗೆ ೧೯೧೭ರ ರಷ್ಯಾದ ಕ್ರಾಂತಿ ಹೊಸ ಹೋರಾಟದ ಮಾರ್ಗವನ್ನು ತೋರಿಸಿತ್ತು. ೧೯೨೦ರಲ್ಲಿ ಆರಂಭಗೊಂಡ ಅಖಿಲ ಭಾರತ ಟ್ರೇಡ್ ಯೂನಿಯನ್ ಕಾಂಗ್ರೆಸ್ (ಎಐಟಿಯುಸಿ), ಕಾಂಗ್ರೆಸ್‌ನಲ್ಲಿದ್ದ ಎಡಪಂಥೀಯ ನಾಯಕರನ್ನೊಳ



ಗೊಂಡಿದ್ದು, ಸಮಾಜವಾದಿ ಧೋರಣೆ ಹೊಂದಿತ್ತು. ಈ ಕಾರ್ಮಿಕ ಸಂಘಟನೆಯ ಮೂಲಕವೇ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬಂಡವಾಳಶಾಹಿ ಆರ್ಥಿಕತೆಯ ವಿರುದ್ಧ ಮತ್ತು ಭೂಸುಧಾರಣೆ, ನಿರುದ್ಯೋಗ, ಕಾರ್ಮಿಕ ಸಮಸ್ಯೆಗಳು, ರೈತರ ಸಮಸ್ಯೆ ಮುಂತಾದವುಗಳ ಬಗ್ಗೆ ಗಮನಹರಿಸುವ ಮೂಲಕ ಭಾರತೀಯ ಕಮ್ಯುನಿಸ್ಟ್ ಚಳುವಳಿಗೆ ನಾಂದಿ ಹಾಡಲಾಗಿತ್ತು. ಇನ್ನೊಂದೆಡೆ ಸೋವಿಯತ್ ಕ್ರಾಂತಿಯಿಂದ ಪ್ರಭಾವಿತರಾದ ಯುವಜನತೆ ಪಂಜಾಬಿನ ಗದ್ದರ್ ಚಳುವಳಿಯಿಂದ ಪ್ರೇರೇಪಿತರಾಗಿ ಕ್ರಾಂತಿಕಾರಿ ಸಶಸ್ತ್ರ ಹೋರಾಟವೇ ಸ್ವಾತಂತ್ರ್ಯ ಗಳಿಸಲು ಉತ್ತಮ ಮಾರ್ಗ ಎಂದು ಪ್ರತಿಪಾದಿಸಿದ್ದೂ ಉಂಟು.

ಈ ಮಾರ್ಗವನ್ನು ಅನುಸರಿಸಿದವರಲ್ಲಿ ಭಗತ್ ಸಿಂಗ್ ಮತ್ತು ಆತನ ಸಹವರ್ತಿಗಳು ಪ್ರಮುಖರಾಗಿದ್ದರು. ೧೯೨೮ರ ನವೆಂಬರ್ ೧೭ರಂದು ಬ್ರಿಟಿಷರು ಅಂದಿನ ಯುವಕರಿಗೆ ಆದರ್ಶಪ್ರಾಯರಾಗಿದ್ದ ಲಾಲಾ ಲಜಪತ ರಾಯ್ ಅವರನ್ನು ಹತ್ಯೆ ಮಾಡಿದಾಗ ರೊಚ್ಚಿಗೆದ್ದ ಭಗತ್ ಸಿಂಗ್ ಮತ್ತವನ ಸಹಚರರು ಪ್ರತೀಕಾರವಾಗಿ ಬ್ರಿಟಿಷ್ ಅಧಿಕಾರಿ ಸಾಂಡರ್ಸ್‌ನನ್ನು ಹತ್ಯೆಗೈದಿದ್ದರು. ಈ ಪ್ರಕರಣದಿಂದ ಭಾರತೀಯ ಸ್ವಾತಂತ್ರ್ಯ ಸಂಗ್ರಾಮದಲ್ಲಿ ಮೊಟ್ಟ ಮೊದಲ ಬಾರಿಗೆ ಕ್ರಾಂತಿಯ ಕಹಳೆ ಮೊಳಗತೊಡಗಿತ್ತೆಂದು ಹೇಳಬಹುದು. ಭಗತ್ ಸಿಂಗ್, ರಾಜಗುರು, ಸುಖ್‌ದೇವ್, ಚಂದ್ರಶೇಖರ ಆಜಾದ್ ಮುಂತಾದ ಯುವಕರು ಕಟ್ಟಿದ ಹಿಂದೂಸ್ತಾನ್ ಸೋಷಲಿಸ್ಟ್ ರಿಪಬ್ಲಿಕನ್ ಆರ್ಮಿ, ಬ್ರಿಟಿಷರ ದಬ್ಬಾಳಿಕೆಯ ವಿರುದ್ಧ ಶಸ್ತ್ರಾಸ್ತ್ರಗಳ ಮೂಲಕವೇ ಹೋರಾಡಲು ಮುಂದಾಗಿತ್ತು. ಮಾರ್ಕ್ಸ್‌ವಾದದಿಂದ ಪ್ರಭಾವಿತ ರಾಗಿದ್ದ ಭಗತ್ ಸಿಂಗ್ ಮತ್ತವನ ಸಹಚರರು ಎ.ಐ.ಟಿ.ಯು.ಸಿ ಅಥವಾ ಕಾಂಗ್ರೆಸ್ ಪಕ್ಷದಲ್ಲಿ ಸಕ್ರಿಯವಾಗಿರದಿದ್ದರೂ ದೇಶದ ದುಡಿಯುವ ವರ್ಗಗಳ ಬಗ್ಗೆ ಅಪಾರ ಕಾಳಜಿಯುಳ್ಳವರಾಗಿದ್ದರು. ೧೯೨೯ರ ಏಪ್ರಿಲ್ ೮ರಂದು ಕೇಂದ್ರೀಯ ಅಸೆಂಬ್ಲಿಯಲ್ಲಿ, ಬ್ರಿಟಿಷ್ ಸರ್ಕಾರವು ಸಾರ್ವಜನಿಕ ಸಂರಕ್ಷಣಾ ಮಸೂದೆ ಮತ್ತು ಕೈಗಾರಿಕಾ ವಿವಾದ ಮಸೂದೆಗಳನ್ನು ಅಂಗೀಕರಿಸಲು ಸಜ್ಜಾಗಿತ್ತು. ಒಂದು ವೇಳೆ ಕೈಗಾರಿಕಾ ವಿವಾದ ಮಸೂದೆ ಅಂಗೀಕಾರವಾಗಿದ್ದಲ್ಲಿ ಕಾರ್ಮಿಕರಿಗೆ ಮುಷ್ಕರದ ಹಕ್ಕು ಇನ್ನಿಲ್ಲವಾಗುತ್ತಿತ್ತು. ಬ್ರಿಟಿಷರ ಈ ಕುತಂತ್ರವನ್ನು ಗ್ರಹಿಸಿದ ಭಗತ್ ಸಿಂಗ್ ಮತ್ತವನ ಸಂಗಾತಿಗಳು ಈ ಮಸೂದೆಯನ್ನು ಚರ್ಚಿಸುವ ವೇಳೆಗೆ ಸರಿಯಾಗಿ ಅಸೆಂಬ್ಲಿ ಹಾಲ್‌ನ ಮೇಲೆ ಬಾಂಬ್ ದಾಳಿ ನಡೆಸುವ ಮೂಲಕ ಬ್ರಿಟಿಷರ ಕುಕೃತ್ಯವನ್ನು ತಡೆಗಟ್ಟಿದ್ದರು. ಈಗಾಗಲೇ ಸಾಂಡರ್ಸ್ ಕೊಲೆ ಅಪಾದನೆಯ ಮೇಲೆ ವಿಚಾರಣೆ ಎದುರಿಸುತ್ತಿದ್ದ ಭಗತ್ ಸಿಂಗ್ ಮತ್ತವನ ಸಂಗಾತಿಗಳಾದ ಸುಖ್‌ದೇವ್ ಮತ್ತು ರಾಜಗುರುರವರಿಗೆ ಲಾಹೋರ್ ಪಿತೂರಿ ಮೊಕದ್ದಮೆಯಲ್ಲಿ ನೇಣು ಶಿಕ್ಷೆ ವಿಧಿಸಲಾಯಿತು. ೧೯೩೧ರ ಮಾರ್ಚ್ ೨೩ರಂದು ಈ ಮೂವರು ಕ್ರಾಂತಿಕಾರಿಗಳು ಹುತಾತ್ಮರಾದರು. ಇಲ್ಲಿ ಭಗತ್ ಸಿಂಗ್‌ನನ್ನು ಸ್ಮರಿಸಿರುವ ಉದ್ದೇಶವೆಂದರೆ, ಕಾರ್ಮಿಕರ ಹಿತಾಸಕ್ತಿಯನ್ನು ರಕ್ಷಿಸುವ ಸದುದ್ದೇಶದಿಂದ ಅತಾರ್ಕಿಕ ನೆಲೆಯಲ್ಲಿ ಮಾತ್ರವೇ ಭಯೋತ್ಪಾದಕನೆಂಬ ಬಿರುದು ಪಡೆದು ನೇಣುಗಂಬವೇರಿದ ಕ್ರಾಂತಿಕಾರಿ ಯುವನಾಯಕನನ್ನು, ಆತ ಹುತಾತ್ಮನಾದ ೭೫ನೆಯ ವರ್ಷದಲ್ಲಿ ನಾವು ಮರೆತಿದ್ದೇವೆ ಎಂದೆನಿಸುತ್ತದೆ. ಮಾರ್ಚ್ ೨೩ರಂದು ಯಾವುದೇ ದಿನಪತ್ರಿಕೆಯಾಗಲೀ, ಟಿ.ವಿ. ಚಾನೆಲ್ ಆಗಲೀ ವಿಶೇಷವಾಗಿ ಭಗತ್ ಸಿಂಗ್‌ನನ್ನು ನೆನೆಯಲಿಲ್ಲ. ಆದರೆ ಈ ದೇಶದ ಕಾರ್ಮಿಕರಿಗೆ, ದುಡಿಯುವ ವರ್ಗಗಳಿಗೆ, ಭಗತ್ ಸಿಂಗನ ಕ್ರಾಂತಿಕಾರೀ ಸಂದೇಶ ಇಂದಿಗೂ ಪ್ರಸ್ತುತವೇ.

ಕರ್ನಾಟಕದಲ್ಲೂ ಸಹ ಇದೇ ಅವಧಿಯಲ್ಲಿ ಕಮ್ಯುನಿಸ್ಟ್ ಚಳುವಳಿಯು ರೂಪುಗೊಂಡಿತ್ತು. ಎನ್. ಡಿ. ಶಂಕರ್, ಸಿ. ಬಿ. ಮೊಣ್ಣಯ್ಯ, ಎಂ. ಎಸ್. ರಾಮರಾವ್ ಮುಂತಾದ ಕಾರ್ಮಿಕ ನಾಯಕರು ಮಿನರ್ವ ಮಿಲ್ಸ್, ರಾಜಾ ಮಿಲ್ಸ್, ಟಿ. ಆರ್. ಮಿಲ್ಸ್, ಬಿನ್ನಿ ಮಿಲ್ಸ್ ಮತ್ತು ಕೋಲಾರ ಚಿನ್ನದ ಗಣಿಗಳಲ್ಲಿ ಕಾರ್ಮಿಕರನ್ನು ಸಂಘಟಿಸುವ ಮೂಲಕ, ಸ್ವಾತಂತ್ರ್ಯ ಸಂಗ್ರಾಮದಲ್ಲೂ ಸಕ್ರಿಯವಾಗಿ ಭಾಗವಹಿಸಿದ್ದರು. ಕರ್ನಾಟಕದಲ್ಲಿ ಕಮ್ಯುನಿಸ್ಟ್ ಚಳುವಳಿ ಉಗಮವಾದಾಗ ಇದ್ದ ಪರಿಸ್ಥಿತಿಗೂ ಪ್ರಸ್ತುತ ಸನ್ನಿವೇಶಕ್ಕೂ ಹೆಚ್ಚಿನ ವ್ಯತ್ಯಾಸ ಕಂಡುಬರುವುದಿಲ್ಲ. ೧೯೩೦ರ ಹೊತ್ತಿಗೆ ವಸಾಹತುಶಾಹಿ ಕೈಗಾರಿಕಾ ಬಂಡವಾಳ ಮತ್ತು ಯೂರೋಪ್‌ನ ವ್ಯಾಪಾರಿಗಳ ಪೈಪೋಟಿ ಎದುರಿಸಬೇಕಾಗಿತ್ತು. ಇಂದು ನವ ವಸಾಹತುಶಾಹಿ ರೂಪದಲ್ಲಿ ಜಾಗತೀಕರಣ, ಕೈಗಾರಿಕಾ ಬಂಡವಾಳದೊಡನೆ ಹಣಕಾಸು ಬಂಡವಾಳ ಮತ್ತು ಬಹುರಾಷ್ಟ್ರೀಯ ಕಂಪನಿಗಳ ವಿರುದ್ಧ ಹೋರಾಡಬೇಕಾಗಿದೆ. ಅಂದು ದೇಶದ ಸ್ವಾತಂತ್ರ್ಯಕ್ಕಾಗಿ ಹೋರಾಡಿದ್ದರೆ, ಇಂದು ಅಭಿವ್ಯಕ್ತಿ ಸ್ವಾತಂತ್ರ್ಯಕ್ಕಾಗಿ ಹೋರಾಡಬೇಕಾಗಿದೆ. ಅಂದು ವಿದೇಶೀ ಸಾಂಸ್ಕೃತಿಕ ಆಕ್ರಮಣವನ್ನು ಎದುರಿಸುವುದು ಸವಾಲಾಗಿದ್ದರೆ,

## ನಮ್ಮದಲ್ಲ ಊರು



ಮಂಜುನಾಥ್ ಗೀತಾ
ಇ/ಮ ಲೇಟ್ ಯಗ್ಗೂರಯ್ಯನ ಸಿದ್ದ ಶೆಟ್ಟಿ
ತೆಂಕಣಬೀದಿ, ತಗಡೂರು ಗ್ರಾಮ
ನಂಜನಗೂಡು ತಾಲ್ಲೂಕು
ಮೈಸೂರು ಜಿಲ್ಲೆ - ೫೭೧ ೧೧೯

ಕಣ್ಣುಗಳ ಸುತ್ತ ಮಂಪರು
ನಮ್ಮೂರು ಬಿಡುವಾಗ
ಅದೂ ನಮ್ಮೂರು ಅಂದೆವು
ಇಲ್ಲಿ ನೋಡಿದರೆ ಸೂರ್ಯ ಮುನಿಸಿಕೊಂಡಿದ್ದಾನೆ
ನಮ್ಮ ಬಾಡಿದ ಕಣ್ಣುಗಳೊಡನೆ
ಯಾವಾಗಲೂ ತೆಗೆಯುವುದಿಲ್ಲ ಬಾಗಿಲು
ಈ ಊರಿಗೆಲ್ಲ ಗೊತ್ತು
ಬಾಗಿಲಲ್ಲಿ ಬಾಡಿಗೆ ಹಂತಕರು
ನೀನು ಸೆರೆಹಿಡಿದ ಫೋಟೋಗಳಲ್ಲಿ
ನಾನು ಶೂನ್ಯಕ್ಕೆ ಕಣ್ಣು ಕೀಲಿಸಿದ್ದೇನೆ
ನೀನು ಮೆಚ್ಚಿ ಖರೀದಿಸಿದ ಚಿತ್ರದಲ್ಲಿ
ಹುಡುಗಿ ಕನಸು ಪೋಣಿಸುತ್ತಿದ್ದಾಳೆ
ಯಾಕೆ ನಾವು ಮರೆತುಹೋದೆವು
ಈ ಊರಲಿ ಕೂತು ನಮ್ಮೂರು
ಹೊಲಗದ್ದೆ ತೊರೆನೀರು ಹಸಿರು
ಮಾತುಗಳೇಕೆ ನಿಂತುಹೋದವು
ಚಲಿಸುವ ಚಿತ್ರಗಳೆದುರು
ಹೀಗೆ ಕೇಳುತ್ತಲೇ ಹೇಳುತ್ತಲೇ
ಅಳುತ್ತಲೇ ಹೋದರೆ
ಕೆಲಸಕ್ಕೆ ಹೊತ್ತಾಗಬಹುದು
ಹೊರಡು
ಮೊದಲು ಬೇಗ ಹುಡುಕು

ಇಂದು ಪಾಶ್ಚಿಮಾತ್ಯ ಸಂಸ್ಕೃತಿಯೂ ಸೇರಿದಂತೆ ಹಿಂದೂ ಮತ್ತಿತರ ಮೂಲಭೂತವಾದಿಗಳ ಸಾಂಸ್ಕೃತಿಕ ದಾಳಿಯನ್ನು ಎದುರಿಸಿ ಹೋರಾಡಬೇಕಾಗಿದೆ. ಅಭಿವೃದ್ಧಿಯ ಹೆಸರಿನಲ್ಲಿ ವಿದೇಶೀ ಬಂಡವಾಳವು ಎಲ್ಲಾ ಕ್ಷೇತ್ರಗಳನ್ನೂ ಆವರಿಸಿಕೊಂಡಿದ್ದು, ನೇರ ವಿದೇಶೀ ಬಂಡವಾಳವನ್ನು ಸಾರಾಸಗಟಾಗಿ ನಿರಾಕರಿಸುತ್ತಿದ್ದ ಎಡಪಕ್ಷಗಳ ಸರ್ಕಾರಗಳೂ ಈಗ, ಆಯ್ದ ಕ್ಷೇತ್ರಗಳಲ್ಲಿ ವಿದೇಶೀ ಬಂಡವಾಳ ಹೂಡಿಕೆಯನ್ನು ಸ್ವಾಗತಿಸುತ್ತಿವೆ. ಇದು ವಿಪರ್ಯಾಸಕರವಾದರೂ ರಾಜಕೀಯ ಅನಿವಾರ್ಯತೆಯಾಗಿರುವುದು ದುರಂತ. ಕರ್ನಾಟಕದ ಮಟ್ಟಿಗೆ ಹೇಳುವುದಾದರೆ, ಸ್ವಾತಂತ್ರ್ಯಾನಂತರದಲ್ಲಿ ನೆಹರೂ ಸರ್ಕಾರದ ಸಮಾಜವಾದೀ ಸಿದ್ಧಾಂತಗಳಿಗನುಗುಣವಾಗಿ ಸ್ಥಾಪಿಸಲ್ಪಟ್ಟ ಭಾರೀ ಸಾರ್ವಜನಿಕ ಕೈಗಾರಿಕಾ ಉದ್ದಿಮೆಗಳು ಲಕ್ಷಾಂತರ ಜನರಿಗೆ ಬದುಕುವ ದಾರಿ ಒದಗಿಸಿದ್ದವು, ದೇಶದ ಉತ್ಪಾದನಾ ಶಕ್ತಿಯನ್ನು ಹೆಚ್ಚಿಸಿದ್ದವು. ಎಚ್.ಎಂ.ಟಿ., ಐ.ಟಿ.ಐ., ಬಿ.ಎಚ್.ಇ.ಎಲ್., ಬಿ.ಇ.ಎಂ.ಎಲ್., ಬಿ.ಇ.ಎಲ್., ಎಚ್.ಎ.ಎಲ್., ಎನ್.ಎ.ಎಲ್., ಮುಂತಾದ ಬೃಹತ್ ಉದ್ದಿಮೆಗಳೊಂದಿಗೆ ಕ.ವಿ.ಕಾ., ಎನ್.ಜಿ.ಇ.ಎಫ್., ಕೆ.ಎಸ್.ಡಿ.ಎಲ್. ಮುಂತಾದ ರಾಜ್ಯ ಸರ್ಕಾರದ ಉದ್ದಿಮೆಗಳು ಕರ್ನಾಟಕದ ದುಡಿಯುವ ವರ್ಗಗಳಿಗೆ ಆಶಾದಾಯಕ ಮಾರ್ಗ ತೋರಿದ್ದವು. ಆದರೆ, ಮೇಲೆ ಹೇಳಲಾದ ಸ್ವಾತಂತ್ರ್ಯಪೂರ್ವದ ಉದ್ದಿಮೆಗಳೂ ಸೇರಿದಂತೆ, ಅನೇಕ ಸಾರ್ವಜನಿಕ ಉದ್ದಿಮೆಗಳು ಇಂದು ಜಾಗತೀಕರಣದ ನೀತಿಗಳ ಪರಿಣಾಮವಾಗಿ ಅವಸಾನ ಹೊಂದಿವೆ. ಕಾರ್ಮಿಕರ ನಿರಂತರ ಹೋರಾಟದ ನಡುವೆಯೂ, ಅನೇಕ ಸರ್ಕಾರಿ ಸ್ವಾಮ್ಯದ ಉದ್ದಿಮೆಗಳು ಇಂದು ಮುಚ್ಚಲ್ಪಟ್ಟು ಲಕ್ಷಾಂತರ ಕಾರ್ಮಿಕರು ಬೀದಿಪಾಲಾಗಿದ್ದಾರೆ, ಉತ್ಪಾದನೆ ಕುಸಿದಿದೆ. ಕೋಲಾರ ಚಿನ್ನದ ಗಣಿಯ ಕಾರ್ಮಿಕರ ಪಾಡು ಇದಕ್ಕೆ ಜ್ವಲಂತ ನಿದರ್ಶನ.

ಇನ್ನೊಂದೆಡೆ, ೧೯೬೯ರಲ್ಲಿ ರಾಷ್ಟ್ರೀಕೃತಗೊಂಡ ಬ್ಯಾಂಕುಗಳು ಮತ್ತು ಅದಕ್ಕೂ ಮುನ್ನ ರಾಷ್ಟ್ರೀಕರಣವಾಗಿದ್ದ ವಿಮಾ ಕಂಪನಿಗಳೂ ಸಹ ಇಂದು, ಮತ್ತೆ ಖಾಸಗಿಯವರ ಕೈಸೇರುತ್ತಿವೆ. ವಿದೇಶೀ ಬ್ಯಾಂಕುಗಳೊಡನೆ ಪೈಪೋಟಿ ನಡೆಸುವ ದೃಷ್ಟಿಯಿಂದ ಕಾರ್ಮಿಕರಿಗಿಂತಲೂ ತಂತ್ರಜ್ಞಾನವನ್ನೇ ಹೆಚ್ಚಾಗಿ ಅವಲಂಬಿಸಿರುವ ರಾಷ್ಟ್ರೀಕೃತ ಬ್ಯಾಂಕುಗಳು, ಕ್ರಮೇಣ ಸಾಮಾನ್ಯ ಜನರಿಂದ ದೂರ ಸರಿಯುತ್ತಿರುವುದು ಸ್ಪಷ್ಟವಾಗುತ್ತಿದೆ. ಯಾವುದೇ ವೈಜ್ಞಾನಿಕ ತಳಹದಿ, ಸಮೀಕ್ಷೆ ಇಲ್ಲದೆ, ಕೇಂದ್ರ ಸರ್ಕಾರ ರೂಪಿಸುವ ಸಾಲದ ಯೋಜನೆಗಳ ಮೂಲಕ ರೈತಾಪಿ ಜನರನ್ನು ಮತ್ತು ಸಣ್ಣ ವ್ಯಾಪಾರಿಗಳನ್ನು ಸಾಲದ ಕೂಪಕ್ಕೆ ತಳ್ಳುತ್ತಿರುವ ರಾಷ್ಟ್ರೀಕೃತ ಬ್ಯಾಂಕುಗಳು ತಮ್ಮ ಮಾಸ್ ಬ್ಯಾಂಕಿಂಗ್ ನೀತಿಯನ್ನು ಬಿಟ್ಟು ಕ್ಲಾಸ್ ಬ್ಯಾಂಕಿಂಗ್ ಕಡೆಗೆ ವಾಲುತ್ತಿವೆ. ಒಂದೆಡೆ ಬ್ಯಾಂಕಿನ ಸಾಲವಾದರೆ ಇನ್ನೊಂದೆಡೆ ಖಾಸಗಿ ಲೇವಾದೇವಿಯವರ ಸಾಲದ ಹೊರೆ ತಾಳಲಾರದೆ ರೈತಾಪಿ ಜನರು, ನೇಕಾರರು ಆತ್ಮಹತ್ಯೆಗೆ ಶರಣಾಗುತ್ತಿದ್ದಾರೆ. ಕಳೆದ ಮೂರು ವರ್ಷಗಳಲ್ಲಿ ಅತಿ ಹೆಚ್ಚು ರೈತರ ಆತ್ಮಹತ್ಯೆ ಪ್ರಕರಣಗಳು ಕರ್ನಾಟಕದಲ್ಲಿ ವರದಿಯಾಗಿವೆ. ಸರ್ಕಾರದ ಹೊಸ ಆರ್ಥಿಕ ನೀತಿಗಳಿಂದ ಒಂದೆಡೆ ನಿರುದ್ಯೋಗ ಹೆಚ್ಚಾಗುತ್ತಿದ್ದರೆ, ಮಾಹಿತಿ ತಂತ್ರಜ್ಞಾನ ಮತ್ತು ಸಾಫ್ಟ್‌ವೇರ್ ಉದ್ಯಮದಿಂದಲೇ ಸಾಮಾನ್ಯ ಜನತೆಯ ಎಲ್ಲಾ ಸಮಸ್ಯೆಗಳೂ ಬಗೆಹರಿಯುತ್ತವೆ ಎಂಬ ಭ್ರಮೆಯನ್ನು ಸರ್ಕಾರಗಳು ಜನರಲ್ಲಿ ಮೂಡಿಸುತ್ತಿವೆ. ಜಾಗತೀಕರಣವು ತನ್ನ ಆಧುನಿಕ ತಂತ್ರಜ್ಞಾನಗಳಿಂದ ಮತ್ತು ಮೊಬೈಲ್, ಅಂತರ್ಜಾಲ ಮುಂತಾದ ಸಲಕರಣೆಗಳ ಮೂಲಕ ಜನರನ್ನು ಭ್ರಮಾಲೋಕಕ್ಕೆ ಕೊಂಡೊಯ್ಯುತ್ತಿದೆ. ಕಾಲ್ ಸೆಂಟರ್‌ಗಳಲ್ಲಿ ಸೃಷ್ಟಿಯಾಗಿರುವ ಅಲ್ಪ ಪ್ರಮಾಣದ ಉದ್ಯೋಗವನ್ನೇ ಮುಂದಿಟ್ಟುಕೊಂಡು ಐ.ಟಿ.–ಬಿ.ಟಿ ಕ್ಷೇತ್ರದಿಂದಲೇ ಸಾಮಾಜಿಕ-ಆರ್ಥಿಕ ಉನ್ನತಿ ಸಾಧ್ಯ ಎಂದು ಬಿಂಬಿಸಲಾಗುತ್ತಿದೆ. ಹಾಗಾಗಿಯೇ ಬಜೆಟ್‌ನಲ್ಲೂ ಸಹ ಈ ಕ್ಷೇತ್ರಗಳಿಗೆ ಅನುಕೂಲವಾಗುವಂತೆಯೇ ಅಧೋರಚನೆಗಳನ್ನು ಅಭಿವೃದ್ಧಿಪಡಿಸಲಾಗುತ್ತಿದೆ. ರಸ್ತೆ ಅಗಲೀಕರಣದಿಂದ ಬೀದಿಪಾಲಾಗುವ ಸಣ್ಣ ವ್ಯಾಪಾರಿಗಳು, ನಗರ ಸೌಂದರ್ಯ ವೃದ್ಧಿಗಾಗಿ ತಮ್ಮ ಮೂಲಾಧಾರವನ್ನೇ ಕಳೆದುಕೊಳ್ಳುವ ರಸ್ತೆ ಬದಿ ವ್ಯಾಪಾರಿಗಳು, ಬಡಾವಣೆ ಹಾಗೂ ಚತುಷ್ಪಥ ರಸ್ತೆಗಳ ನಿರ್ಮಾಣಕ್ಕಾಗಿ ತಮ್ಮ ಹೊಲ ಗದ್ದೆಗಳನ್ನು ಕಳೆದುಕೊಂಡು ನಗರಗಳಿಗೆ ವಲಸೆ ಹೋಗುವ ರೈತಾಪಿ ಜನರು ಮತ್ತು ರಸ್ತೆ ಕಾಮಗಾರಿ, ಕಟ್ಟಡ ನಿರ್ಮಾಣ, ಮತ್ತು ಲೋಕೋಪಯೋಗಿ ಇಲಾಖೆಯ ಅಧೋರಚನಾ ಅಭಿವೃದ್ಧಿ ಕಾರ್ಯಗಳಲ್ಲಿ ಯಂತ್ರಗಳ ಉಪಯೋಗದಿಂದ ನಿರ್ಗತಿಕರಾಗಿರುವ ಕಾರ್ಮಿಕರು ಜಾಗತೀಕರಣದ ಪ್ರಕ್ರಿಯೆಯಿಂದ ನೇರವಾಗಿ ಬಾಧಿತರಾಗಿದ್ದಾರೆ.

ಸರ್ಕಾರೀ ಸ್ವಾಮ್ಯದ ಉದ್ದಿಮೆಗಳ ಪಾಡು ಹೀಗಾದರೆ, ಖಾಸಗೀ ಕ್ಷೇತ್ರದಲ್ಲಿನ ಸಣ್ಣ ಹಾಗೂ ಮಧ್ಯಮ ಕೈಗಾರಿಕೆಗಳೂ ಸಹ ಇಂದು ಸಂಕಷ್ಟವನ್ನೆದುರಿಸುತ್ತಿವೆ. ಏಷಿಯಾದಲ್ಲೇ ಅತಿ ದೊಡ್ಡ ಕೈಗಾರಿಕಾ ಕ್ಷೇತ್ರವೆಂದು ಖ್ಯಾತಿಗಳಿಸಿದ್ದ ಬೆಂಗಳೂರಿನ ಪೀಣ್ಯಾ ಕೈಗಾರಿಕಾ ಕ್ಷೇತ್ರ ಇಂದು ಬಹುತೇಕ ಬಂಜರು ಭೂಮಿಯಾಗಿದೆ. ಸಾರ್ವಜನಿಕ ಉದ್ದಿಮೆಗಳನ್ನೇ ನಂಬಿ ನಡೆಯುತ್ತಿದ್ದ ಸಣ್ಣ ಕೈಗಾರಿಕೆಗಳು ಸರ್ಕಾರದ ಕೈಗಾರಿಕಾ ನೀತಿಯಿಂದ ನಷ್ಟ ಅನುಭವಿಸಿದರೆ, ಉಳಿದಂತೆ ಇತರ ಉದ್ಯಮಗಳು ಬಹುರಾಷ್ಟ್ರೀಯ ಕಂಪನಿಗಳ ಮತ್ತು ವಿದೇಶೀ ಬಂಡವಾಳದ ಆಕ್ರಮಣಕ್ಕೆ ಬಲಿಯಾಗುತ್ತಿವೆ. ಪೀಣ್ಯಾ ಕ್ಷೇತ್ರದ ಕಾರ್ಮಿಕರು ಇಂದು ಬಹುತೇಕ ಅನಾಥರಾಗಿದ್ದಾರೆ. ಒಂದು ಕಾಲದಲ್ಲಿ ಯಾವುದೇ ಸರ್ಕಾರವನ್ನು ಕ್ಷಣ ಮಾತ್ರದಲ್ಲಿ ಅಲುಗಾಡಿಸುತ್ತಿದ್ದ ಬೃಹತ್ ಕಾರ್ಮಿಕ ಸಂಘಟನೆಗಳು ಇಂದು ಬಹುತೇಕ ನಿಷ್ಕ್ರಿಯವಾಗಿವೆ. ಸರ್ಕಾರಗಳು ಎಸ್ಮಾ ಮುಂತಾದ ಕರಾಳ ಶಾಸನಗಳನ್ನು ಉಪಯೋಗಿಸುವುದರ ಮೂಲಕ ಕಾರ್ಮಿಕ ಚಳುವಳಿಗಳನ್ನು ಹತ್ತಿಕ್ಕುವುದೇ ಅಲ್ಲದೆ, ಹೋರಾಟದ ಮನೋಭಾವವಿರುವ ಕಾರ್ಮಿಕರನ್ನು ನಿಷ್ಕ್ರಿಯಗೊಳಿಸುತ್ತಿವೆ.

ನೇರ ವಿದೇಶೀ ಬಂಡವಾಳ, ಮಾರುಕಟ್ಟೆ ಪೈಪೋಟಿಗಳ ನೆಪದಲ್ಲಿ ಸಾರ್ವಜನಿಕ ಉದ್ದಿಮೆಗಳನ್ನು ಕ್ರಮೇಣ ಅವಸಾನದ ಅಂಚಿಗೆ ತಳ್ಳುತ್ತಿರುವ ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು ದೇಶವನ್ನು ಮತ್ತೆ ಸಾಮ್ರಾಜ್ಯಶಾಹಿಗಳ ಪೈಶಾಚಿಕ ಬಾಹುಗಳಿಗೆ ಸಿಲುಕಿಸುವ ಪ್ರಯತ್ನ ಮಾಡುತ್ತಿವೆ. ಭಾ.ಜ.ಪ. ನೇತೃತ್ವದ ಎನ್.ಡಿ.ಎ. ಸರ್ಕಾರದ ಅವಧಿಯಲ್ಲಿ ಸಾರ್ವಜನಿಕ ಉದ್ದಿಮೆಗಳ ಬಂಡವಾಳ ಹಿಂತೆಗೆತಕ್ಕಾಗಿಯೇ ಪ್ರತ್ಯೇಕ ಮಂತ್ರಿಗಳಿದ್ದುದನ್ನು ಇಲ್ಲಿ ಸ್ಮರಿಸಬಹುದು. ಇಂದಿನ ಯು.ಪಿ.ಎ. ಸರ್ಕಾರವು ಮಂತ್ರಿಯನ್ನು ನೇಮಿಸದೆಯೇ ಈ ಕೆಲಸವನ್ನು ಮಾಡುತ್ತಿದೆ. ಭಾರತ ಸರ್ಕಾರವು ಮುಕ್ತ ಮಾರುಕಟ್ಟೆ ನೀತಿಯನ್ನು ಅನುಷ್ಠಾನಗೊಳಿಸಿದ ಆರಂಭದಲ್ಲಿ, ಅಂದರೆ ೧೯೯೦ರಲ್ಲಿ ೨೬೬ ಕೇಂದ್ರ ಸಾರ್ವಜನಿಕ ಉದ್ದಿಮೆಗಳಿದ್ದುದು, ೨೦೦೦ದ ವೇಳೆಗೆ ೨೩೨ರಷ್ಟಾಗಿತ್ತು. ನಾಲ್ಕು ಲಕ್ಷ ಕಾರ್ಮಿಕರು ಬೀದಿಪಾಲಾಗಿದ್ದರು. ಎನ್.ಡಿ.ಎ. ಸರ್ಕಾರವು ಅಧಿಕಾರಕ್ಕೆ ಬಂದ ನಂತರ ಪರಿಸ್ಥಿತಿ ಇನ್ನೂ ಶೋಚನೀಯವಾಗಿದ್ದು, ಸರ್ಕಾರ ಉದ್ದಿಮೆಗಳಿಗೆ ನೀಡುತ್ತಿದ್ದ ಬೆಂಬಲ ಬಂಡವಾಳವನ್ನೂ ಹಿಂತೆಗೆದುಕೊಂಡಿತ್ತು. ಬಂಡವಾಳ ಹಿಂತೆಗೆತ ರೂಪದಲ್ಲಿ ಖಾಸಗೀಕರಣ ಪ್ರಕ್ರಿಯೆಗೆ ಚಾಲನೆ ನೀಡಿದ ಭಾ.ಜ.ಪ. ಸರ್ಕಾರದ ನೀತಿ ಇಂದಿಗೂ ಮುಂದುವರೆಯುತ್ತಿದೆ. ಒಂದು ಸಮಯದಲ್ಲಿ, ಯಾವುದೇ ಸಾರ್ವಜನಿಕ ಉದ್ದಿಮೆಗಳನ್ನೂ ಮುಚ್ಚಬಾರದು, ನಷ್ಟ ಅನುಭವಿಸುತ್ತಿರುವ ಉದ್ದಿಮೆಗಳನ್ನು ಕಾರ್ಮಿಕರಿಗೇ ವಹಿಸಿಕೊಡಬೇಕು, ಖಾಸಗಿಯವರಿಗೆ ನೀಡಬಾರದು, ಎಂದೆಲ್ಲಾ ವಾದಿಸುತ್ತಿದ್ದ ಎಡ ಪಕ್ಷಗಳೂ ಸಹ ನಂತರ ತಮ್ಮ ನಿಲುವನ್ನು ಬದಲಿಸಿ, ಲಾಭದಾಯಕವಲ್ಲದ ಉದ್ದಿಮೆಗಳನ್ನು ಮಾತ್ರ ಮುಚ್ಚಬಹುದು ಅಥವಾ ಖಾಸಗೀಕರಣಗೊಳಿಸಬಹುದು ಎಂಬ ನಿಲುವು ತಾಳಿದವು. ಈಗ ನವರತ್ನಗಳನ್ನು ಹೊರತುಪಡಿಸಿ ಯಾವುದೇ ಸಾರ್ವಜನಿಕ ಉದ್ದಿಮೆಗಳಲ್ಲಿ ಸರ್ಕಾರವು ಖಾಸಗಿ ಬಂಡವಾಳ ಹೂಡಿಕೆಗೆ ಅವಕಾಶ ನೀಡಬಹುದೆಂದು ಎಡಪಕ್ಷಗಳು ಪ್ರತಿಪಾದಿಸುತ್ತಿವೆ. ಎಡ ಪಕ್ಷಗಳ ಈ

## ಮೂರು ಮಹತ್ವದ ಅನುವಾದ ಕೃತಿಗಳ ಲೋಕಾರ್ಪಣೆ

ತಾ. ೨೮-೦೫-೨೦೦೬ ಭಾನುವಾರ ಬೆಳಿಗ್ಗೆ ೧೦.೩೦ಕ್ಕೆ ಯವನಿಕಾ ಸಭಾಂಗಣದಲ್ಲಿ ಮಕ್ಸಿಂ ಗೋರ್ಕಿಯವರ 'ತಾಯಿ' (ಅನು : ನಿರಂಜನ), ಐ. ಲಾವ್ರೆತ್‌ಸ್ಕಿಯವರ 'ಅರ್ನೆಸ್ಟೊ ಚೆ ಗುವಾರ' (ಅನು : ಗೊ. ರು. ಚನ್ನಬಸಪ್ಪ, ಸೂರ್ಯಕಾಂತ ಸೊನ್ನದ, ಕೆ. ಪಿ. ಸ್ವಾಮಿ), ಮತ್ತು ಎ. ಎನ್. ಮೂರ್ತಿರಾಯರ 'ಗಾಡ್' (ಅನು : ಎ. ಎನ್. ಸುಬ್ಬರಾಮಯ್ಯ), ಈ ಮೂರು ಅನುವಾದಿತ ಕೃತಿಗಳ ಲೋಕಾರ್ಪಣೆ ಕಾರ್ಯಕ್ರಮವನ್ನು ಹಮ್ಮಿಕೊಳ್ಳಲಾಗಿದೆ.

ಪ್ರೊ|| ಬರಗೂರು ರಾಮಚಂದ್ರಪ್ಪ ಅವರು ಸಮಾರಂಭದ ಅಧ್ಯಕ್ಷತೆ ವಹಿಸುತ್ತಾರೆ. 'ಹೊಸತು' ಸಂಪಾದಕ ಡಾ|| ಜಿ. ರಾಮಕೃಷ್ಣ ಪುಸ್ತಕ ಅನಾವರಣ ಮಾಡುತ್ತಾರೆ. ಡಾ|| ಸಿದ್ದನಗೌಡ ಪಾಟೀಲರು ಮೇಲಿನ ಕೃತಿಗಳ ಪ್ರಸ್ತುತತೆ ಕುರಿತು ಮಾತನಾಡುತ್ತಾರೆ.

ದ್ವಂದ್ವ ನಿಲುವುಗಳಿಂದಲೇ ಸರ್ಕಾರವು ಬ್ಯಾಂಕಿಂಗ್, ವಿಮೆ ಮತ್ತು ದೂರ ಸಂಪರ್ಕ ಕ್ಷೇತ್ರಗಳಲ್ಲಿ ಸರ್ಕಾರದ ಬಂಡವಾಳವನ್ನು ಶೇ. ೫೧ಕ್ಕೆ ಸೀಮಿತಗೊಳಿಸುವುದು ಸುಲಭ ಸಾಧ್ಯವಾಗಿದೆ. ಹಣಕಾಸು ಬಂಡವಾಳದ ಉಳಿವಿಗೆ ಅವಶ್ಯಕವಾಗಿ ಆಗಬೇಕಾದ ಬ್ಯಾಂಕುಗಳ ವಿಲೀನ ಪ್ರಕ್ರಿಯೆಗೆ ಈಗ ಚಾಲನೆ ದೊರೆಯುತ್ತಿದೆ. ವಿದೇಶಿ ಬ್ಯಾಂಕುಗಳು, ಖಾಸಗಿ ಬ್ಯಾಂಕುಗಳಿಗೆ ಮತ್ತು ವಿಮಾ ಕಂಪನಿಗಳಿಗೆ ನಿರ್ಬಂಧಿತ ಮುಕ್ತ ಅವಕಾಶ ನೀಡುವುದರ ಮೂಲಕ, ವಿದೇಶೀ ಬಂಡವಾಳಕ್ಕೆ ರತ್ನ ಗಂಬಳಿ ಹಾಸಿದ ಸರ್ಕಾರಗಳು, ಮುಂದಿನ ದಿನಗಳಲ್ಲಿ ಇರುವ ಅಲ್ಪ ನಿರ್ಬಂಧಗಳನ್ನೂ ತೊಡೆದುಹಾಕುವ ಸಾಧ್ಯತೆ ಹೆಚ್ಚಾಗಿ ಕಂಡುಬರುತ್ತಿದೆ.

ಕರ್ನಾಟಕ ಸರ್ಕಾರವೂ ಸಹ ಕವಿಕಾ, ಕೆ.ಎಸ್.ಡಿ.ಎಲ್., ಎನ್.ಜಿ.ಇ.ಎಫ್, ಮೈಸೂರು ಲ್ಯಾಂಪ್ಸ್ ಮುಂತಾದ ಉದ್ದಿಮೆಗಳನ್ನು ಈಗಾಗಲೇ ಮಾರಾಟಕ್ಕಿಟ್ಟಿದೆ. ರಸ್ತೆ ಸಾರಿಗೆ ಸಂಸ್ಥೆಯನ್ನು ಬಹುತೇಕವಾಗಿ ಖಾಸಗಿಯವರ ವಶಕ್ಕೆ ನೀಡಲಾಗಿದ್ದು, ವಿದ್ಯುಚ್ಛಕ್ತಿ ನಿಗಮದ ಖಾಸಗೀಕರಣವನ್ನು ಬಹುತೇಕವಾಗಿ ಪೂರ್ಣಗೊಳಿಸಿದೆ. ಸಾರ್ವಜನಿಕ ಉದ್ದಿಮೆಗಳಲ್ಲಿ ಹಂತ ಹಂತವಾಗಿ ಖಾಸಗೀ ಕ್ಷೇತ್ರದವರಿಗೆ ಮತ್ತು ವಿದೇಶೀ ಬಂಡವಳಿಗರಿಗೆ ಸ್ಥಾನ ಕೊಡುವ ಮೂಲಕ, ಸಂಪೂರ್ಣ ಮಾರುಕಟ್ಟೆ ಆರ್ಥಿಕ ವ್ಯವಸ್ಥೆಯನ್ನು ಸ್ಥಾಪಿಸುವ, ಜಾಗತೀಕರಣದ ಹುನ್ನಾರ ಈ ಹಂತದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತಿದೆ. ರೈತರಿಗೆ ಬೆನ್ನೆಲುಬಾಗಿದ್ದ ವ್ಯವಸಾಯೋತ್ಪನ್ನ ಮಾರುಕಟ್ಟೆ ಸಮಿತಿಗಳ ನಿರ್ವಹಣೆಯನ್ನೂ ಖಾಸಗಿಯವರಿಗೆ ಒಪ್ಪಿಸುವ ಬಗ್ಗೆಯೂ ಸಹ ಸರ್ಕಾರ ಆಲೋಚಿಸುತ್ತಿದೆ. ತಮ್ಮ ವಾರ್ಷಿಕ ಆಯವ್ಯಯ ಮುಂಗಡ ಪತ್ರದಲ್ಲಿ ಶಿಕ್ಷಣ, ಆರೋಗ್ಯ ಮತ್ತು ಸಮಾಜ ಕಲ್ಯಾಣ ಕ್ಷೇತ್ರಗಳಿಗೆ, ಅತ್ಯಲ್ಪ ಹಣ ವಿನಿಯೋಗ ಮಾಡುವುದರ ಮೂಲಕ, ಕೇಂದ್ರ ಹಾಗೂ ರಾಜ್ಯ ಸರ್ಕಾರಗಳು, ಕ್ರಮೇಣವಾಗಿ ಈ ಕ್ಷೇತ್ರಗಳನ್ನು ಖಾಸಗೀಕರಣದತ್ತ ಕೊಂಡೊಯ್ಯುತ್ತಿವೆ. ಈ ಎಲ್ಲಾ ಪ್ರಕ್ರಿಯೆಗಳಿಂದ ನಿರುದ್ಯೋಗ ಮತ್ತು ಬಡತನ ಹೆಚ್ಚಾಗುತ್ತಿರುವುದಲ್ಲದೆ ಸಮಾಜಘಾತುಕ ಶಕ್ತಿಗಳ ಪ್ರಾಬಲ್ಯ ಹೆಚ್ಚುತ್ತದೆ. ಇಷ್ಟಾದರೂ ಐ.ಟಿ., ಬಿ.ಟಿ ಕ್ಷೇತ್ರದಿಂದಲೇ ಎಲ್ಲಾ ಸಮಸ್ಯೆಗಳಿಗೂ ಪರಿಹಾರ ದೊರೆಯುತ್ತದೆ ಎಂಬ ಭ್ರಮೆಯಲ್ಲಿ ಸರ್ಕಾರಗಳು ತೇಲಾಡುತ್ತಿವೆ.

ಈ ಹಿನ್ನೆಲೆಯಲ್ಲಿ ಮೇ ದಿನಾಚರಣೆಯನ್ನು ಅವಲೋಕಿಸಿದಾಗ ದುಡಿಯುವ ವರ್ಗವು ಒಂದು ಸ್ಪಷ್ಟವಾದ ಮಾರ್ಗ ರೂಪಿಸಿಕೊಳ್ಳುವುದರಲ್ಲಿ ವಿಫಲವಾಗಿದೆ ಎಂದೇ ಹೇಳಬಹುದು. ನೆಹರೂ ಅವರ ಮಿಶ್ರ ಆರ್ಥಿಕ ನೀತಿಯು ಸಾರ್ವಜನಿಕ ಉದ್ದಿಮೆಗಳಿಗೆ ಹೆಚ್ಚು ಪ್ರಾಶಸ್ತ್ಯ ನೀಡಿತಾದರೂ ೮೦ರ ದಶಕದವರೆಗಿನ ಸಮಾಜವಾದೀ ಮುಖವಾಡದ ಪ್ರಭುತ್ವ ಬಂಡವಾಳ ನೀತಿ (state capitalism), ಕಮ್ಯುನಿಸ್ಟ್ ಚಳುವಳಿ ಮತ್ತು ಕಾರ್ಮಿಕ ಚಳುವಳಿಗೆ ಉತ್ತಮ ಅಡಿಪಾಯವಾಗಬೇಕಿತ್ತು. ಆದರೆ ಅಂದಿನ ಸಾಮಾಜಿಕ-ಆರ್ಥಿಕ ಪರಿಸ್ಥಿತಿಗಳಿಗನುಗುಣವಾಗಿ, ಸಾಮಾಜಿಕ ಕ್ಷೇತ್ರಗಳ ರಾಷ್ಟ್ರೀಕರಣವನ್ನೇ ಸಮಾಜವಾದದ ಉನ್ನತ ಹಂತವೆಂದು ಪರಿಗಣಿಸಲಾಗಿತ್ತು. ರಾಷ್ಟ್ರೀಕರಣಗೊಂಡ ಸಾರ್ವಜನಿಕ ಉದ್ದಿಮೆಗಳ ನೌಕರರು ತಮ್ಮ ಸಂಘಟನಾ ಸಾಮರ್ಥ್ಯದಿಂದ ಹಲವಾರು ಆರ್ಥಿಕ ಸಾಮಾಜಿಕ ಸವಲತ್ತುಗಳನ್ನು ಗಳಿಸುವುದರಲ್ಲಿ ಸಫಲರಾದರೂ ಅಸಂಘಟಿತ ಕ್ಷೇತ್ರದಲ್ಲಿ ದುಡಿಯುವ ವರ್ಗಗಳು ಪರದಾಡಬೇಕಾಯಿತು. ಕೃಷಿ ಕ್ಷೇತ್ರದಲ್ಲೂ ಸಹ ಇದೇ ರೀತಿಯ ಬೆಳವಣಿಗೆಯನ್ನು ಕಾಣಬಹುದು. ಸಣ್ಣ, ಅತಿ ಸಣ್ಣ ಹಾಗೂ ಮಧ್ಯಮ ಮಟ್ಟದ ರೈತರನ್ನು ಸಂಘಟಿಸಿ ಹಲವಾರು ಬಗೆಯ ರಿಯಾಯಿತಿ, ಸವಲತ್ತು ಹಾಗೂ ಬೆಂಬಲವನ್ನು ಪಡೆದ ರೈತ ಸಂಘಟನೆಗಳು, ಕೃಷಿಕಾರ್ಮಿಕರ ಸಮಸ್ಯೆಗಳನ್ನು ನಿರ್ಲಕ್ಷಿಸಿದವು. ಯಾವುದೇ ರೀತಿಯ ರಾಜಕೀಯ ಪ್ರಜ್ಞೆಯನ್ನು ಬೆಳೆಸಿಕೊಳ್ಳದ ಸಂಘಟಿತ ವಲಯದ ಕಾರ್ಮಿಕರು ಬಹುತೇಕವಾಗಿ ಎಡಪಂಥೀಯ ಚಿಂತನೆಗಳಿಂದ ದೂರ ಉಳಿದದ್ದೇ ಅಲ್ಲದೆ, ತಮ್ಮ ಹಕ್ಕುಗಳಿಗಾಗಿ ಕೆಂಬಾವುಟದಡಿ ಹೋರಾಡಿ, ರಾಜಕೀಯ ತೀರ್ಮಾನದ ಪ್ರಶ್ನೆ ಉದ್ಭವಿಸಿದಾಗ ಕೇಸರಿ ಬಾವುಟವನ್ನು ಹಿಂಬಾಲಿಸಿದ್ದನ್ನು ನಾವು ನೋಡಿದ್ದೇವೆ. ಅಷ್ಟೇ ಅಲ್ಲದೆ, ಸಂಘಟಿತ ವಲಯದ ನೌಕರರು ಇತರ ದುಡಿಯುವ ವರ್ಗಗಳೊಡನೆ ಮತ್ತು ಅಸಂಘಟಿತ ನೌಕರರೊಡನೆ ಗುರುತಿಸಿಕೊಳ್ಳುವುದರಲ್ಲೂ ವಿಫಲರಾಗಿದ್ದಾರೆ. ಈ ವೈಫಲ್ಯಕ್ಕೆ ಬ್ಯಾಂಕ್, ವಿಮಾಕ್ಷೇತ್ರ ಮತ್ತು ಇತರ ಉನ್ನತ ಹುದ್ದೆಯ ನೌಕರರಲ್ಲಿ ಬೆಳೆದುಬಂದಿರುವ white collar ನೌಕರಿಯ ಪ್ರಜ್ಞೆ ಕಾರಣವೆಂದು ಹೇಳಬಹುದು. ಈ ಬೆಳವಣಿಗೆಗೆ ನಾಯಕತ್ವದ ಕೊಡುಗೆಯೂ ಇದೆ.

ಈ ಸನ್ನಿವೇಶದಲ್ಲಿ ಮೇ ದಿನಾಚರಣೆ ಎಷ್ಟು ಮುಖ್ಯವೋ, ಕ್ರಾಂತಿಕಾರಿ ಭಗತ್ ಸಿಂಗ್‌ನನ್ನು ನೆನೆಯುವುದೂ ಅಷ್ಟೇ ಮುಖ್ಯವಾಗಿದೆ. ಹಿಂದುತ್ವವಾದಿಗಳೂ ತಮ್ಮ ಅಯೋಧ್ಯಾ ಚಳುವಳಿಯ ಸಮಯದಲ್ಲಿ ಭಗತ್ ಸಿಂಗ್‌ನನ್ನು ಬಳಸಿಕೊಂಡದ್ದನ್ನು ನೆನೆಸಿಕೊಂಡರೆ ಕಾರ್ಮಿಕರು ಈ ನಿಟ್ಟಿನಲ್ಲಿ ಬಹಳ ಹಿಂದಿದ್ದಾರೆ ಎನ್ನಬಹುದು. ಪ್ರಸ್ತುತ ಪರಿಸ್ಥಿತಿಯಲ್ಲಿ ಮೇ ದಿನದಂದು ಕೆಂಬಾವುಟ ಹಿಡಿದು ವಿಶ್ವ ಕಾರ್ಮಿಕರೇ ಒಂದಾಗಿ ಎಂಬ ಘೋಷಣೆಗಳನ್ನು ಕೂಗುವುದಕ್ಕೆ ಮಾತ್ರ ನಮ್ಮ ಚಳುವಳಿಗಳು ಸೀಮಿತಗೊಂಡರೆ, ಕಾರ್ಮಿಕರಲ್ಲಿ ರಾಜಕೀಯ ಪ್ರಜ್ಞೆ ಮೂಡಿಸಲಾಗುವುದಿಲ್ಲ. ಕಾರ್ಮಿಕರಲ್ಲಿ, ಕನಿಷ್ಠಪಕ್ಷ ಸಂಘಟಿತ, ವಿದ್ಯಾವಂತ ಕಾರ್ಮಿಕರಲ್ಲಿ ಪ್ರಗತಿಪರ ಚಿಂತನೆಗಳನ್ನು ಹುಟ್ಟುಹಾಕುವುದು ಸಂಘಟನೆಗಳ, ಪಕ್ಷಗಳ ಆದ್ಯತೆಯಾಗಬೇಕಾಗಿದೆ. ಕೇವಲ ತಮ್ಮ ವೇತನ, ಸವಲತ್ತು, ಸೌಕರ್ಯಗಳಿಗಾಗಿ ಹೋರಾಡುವ ಪ್ರವೃತ್ತಿಯನ್ನು ಬಿಟ್ಟು ಕಾರ್ಮಿಕ ಚಳುವಳಿಯ ಮುಂಚೂಣಿಯಲ್ಲಿರುವ ಸಂಘಟಿತ ಕಾರ್ಮಿಕರು, ದೇಶದ ಅಸಂಖ್ಯಾತ ಅಸಂಘಟಿತ ಕಾರ್ಮಿಕರಿಗೆ, ಕೃಷಿ ಕಾರ್ಮಿಕರಿಗೆ, ನಿರುದ್ಯೋಗಿಗಳಿಗೆ ನಾಯಕತ್ವ ನೀಡಬೇಕಾಗಿದೆ. ನಮ್ಮ ದೇಶದ ದುಡಿಯುವ ವರ್ಗವೆಂದರೆ ಬಹುಪಾಲು ದಲಿತರು ಮತ್ತು ಅಲ್ಪಸಂಖ್ಯಾತರನ್ನೇ ಒಳಗೊಂಡಿರುತ್ತದೆ. ವರ್ಗ ಹೋರಾಟದೊಡನೆ ಜಾತಿ ಪದ್ಧತಿ, ಕೋಮುವಾದ, ಭಯೋತ್ಪಾದನೆ, ಧಾರ್ಮಿಕ ಮೂಲಭೂತವಾದ ಮುಂತಾದ ಸಾಮಾಜಿಕ ಅನಿಷ್ಟಗಳ ವಿರುದ್ಧ ಹೋರಾಡುವುದೂ ಪ್ರಜ್ಞಾವಂತ ಕಾರ್ಮಿಕರ ಆದ್ಯತೆಯಾಗಬೇಕಾಗಿದೆ. ದೇಶಾಭಿಮಾನ, ಭಾಷಾಭಿಮಾನ, ಧರ್ಮಾಂಧತೆ, ಜಾತಿಪ್ರಜ್ಞೆ ಮುಂತಾದ ಭಾವುಕ ಅಂಶಗಳಿಗೆ ಬಲಿಯಾಗದೆ ವರ್ಗರಹಿತ, ಶೋಷಣಾರಹಿತ ಪ್ರಜಾತಾಂತ್ರಿಕ ಸಮಾಜದ ನಿರ್ಮಾಣದೆಡೆಗೆ ಸಾಗುವುದು ಕಾರ್ಮಿಕ ಚಳುವಳಿಗಳ ಆದ್ಯತೆಯಾಗಬೇಕಾಗಿದೆ.

ಭಾರತದಂತಹ ಸಾಮಾಜಿಕ ಸನ್ನಿವೇಶದಲ್ಲಿ ಹಲವಾರು ರೀತಿಯ ದ್ವಂದ್ವಗಳು, ವಿರೋಧಾಭಾಸಗಳು ಉಂಟಾಗುವುದು ಸಹಜವೇ. ಸಾಮಾಜಿಕ ನ್ಯಾಯದ ನೆಲೆಯಲ್ಲಿ ನಿಂತು ಯೋಚಿಸುವಾಗ ಜಾತಿ, ಉಪಜಾತಿ, ವರ್ಗ, ಭಾಷೆ, ಪ್ರಾಂತ್ಯ, ಧರ್ಮ, ಹೀಗೆ ಹತ್ತು ಹಲವು ಸಂಗತಿಗಳು ಧುತ್ತೆಂದು ಎದುರುಬಂದು ನಿಲ್ಲುತ್ತವೆ. ಹಲವಾರು ಸಿದ್ಧಾಂತಗಳಿಗೆ, ತತ್ವಗಳಿಗೆ, ಧರ್ಮಗಳಿಗೆ, ಚಳುವಳಿಗಳಿಗೆ, ನೆಲೆಯಾಗಿರುವ ಸಮಾಜದಲ್ಲಿ ಸೈದ್ಧಾಂತಿಕ ಭಿನ್ನಾಭಿಪ್ರಾಯಗಳು ಸಹಜ ಪ್ರಕ್ರಿಯೆಯಾಗಿರುತ್ತವೆ. ಹಾಗಾಗಿ ಯಾವುದೇ ಒಂದು ಸಿದ್ಧಾಂತದಿಂದ ಎಲ್ಲಾ ಸಾಮಾಜಿಕ ಸಮಸ್ಯೆಗಳಿಗೆ ಪರಿಹಾರ ದೊರೆಯುವುದೆಂದು ಅಪೇಕ್ಷಿಸುವುದು ತಪ್ಪಾಗುತ್ತದೆ. ಆದ್ದರಿಂದ ಯಾವುದೇ ಸಂಘಟನೆ – ಪಕ್ಷವು ತನ್ನ ಸೈದ್ಧಾಂತಿಕ ನಿಲುವುಗಳನ್ನು ಸಡಿಲಗೊಳಿಸದೆಯೇ, ಇತರ ಸಂಘಟನೆಗಳೊಡನೆ ಕೈಜೋಡಿಸಿ ಹೋರಾಡುವುದು ಪ್ರಸ್ತುತ ಸಂದರ್ಭದಲ್ಲಿ ಅವಶ್ಯವೂ ಹೌದು, ನ್ಯಾಯೋಚಿತವೂ ಹೌದು. ಈ ರೀತಿಯ ಸಮಗ್ರ, ವಿಶಾಲ ದೃಷ್ಟಿಕೋನವನ್ನು ಸಂಘಟಿತ ಕಾರ್ಮಿಕ ವಲಯ ಬೆಳೆಸಿಕೊಂಡಲ್ಲಿ, ಮೇ ದಿನಾಚರಣೆ ಅರ್ಥಪೂರ್ಣವಾಗುತ್ತದೆ, ಸಾರ್ಥಕವಾಗುತ್ತದೆ.

ನಾ. ದಿವಾಕರ
೫೦೪, ಚಿರಂತನ, ೧೩ನೇ ಅಡ್ಡರಸ್ತೆ
ಶ್ರೀರಾಂಪುರ ೨ನೇ ಹಂತ, ಮೈಸೂರು - ೫೭೦ ೦೨೩



## ಬಿಲ್ಲು ಬಾಣಾ

ಆಫೀಸುಗಳಲ್ಲಿ
ಪಾಸಾಗಬೇಕೆ
ನಿಮ್ಮ "ಬಿಲ್ಲು" ?
ಹಾಗಾದರೆ...
ಬಿಡುವುದೊಳಿತು
ಲಂಚದ "ಬಾಣ"

ಅಶೋಕ ಯು. ಪತ್ತಾರ
ಸ. ಕಿ. ಕ. ಗಂ. ನಂ. ೧೯, ಡಿ. ಆರ್. ಪಾಟೀಲ ನಗರ
ಹಮಾಲರ ಕಾಲನಿ, ಹಾತಲಗೇರಿ ರಸ್ತೆ, ಗದಗ

# ಸಂಬಂಧ

ಡಾ॥ ಸಬಿಹಾ ಭೂಮಿಗೌಡ







ಎಂದಿನಂತೆ ನಸುಕಿನಲ್ಲೆ ಎದ್ದು ಬಹಿರ್ದೆಸೆಗೆಂದು ಹೋಗಿದ್ದ ಸಾಹುಕಾರ ಬಸವಣ್ಣೆಪ್ಪನವರು ಹಿಂದಿರುಗುವ ದಾರಿಯಲ್ಲಿ ತೀವ್ರ ಎದೆನೋವು ಕಾಣಿಸಿಕೊಂಡು ಕುಸಿದು ಬಿದ್ದರು. ಸಾಹುಕಾರರು ಬಿದ್ದುದನ್ನು ಕಂಡ ಸುತ್ತಲಿನ ಮಂದಿ ಓಡಿಬಂದು, ಅವರನ್ನು ಎತ್ತಿ ಕೂರಿಸಿ, ಮುಖಕ್ಕೆ ನೀರು ಚಿಮುಕಿಸಿದರು. ಆದರೆ ಗಜಗಾತ್ರದ ಬಸವಣ್ಣೆಪ್ಪನವರನ್ನು ಎತ್ತಿಕೊಂಡು ಬರಲು ಸಾಧ್ಯವಾಗದೆ, ಎತ್ತಿನ ಗಾಡಿಯಲ್ಲಿ ಕೂರಿಸಿಕೊಂಡು ಮನೆಯತ್ತ ಕರೆತಂದರು. ಈ ಸುದ್ದಿ ಕ್ಷಣದಲ್ಲಿ ಕಾಳ್ಗಿಚ್ಚಿನಂತೆ ಊರಲ್ಲೆಲ್ಲ ಹರಡಿತು. ಸುದ್ದಿ ಕಿವಿಗೆ ಬಿದ್ದದ್ದೆ ರಾಜವ್ವನ ಕೈಯಲ್ಲಿದ್ದ ನೀರಿನ ಚರಿಗೆ ಕೆಳಗೆ ಬಿತ್ತು. ಏನು ಎತ್ತ ಎಂದು ನೋಡದೆ, ಸೀದಾ ಬಸವಣ್ಣೆಪ್ಪನವರ ಮನೆಯತ್ತ ಓಡಿದಳು. ಅವಳನ್ನು ಕಂಡದ್ದೇ, ಸಾಹುಕಾರರನ್ನು ಬಂಡಿಯಿಂದ ಇಳಿಸಲು ನೋಡುತ್ತಿದ್ದ ಗುಂಪು ಇಬ್ಭಾಗವಾಯಿತು. ಅಲ್ಲಿಯವರೆಗೆ ನೋವಿನೊಂದಿಗೆ ಹೋರಾಡುತ್ತ ಕಣ್ಮುಚ್ಚಿದ್ದ ಬಸವಣ್ಣೆಪ್ಪನವರು ರಾಜವ್ವಳ ಧ್ವನಿಗೆ ಮೆಲ್ಲನೆ ಕಣ್ತೆರೆದರು. ಒಂದು ಕ್ಷಣ ಇಬ್ಬರ ಕಣ್ಣುಗಳು ಕೂಡಿದವು. ಮರುಗಳಿಗೆಯಲ್ಲಿ ಸಾಹುಕಾರರ ಗೋಣು ವಾಲಿತು. ಎಲ್ಲರೂ ಜಗತ್ತೇ ಸ್ತಬ್ಧವಾದಂತೆ ಮರಗಟ್ಟಿಹೋದರು. ಮುಂದೇನು ಮಾಡಬೇಕು ಎಂಬುದು ಹೊಳೆಯದೇ ಅವರಿಗೆ ಕೈಚೆಲ್ಲಿದಂತಾಯಿತು. ನಿಧಾನವಾಗಿ ಯಾಂತ್ರಿಕವೆಂಬಂತೆ ಕಳೇವರವನ್ನು ಅವರ ಮನೆಯೊಳಗೆ ಇರಿಸಿದರು. ಇಡೀ ಮನೆ ಬಣಗುಟ್ಟುತ್ತಿದೆ. ಒಳಗೆ ಒಂದು ನರಪಿಳ್ಳೆಯೂ ಇಲ್ಲ. ಯಾರೋ ಅವರ ಹೆಂಡತಿ ಮಕ್ಕಳಿಗೆ, ಬಂಧು ಬಾಂಧವರಿಗೆ ತಂತಿ ನೀಡಲು ಓಡಿದರು. ಯಾವತ್ತೂ ಆ ಮನೆಯೊಳಗೆ ಕಾಲಿಡದ ರಾಜವ್ವ ಸೀದಾ ಒಳನುಗ್ಗಿ, ಪಡಸಾಲೆಯಲ್ಲಿದ್ದ ಕಳೇಬರದ ತಲೆಯನ್ನು ತನ್ನ ತೊಡೆಯ ಮೇಲಿರಿಸಿಕೊಂಡು, ''ಯಾರಾದ್ರೂ ಬಾಯಿಗೆ ನೀರು ಹಾಕ್ರಿ'' ಎಂದು ಗೋಗರೆಯತೊಡಗಿದಳು.

''ಏನ್ ಸ್ವಾಭಿಮಾನ ಅಂತೀನಿ ಸಾಹುಕಾರ್ದು! ಅಷ್ಟ ಎದೀನೋವು ಇದ್ರೂ, ದಾರ್‍ಯಾಗ ತಮ್ಮನ ಮನಿ ಬಾಜೂದಾಗ ಇತ್ತಲ್ಲ ಅಂತ ಮಂದಿ ಗಾಡೀನ ಅಲ್ಲೇ ತರಬ್ಯಾಕ ಹೋದ್ರ, ಬ್ಯಾಡಂತ ಸನ್ನೆ ಮಾಡಿದ್ರಲ್ಲ! ಅವಾದ್ರೂ ಎಂಥಾ ಮೂಳಗಳು ಅಂತೀನಿ. ಯಾಕ? ಏನಾತು? ಅಂತೇನಾರ ಹತ್ರ ಬಂದ್ರ? ಖೂನ ಇಲ್ದವ್ರಂಗ ಕೂತಿದ್ರೂ ಅಂತೀನಿ!'' ಎಂದ ಫಕೀರಪ್ಪ.

''ಅಲ್ಲಾ ಕಟ್ಟೀಮ್ಯಾಗ ಯಾರಿದ್ರು? ಸಾವ್ಕಾರ್ರ ತಮ್ಮನ ಮಕ್ಳಿಗೆ ಗೊತ್ತಾತಾ ಇಲ್ಲಾ? ಇಂಥಾ ವ್ಯಾಳ್ಯಾದಾಗೂ ಏನ್ ಹಗೆತನ ಸಾಧಿಸ್ತಾರಾ ಅಂತೀನಿ! ಅಂವ ಶರಣಪ್ಪ ಹಂಗಲ್ಲ. ಅವಂಗ ದೊಡ್ಡಪ್ಪನ್ನ ಕಂಡ್ರ ಕಾಳ್ಜಿ ಐತಿ. ಅವಂಗ ಸುದ್ದಿ ಮುಟ್ಸಿರಿ'' ಎಂದ ಸಾಹುಕಾರರ ಮನೆ ಆಳು ಚಂದಪ್ಪ.

ಆ ವೇಳೆಗೆ ಸುತ್ತಮುತ್ತಲ ಮನೆಗಳಿಂದ ಬಂದ ಹೆಂಗಸರು ಬಾಗಿಲಲ್ಲೇ ಇಣುಕಿ ನೋಡುತ್ತ, ರಾಜವ್ವಳನ್ನು ಒಳಗೆ ಕಂಡು ಗಾಬರಿಗೊಳ್ಳುತ್ತ ಪಿಸುಗುಟ್ಟತೊಡಗಿದರು.

''ಅಲ್ಲಾ ಕಳಕವ್ವ, ರಾಜವ್ವನ್ನ ನೋಡಿದ್ಯಾ? ಸ್ವಾಮಿಗಳು ಬರೂ ಹೊತ್ನಾಗ ಆಕಿ ಅಲ್ಲಿದ್ರ ಮತ್ತ ರಗಳಿ ಆಗ್ತೈತಿ. ಅಕಿನ ಅಲ್ಲಿಂದ ಎಬ್ಬಿಸ್ಬೇಕಿತ್ತಲ್ಲಬೇ'' ಎಂದಳು ಲಕ್ಷ್ಮವ್ವ.

''ಹೂಂ. ನೋಡ್ ನನಗ ಹೊಳೀಲಿಲ್ಲ. ಅಂದಂಗ ಸಾಹುಕಾರ್ರು ಅಕೀನ್ನ ನೋಡೂತನ್ಕ ಜೀವ ಕೈಯಾಗ ಹಿಡಿದಿದ್ರು ಅನಸ್ತತ್ತ ನೋಡಬೇ. ಅಕೀ ಮಾರಿ ನೋಡೂತ್ಲೆ ಚೆಂಡ್ ಚೆಲ್ಲೀದ್ರಂತ ನೋಡ್. ಅಕೀ ಪುಣ್ಯಾಅರ ಎಷ್ಟ ಇರಬೇಕ್ ಅಂತೀನಿ'' ಎಂದಳು ಕಳಕವ್ವ.

''ಹೀಂಗಂತೀಯಾ? ಎಲ್ಲಾ ನಾವ್ ನಾವ್ ಪಡದ್ ಬಂದಿರೂದು. ಅಲ್ಲಾ ಮನ್ನೆಮನ್ನೆರ ಮತ್ತೆ ಜಗಳ ಮಾಡ್ಕೊಂಡು ಸಾವ್ಕಾರ್ರ ಹೇಣ್ತಿ ತೌರಿಗೆ ಹೋದ್ಲಲ್ಲ! ಇಲ್ಲೇ ಇದ್ದಿದ್ರ ಕೊನೀಗಾಲ್ದಾಗ ಎರಡ್ ಕಾಳ್ ನೀರರ ಹಾಕೂ ಭಾಗ್ಯ ಅಕಿಗೆ ಸಿಗ್ತಿತ್ತಲ್ಲ.''

''ಐ ಬಿಡು, ರಾಜವ್ವ ಏನ್ ಹೆಣ್ತಿಗಿಂತ ಕಡಿಮಿ ಮಾಡ್ಯಾಳ? ಸಾಬ್ರಾಕಿ ಆದ್ರೇನಾತ್. ಮೂವತ್ ಮೂವತ್ತೈದು ವರ್ಷದಿಂದ ನಾವ ನೋಡಾಕತ್ತೀವಲ್ಲ... ಸಾವ್ಕಾರ್ರೂ ಚೆನ್ನವ್ವಗ ಕಡ್ಮಿ ಮಾಡಿಲ್ಲ, ರಾಜವ್ವಗೂ ಕಡಿಮಿ ಮಾಡಿಲ್ಲ. ಇಬ್ರ ಮಕ್ಳನ್ನೂ ಒಂದೇ ರೀತೀಲೆ ನೋಡ್ಕೊಂಡಾರ, ಲಗ್ನ ಮಾಡ್ಯಾರ. ಈ ಮುದಿ ವಯಸ್ನಾಗೂ ಗಂಡನ್ನ ಕ್ಷಮಿಸ್ದೆ ಹ್ಯಾವಾ ಮಾಡ್ಕೊಂಡ್ ನಿಂತ್ರ ಏನ್ ಬಂದಂಗಾತು ಅಂತೀನಿ.''

''ಏ ಶರಣಪ್ಪ, ಗಡಾದ ಶಿವಮ್ಮ ಅದಾಳಲ್ಲ. ಅಕೀಗೆ ಮದ್ಲ ಸುದ್ದಿ ಮುಟ್ಸಿರ್ರೀ. ಈ ಭಾವನ ಮ್ಯಾಲ ಭಾಳ ಅಕ್ಕರಿಕಿ ಇಟ್ಕೊಂಡಾಳ. ಪಾಪ, ಇನ್ನ ಆಕಿ ಮ್ಯಾಲೇಳ್ಯೂದಕ್ಕ ಭಾಳ ದಿನ ಹಿಡೀತಾವ ಅನಸ್ತತ್ತ.''

''ರಾಜವ್ವನ ಮಗಳು ಶಿಮೊಗ್ಗದಾಗ ಅದಾಳಂತಲ್ಲ. ಅಕೀಗೂ ಸುದ್ದಿ ಕಳ್ಸು ಅನ್ಬೇಕಿತ್ತು. ಸಾವ್ಕಾರಿಗೆ ತಮ್ಮ ಮಗಳು ಈರವ್ವನ ಮ್ಯಾಲೆ ಇದ್ದಷ್ಟು ಪ್ರೀತಿ ಸುಂದ್ರವ್ವನ ಮ್ಯಾಲೂ ಇತ್ತು. ನಾಕೈದು ವರ್ಷಾತು ಏನ. ಮಗಳು ಅಳಿಯ ಗಾಡಿ ಮಾಡ್ಕೊಂಡು ಶಿಮೊಗ್ಗದ ಸುತ್ತಮುತ್ತಿನ ಊರೆಲ್ಲ ತೋರ್ಸಿದ್ರು ಅಂತ ಸಾವ್ಕಾರ್ರು ಎಲ್ರ ಜೋಡೀಲೆ ಏನ್ ಖುಷೀಲೆ ಹೇಳ್ತಿದ್ರು.''

''ನೀ ಏನ ಅನ್ನಬೇ. ಸಾವ್ಕಾರ್ರಿಗೆ ಇಂಥಾ ಗತಿ ಬರ್‍ಬಾರ್ದಿತ್ತು. ಅವ್ರು ಇವ್ರು ಅಂಬ ಭೇದ ಮಾಡ್ದ ಅಣ್ಣ ತಮ್ಮದೀರ್ನ ದಾರೀಗೆ ಹಚ್ಚಿದ್ರು; ಅವ್ರಿಗೆ ಅಂತ ಮನಿ ಕಟ್ಟಿ ಕೊಟ್ರು; ಅವ್ರ ಮಕ್ಳನ್ನ ಹಚ್ಕೊಂಡ್ರು ... ಆದ್ರ ಕೊನೀಗಾಲಕ್ಕ ನೋಡ್ ಹೀಂಗ್ ತಮ್ಮ ಮನಿಯಾಗ ಒಂದ್ ನರಪಿಳ್ಳಿ ಇಲ್ದಾಂಗ ಆತಲ್ಲಬೇ ...''

ಇವರ ಮಾತು ಇನ್ನೂ ಮುಂದುವರಿಯುತ್ತಿತ್ತೇನೋ, ಅಷ್ಟರಲ್ಲಿ ಸಾವ್ಕಾರ್ರ ಹೆಂಡತಿ ಚನ್ನಮ್ಮ ಮತ್ತು ಮಗಳು ಈರವ್ವ ಬಾಯಿ ಬಡಿದುಕೊಳ್ಳುತ್ತಾ ಬರುವುದು ದೂರದಿಂದ ಕಂಡುಬಂದಿತು. ಅದನ್ನು ಕಂಡದ್ದೇ ತಡ, ಕಳಕವ್ವ

ಮತ್ತು ಲಕ್ಷ್ಮವ್ವ ದುಡುದುಡುನೆ ಹೋಗಿ ರಾಜವ್ವಳ ಕಿವಿಯಲ್ಲಿ ಉಸುರಿ, ಹೆಚ್ಚು ಕಡಿಮೆ ಅವಳನ್ನು ಮನೆಯಿಂದ ಹೊರಗೆ ಎಳೆದುಕೊಂಡೇ ಬಂದು ಮೂಲೆಯಲ್ಲಿ ಕೂರಿಸಿದರು.

೨

ಸುಂದ್ರವ್ವ ಬರುವಷ್ಟರಲ್ಲಿ ಹೊತ್ತು ಇಳಿದಿತ್ತು. ಊರ ಸಮಸ್ತರು ಮುಂದಿನ ಕಾರ್ಯಕ್ಕೆ ಅವಸರಿಸುತ್ತಿದ್ದರು. ಕಡೆಯ ಬಾರಿಗೆ ಅಪ್ಪನ ಮುಖ ನೋಡುವ ಅವಕಾಶವಾದರೂ ಸಿಕ್ಕಿತಲ್ಲ, ಅದೇ ಪುಣ್ಯ ಎಂಬ ಭಾವ ಸುಂದ್ರವ್ವಳಲ್ಲಿ ದಟ್ಟವಾಗಿತ್ತು. ಈರವ್ವ, ಸುಂದ್ರವ್ವ ಮುಖಮುಖ ನೋಡಿಕೊಂಡರು. ಯಾರು ಯಾರಿಗೆ ಸಮಾಧಾನ ಹೇಳಬೇಕು? ಇಬ್ಬರೂ ಭೇಟಿಯಾಗಿ ನಾಕ್ಕೈದು ವರ್ಷಗಳೇ ಉರುಳಿವೆ. ಮಕ್ಕಳಿಗೆ ಬೇಸಿಗೆ ರಜೆ ಬಂದಾಗ, ಊರಿಗೆ ಬರುವುದು ರೂಢಿ. ಹಾಗೆ ಬಂದಾಗ ಇಬ್ಬರೂ ತಮ್ಮ ಸುಖ ದುಃಖ ಹಂಚಿಕೊಳ್ಳುತ್ತಿದ್ದರು. ತಮ್ಮ ಮಕ್ಕಳು ಜೊತೆಯಾಗಿ ಆಡುವುದು, ಗುದ್ದಾಡುವುದನ್ನು ದೂರದಿಂದಲೇ ನೋಡಿ ಹರ್ಷಿಸುತ್ತಿದ್ದರು. ಮಕ್ಕಳು ಬೆಳೆದಂತೆ ಅವರ ರಜೆಗಳ ವ್ಯತ್ಯಾಸದಿಂದ ಇತ್ತೀಚೆಗೆ ಇಬ್ಬರ ಭೇಟಿ ತಪ್ಪುತ್ತಾಬಂದಿದೆ. ಇವತ್ತು ಮಕ್ಕಳಿಲ್ಲದೆ ಒಬ್ಬೊಬ್ಬರೇ ಬಂದಿದ್ದಾರೆ!

ಕ್ರಿಯೆಗಳೆಲ್ಲ ಮುಗಿದು, ತಲೆಗೆ ನೀರೆರೆದುಕೊಂಡು ಈರವ್ವ, ಸುಂದ್ರವ್ವ ಕೂತಿದ್ದಾರೆ. ಸುಂದ್ರವ್ವನ ತಗ್ಗಿದ ಕಣ್ಣುಗಳು ಅಕಸ್ಮಾತ್ ತನ್ನ ಕೈಗಳತ್ತ ಹೊರಳಿದವು. ಅಪ್ಪ ಮಾಡಿಸಿಕೊಟ್ಟ ಬಿಲವಾರ ಮತ್ತು ಪಾಟ್ಲಿ ಅಲ್ಲಿ ಮಿನುಗುತ್ತಿದ್ದವು. ಮರುಕ್ಷಣದಲ್ಲಿ ಈರವ್ವನ ಕೈಯತ್ತ ನೋಡಿದಳು. ಏನೂ ವ್ಯತ್ಯಾಸವಿಲ್ಲ. ಅವೇ ಮಾದರಿಯ ಬಿಲವಾರ, ಪಾಟ್ಲಿ ಅಲ್ಲಿವೆ. ಎಲ್ಲೂ ಯಾವತ್ತೂ ತಮ್ಮ ನಡುವೆ ವ್ಯತ್ಯಾಸ ಮಾಡದ ಅಪ್ಪನ ವ್ಯಕ್ತಿತ್ವ ಆಕೆಯ ಕಣ್ಣೆದುರು ಬಂದಿತು. ಸುಂದ್ರವ್ವ ಈರವ್ವನನ್ನು ದಿಟ್ಟಿಸಿದಳು. ಅವಳದೂ ಅದೇ ನೋಟ! ಬಾಲ್ಯದಿಂದಲೂ ಹೀಗೇ ಸಾಗಿದೆ. ಒಂದೇ ರೀತಿಯ ಗೊಂಬೆಗಾಗಿ, ಮುತ್ತಿನ ಸರಕ್ಕಾಗಿ, ಲಂಗ, ಸೀರೆಗಾಗಿ ಅಪ್ಪನೊಂದಿಗೆ ಜಗಳಾಡಿದ್ದು; ತಾನು ತಂದಿದ್ದರೂ ಇಲ್ಲವೆಂದು ಕೈಯಾಡಿಸಿ, ಸತಾಯಿಸಿ, ಇನ್ನೇನು ಕಣ್ಣೀರು ತುಳುಕಿತು ಅನ್ನುವಷ್ಟರಲ್ಲಿ ತಂದುದನ್ನು ಮುಂದೆ ಹಿಡಿಯುತ್ತಿದ್ದ ಅಪ್ಪನ ಚಿತ್ರ ಈರವ್ವಳ ಸ್ಮೃತಿಯಲ್ಲಿ ಹಾದು ಹೋಯಿತು. ಹಿರಿಯರ ಕೋಪತಾಪಗಳಾವುವೂ ಇವರ ಸ್ನೇಹವನ್ನು ಒಡೆಯುವಷ್ಟು ಸಮರ್ಥವಾಗಿರಲಿಲ್ಲ. ತೆಳುವಾದ ಮಂಕು ಕವಿಯುವ ಮೊದಲೇ ಅಪ್ಪನ ವಾತ್ಸಲ್ಯ ಅವರನ್ನು ತಬ್ಬುತ್ತಿತ್ತು.

ಮಗ್ಗುಲಲ್ಲೇ ಇದ್ದ ಸುಂದ್ರವ್ವನಿಗೆ ಇನ್ನಿಷ್ಟು ಅಂಟಿಕೊಂಡಂತೆ ಕೂತ ಈರವ್ವ "ಯಾಕಬೇ, ಒಬ್ಬಾಕೀನ ಬಂದ್ಯಾ?" ಎಂದಳು.

"ಹೂಂನಬೇ, ಮಕ್ಕಿಗೆ ಪರೀಕ್ಷ ನಡದಾವ. ಮತ್ತ ಮನೀಕಡೆ ಯಾರರ ಇರ್ಬೇಕಲ್ಲ. ನೀನೂ ಒಬ್ಬಾಕೀನ ಬಂದ್ಯಾ?"

"ಹೂಂನವ. ನಮ್ ಅತ್ತಿಯವರ್ಗೂ ವಯಸ್ಸಾತು. ಯಜಮಾನ್ರು ಕೆಲ್ಸದ ಮ್ಯಾಲ ಊರಿಗೆ ಹೋಗಿದ್ರ. ಸುದ್ದಿ ತಿಳೀತಿದ್ದಂಗ ದಡದಡ ಬಂದ್‌ಬಿಟ್ಟೆ ನೋಡ್."

ಏನೋ ನೆನಪಾಗಿ ಸುಂದ್ರವ್ವನ ಮುಖ ಗಂಭೀರವಾಯಿತು. ತನ್ನೊಂದಿಗೆ ಗಂಡನೂ ಬರಬೇಕೆಂದು ಆಕೆ ನಿರೀಕ್ಷಿಸಿದ್ದಳು. ಆತ ಮನಸ್ಸು ಮಾಡಿದ್ದರೆ ಅದು ಕಷ್ಟವೂ ಆಗುತ್ತಿರಲಿಲ್ಲ, ಆದರೆ... ತನ್ನ ಆಸೆಯನ್ನು ಗಂಡನ ಮೇಲೆ ಹೇರುವ ಧೈರ್ಯ ಮಾತ್ರ ಆಕೆಗೆ ಇರಲಿಲ್ಲ. ಇದಕ್ಕೆಲ್ಲ ಕಾರಣ ಇತ್ತಲ್ಲ. ಅದೇನು ಸಣ್ಣ ಕಾರಣವೇ? ಅಥವಾ ಬರೆದುದನ್ನು ಅಳಿಸಿಹಾಕುವಂತೆ ಅವಳ ಭೂತಕಾಲವನ್ನು ಅಳಿಸಿಹಾಕಲು ಬಂದೀತೆ? ಅವಳಿಗೊಂದು ಸಾಮಾಜಿಕವಾದ ಸ್ಥಾನಮಾನವನ್ನು ನೀಡಿದ ಗೌರವವನ್ನು ತಂದುಕೊಟ್ಟ ಗಂಡನಿಗೆ ಉಪದೇಶ ಹೇಳುವಷ್ಟು ಸಲಿಗೆಯಾಗಲಿ, ಅಧಿಕಾರವಾಗಲಿ ಆ ಮನೆಯಲ್ಲಿ ಆಕೆಗೆ ಎಲ್ಲಿಂದ ಬರಬೇಕು? ಇದಕ್ಕೆಲ್ಲ ಮೂಲ ಭಿತ್ತಿಯಾಗಿ ಎದುರು ನಿಂತದ್ದು... ಅದೇ...

ತವರಿನಲ್ಲಿ ಸುಂದ್ರವ್ವಳಾಗಿ ಪರಿಚಿತಳಾದರೂ ವಿವಾಹಾನಂತರ ಅವಳು ಸಾಹಿರಾ ಆಗಿದ್ದಾಳೆ. ಅವಳ ಈ ಇಬ್ಬಂದಿತನ ರಾಜವ್ವನಿಗೆ ಒದಗಿರಲಿಲ್ಲ. ಹಿಂದೂಗಳ ಜೊತೆಯಲ್ಲಿ ಬೆಳೆದು, ಅವರ ನಂಬಿಕೆಗಳನ್ನೇ ಅಂತರ್ಗತ ಮಾಡಿಕೊಂಡವರು ಅವರು. ಸುತ್ತಲಿನವರು ಕರೆದ ಹಿಂದೂ ಹೆಸರುಗಳಿಂದಲೇ ಗುರುತಿಸಿಕೊಂಡವರು. ಮುಂದೆ ತಾವು ಮುಸಲ್ಮಾನರೆಂಬುದನ್ನೇ ಆ ತಾಯಿ-ಮಗಳು ಮರೆತಿದ್ದರು. ನೆನಪಿಸಬೇಕಾದ ಮುಲ್ಲಾಗಳೂ ಆ ಊರಲ್ಲೇ ಇದ್ದಿರಲಿಲ್ಲ. ಇಂಥ ಸಂಬಂಧ ಆ ಊರಲ್ಲಿ ಹೊಸತೂ ಆಗಿರಲಿಲ್ಲ. ಅವರ ಭಾಷೆ, ಉಡುಗೆ, ಆಹಾರ ಎಲ್ಲವೂ ಸುತ್ತಲ ಎಲ್ಲರಂತೆಯೇ ಇದ್ದವು. ಧರ್ಮ ಅವರ ಚರ್ಮದಿಂದ ಆಳಕ್ಕೆ ಇಳಿದಿರಲಿಲ್ಲ. ಹೀಗಿರುವಾಗ ಧರ್ಮದ ಪ್ರಶ್ನೆ ಎದುರಾದದ್ದೇ ಸುಂದ್ರವ್ವಳ ವಿವಾಹದ ಸಂದರ್ಭದಲ್ಲಿ! ಈ ಬೆಳವಣಿಗೆಯೇ ಸುಂದ್ರವ್ವ ಮತ್ತು ಈರವ್ವರ ಕೌಟುಂಬಿಕ ಸಂಬಂಧಗಳ ಮೇಲೂ ಪ್ರಭಾವ ಬೀರತೊಡಗಿತ್ತು. ಸಾಹಿರಾ ಆಗಿದ್ದ ಸುಂದ್ರವ್ವಳ ಗಂಡನಿಗೆ ಮಾವನ ಬಗ್ಗೆ ಗೌರವಗಳಿದ್ದರೂ ಸಾರ್ವಜನಿಕವಾಗಿ ಅವರನ್ನು ಒಪ್ಪಿಕೊಳ್ಳುವುದು ಮಾತ್ರ ಬಿಸಿತುಪ್ಪವಾಗಿತ್ತು.




ಅತ್ತೆ-ಮಾವನವರನ್ನು ಸತ್ಕರಿಸಿ ಊರೆಲ್ಲಾ ತೋರಿಸುವ ಔದಾರ್ಯ ತೋರಿದರೂ ಪಟ್ಟಣದವರ ಹಲವು ಪ್ರಶ್ನೆಗಳಿಗೆ ಖಾಸಿಂ ಸಾಹೇಬರು ಉತ್ತರಿಸಲು ತಡಕಾಡಬೇಕಾಗುತ್ತಿತ್ತು. ಅಂಥ ಸಂದರ್ಭಗಳಲ್ಲಿ,

"ನಿಮ್ ಅಪ್ಪಂಗ ಹೇಳು, ಮನಿಯಾಗಿದ್ದಾಗ ಬರೀ ಬನಿಯನ್ನಾಗ ಇರಬ್ಯಾಡ ಅಂತ. ಆ ಉಳ್ಳಾಗಡ್ಡಿ ಪೊರಿಹಂಗ ಇರೂ ಬನಿಯನ್‌ನಿಂದ ಅವ್ರ ಬೆಳ್ಳಿ ಕರಡಿಗಿ ಎಲ್ರ ಕಣ್ಗೂ ಬೀಳತ್ತ. ಮದ್ಲ ಇಲ್ಲಿ ಮಂದಿ ಒಂದ್ ನಮೂನಿ. ಅಂಥಾದ್ರಾಗ ಇದು ಸಿಕ್‌ಬಿಟ್ರ ಕೇಳ್‌ಬೇಕಾ? ಸ್ವಲ್ಪ ಸೂಕ್ಷ್ಮಾಗಿ ಇರ್ಬೇಕು ಅಂತ ಹೇಳು ನೀನು" ಎಂದು ಸಿಡಿಮಿಡಿಗುಟ್ಟುತ್ತಿದ್ದರು.

ಗಂಡನ ಮಾತನ್ನು ತಪ್ಪೆನ್ನಲೂ ಆಗದೆ, ಅಪ್ಪನಿಗೆ ಗಂಡ ಹೇಳಿದ ವಿಚಾರವನ್ನು ಮುಟ್ಟಿಸಲೂ ಆಗದೆ ಸುಂದ್ರವ್ವ ಒದ್ದಾಡಿದ ದಿನಗಳೆಷ್ಟು! ಅಜ್ಜನ ಪೂಜೆ, ವಿಭೂತಿಪಟ್ಟೆ ಇವುಗಳನ್ನು ಕುರಿತಂತೆ ಮಕ್ಕಳ ಕುತೂಹಲದ ಪ್ರಶ್ನೆಗಳನ್ನಾದರೂ ನಿವಾರಿಸಬಲ್ಲಳು. ಆದರೆ...

ಅತ್ತ ಈರವ್ವನದು ಇನ್ನೊಂದು ಬಗೆ. ಆಕೆಯ ಗಂಡನಿಗೆ ಮಡದಿ. ಆಗಾಗ ಊರಿಗೆ ಹೋಗುವುದು, ಸುಂದ್ರವ್ವನೊಂದಿಗಿನ ಆಕೆಯ ಸಖ್ಯ, ಇಬ್ಬರ ಮಕ್ಕಳೂ ಬೆಳೆಯುವ ಕ್ರಮ ಹಿತವಿಲ್ಲ. ಹೀಗಾಗಿ ಹೆಂಡತಿಗೆ ಖಡಾಖಂಡಿತ ಹೇಳಿ ಮನಸ್ಸು ನೋಯಿಸುವುದಕ್ಕೂ ಆಗದೆ, ಅವಳ ಜೊತೆಯಲ್ಲಿ ತಾನು ಊರಿಗೆ ಹೋಗುವುದನ್ನೇ ತಪ್ಪಿಸುತ್ತಿದ್ದ. ಇವೆಲ್ಲದರ ಪರಿಣಾಮ ಇತ್ತೀಚಿನ ವರ್ಷಗಳಲ್ಲಿ ಸ್ಪಷ್ಟ ರೂಪ ಪಡೆದುಕೊಳ್ಳುತ್ತಿತ್ತು. "ಇದೆಲ್ಲಾ ಎಷ್ಟ್ ಕಾಲ? ನಮ್ ಮಕ್ಳ ತಲೀಗೆ ಈ ಪ್ರೀತಿ, ಅಂತಃಕರಣ ಎಲ್ಲಿ ಉಳೀತೈತಿ" ಎಂದು ಇಬ್ಬರೂ ನಿಟ್ಟುಸಿರು ಬಿಡುತ್ತಿದ್ದರು. ಈಗ ಇಲ್ಲಿವರೆಗೆ ಅವರನ್ನು ಜೋಡಿಸುತ್ತಿದ್ದ ಮುಖ್ಯ ಕೊಂಡಿಯೇ ಕಳಚಿಕೊಂಡಿರುವಾಗ, ತಮ್ಮದು ಇದೇ ಕಡೆಯ ಭೇಟಿಯೇನೋ ಎಂಬಂತೆ ಆತಂಕದಿಂದ ಈರವ್ವ, ಸುಂದ್ರವ್ವ ಪರಸ್ಪರರನ್ನು ನೋಡುತ್ತಿದ್ದಾರೆ; ತಲ್ಲಣವನ್ನು ಹಂಚಿಕೊಳ್ಳುತ್ತಿದ್ದಾರೆ.

ಸಾಹುಕಾರ ಬಸವಣ್ಣೆಪ್ಪನವರು ಲಿಂಗೈಕ್ಯರಾಗಿ ತಿಂಗಳು ಉರುಳಿದೆ. ಅವರ ಶಿವಗಣಾರಾಧನೆ ಅದ್ದೂರಿಯಾಗಿ ನೆರವೇರಿದೆ. ಸಾಹುಕಾರರ ವಕೀಲರು ಹೇಳಿ ಕಳಿಸಿದ್ದಾರೆಂದು ಆ ಮನೆಯಲ್ಲಿ ಎಲ್ಲರೂ ಮತ್ತೆ ಸೇರಿದ್ದಾರೆ. ವಕೀಲ ಮಹಂತಪ್ಪನವರು ವಿಲ್ ಅನ್ನು ಒಡೆಯುವ ಮೊದಲು ಸುತ್ತ ಒಮ್ಮೆ ಕಣ್ಣಾಡಿಸಿದರು. ರಾಜವ್ವ ಎಲ್ಲೂ ಕಾಣಲಿಲ್ಲ. ಪಕ್ಕದಲ್ಲಿದ್ದವರ ಕಿವಿಯಲ್ಲಿ ಉಸುರಿಸಿದರು. ಅವರು ಓಡಿಹೋಗಿ ಪಕ್ಕದ ಬೀದಿಯಲ್ಲಿದ್ದ ರಾಜವ್ವನನ್ನು ಬಲವಂತದಿಂದ ಕರೆತಂದರು. ಅವಳನ್ನು ಕಂಡದ್ದೇ ಚನ್ನವ್ವನ ಹುಬ್ಬು ಕೊಂಕಾಗಿ ಮೂಗು ಮೇಲೇರಿತು.

"ಏಯ್ ಅಲ್ಲೇ ನಿಂದ್ರು. ಈ ಮನೀ ಹೊಸಲ್ ತುಳೀಬ್ಯಾಡ. ನನ್ ಗಂಡನ್ನ ನುಂಗಿ ಹಾಕಿದಾಕಿ ನೀನ. ನನ್ನ ಇಷ್ಟವರ್ಷ ಗೋಳಾಡಿಸ್ದದ್ದು ಸಾಕಾಗ್ಲಿಲ್ಲಾ ನಿಂಗ? ಕಟ್ಗೊಂಡಾಕಿ ನಾನು ಇಲ್ಲಿ ಮರಮರ ಮರಗ್ತಾ ಇದ್ರ ನೀನ್ ಸುಖ ಸುರ್ಕೊತಿದ್ದಿ. ಈಗ ಇನ್ನ ಏನ್ ಆಶಾ ಇಟ್ಗೊಂಡು ಇಲ್ಲಿ ಹಿರಿಯಾಕ ಬಂದೀ ಅಂತೀನಿ. ಇಲ್ಲೀತನ್ಕಾ ನನ್ ಗಂಡನ್ನ ಹಿಂಡಿ ಹಿಪ್ಪಿ ಮಾಡಿದ್ದು ಸಾಕಾಗ್ಲಿಲ್ಲ ನಿಂಗ?..." ಎಂದು ಚನ್ನಮ್ಮ ಸಭಾ ಮರ್ಯಾದೆಯನ್ನೂ ಮೀರಿ ಆರ್ಭಟಿಸತೊಡಗಿದಳು. ವಕೀಲ

ಮಹಂತಪ್ಪನವರು ತಕ್ಷಣ ಎಚ್ಚೆತ್ತುಕೊಂಡು, ''ನೋಡ್ ಚನ್ನಮ್ಮಾ, ನಿನಗ್ ಅವರ್ ಹ್ಯಾಂಗ ಯಜಮಾನ್ರೋ ಆಕೀಗೂ ಅವರ್ ಯಜಮಾನ್ರ! ವಿಲ್‌ನಾಗ ಏನೈತಿ ಅದು ಇಬ್ರ ಸಮಕ್ಷಮದಾಗ ಬಗಿಹರೀಬೇಕು ಅಂತ ನಾನ ಆಕಿನ ಕರಿಸೀನಿ. ಈಗ ಮುಂದಿನ್ ಕೆಲ್ಸ ಮಾಡಕ ನನಗ ಸೌಡ್ ಕೊಡ್ತೀಯಾ ?'' ಎಂದು ಗಂಭೀರವಾಗಿ ನುಡಿದರು. ತನ್ನ ರೋಷ, ಅಸಹಾಯಕತೆ ಮತ್ತು ದುಃಖಗಳ ಒತ್ತಡಕ್ಕೆ ಚನ್ನಮ್ಮ ಒಳಗೊಳಗೇ ಬಿಕ್ಕುತ್ತಾ ಕುಳಿತರು. ಇನ್ನೊಂದು ತುದಿಯಲ್ಲಿ ಈರವ್ವ ಸುಂದ್ರವ್ವ ಇನ್ನಷ್ಟು ಹತ್ತಿರಕ್ಕೆ ಸರಿದು ಪರಸ್ಪರ ಅಂಟಿಕೊಂಡಂತೆ ಕುಳಿತರು.

ಗಂಭೀರ ಧ್ವನಿಯಲ್ಲಿ ವಕೀಲರು ಓದಿದ ವಿಲ್ಲನ್ನು ಎಲ್ಲರೂ ಕೇಳುತ್ತಿದ್ದರು. ಚನ್ನಮ್ಮ ತಮ್ಮ ಕಿವಿಯನ್ನು ತಾವೇ ನಂಬದಾದರು. ಇಪ್ಪತ್ತೆರಡೆಕರೆ ಮಸಾರಿ ಹೊಲ, ಹತ್ತೆಕರೆ ಎರೆಹೊಲ, ಮನೆ ಎಲ್ಲವನ್ನೂ ಗಂಡ ತಮಗೇ ಬಿಟ್ಟು ಕೊಟ್ಟಿದ್ದಾರೆ. ರಾಜವ್ವನ ಸುದ್ದಿಯೇ ಇಲ್ಲ! ತಾನು ಕೊನೆಗೂ ತನ್ನ ಗಂಡನನ್ನು ಅರಿತುಕೊಳ್ಳಲೇ ಇಲ್ಲವೇ ? ಎಂದು ಆಘಾತಗೊಂಡರು. ಓರೆಗಣ್ಣಿಂದ ರಾಜವ್ವನನ್ನು ನೋಡಿದರು. ಆಕೆಯಲ್ಲಿ ಯಾವ ಬದಲಾವಣೆಯೂ ಕಂಡು ಬರಲಿಲ್ಲ. ಎಲ್ಲವೂ ತನಗೆ ಗೊತ್ತಿತ್ತು ಎಂಬ ಮುಖಭಾವವಿತ್ತು. ಚನ್ನಮ್ಮ ಕಣ್ಣನ್ನು ಇನ್ನೊಂದೆಡೆ ಹೊರಳಿಸಿದರು. ಗಂಡನ ತಮ್ಮನ ಮಕ್ಕಳ ಮುಖ ಪೆಚ್ಚಾಗಿತ್ತು. ಶರಣಪ್ಪ ಮತ್ತು ಶಿವಮ್ಮ ಮಾತ್ರ ಇದೆಲ್ಲ ಸುಸೂತ್ರವಾಗಿ ಸಾಗುತ್ತಿರುವುದರ ಬಗ್ಗೆ ಸಮಾಧಾನ ಹೊಂದಿದಂತೆ ಕಂಡುಬರುತ್ತಿದ್ದರು. ಈರವ್ವ ಮತ್ತು ಸುಂದ್ರವ್ವರತ್ತ ದೃಷ್ಟಿ ಹರಿಸಿದಾಗ ಚನ್ನಮ್ಮ ಅಧೀರರಾದರು. ಇಷ್ಟು ವರ್ಷಗಳ ತಮ್ಮ ಗುದ್ದಾಟ, ಕೊಸರಾಟಗಳಾವುವೂ ಅವರ ಸ್ನೇಹವನ್ನು ಘಾಸಿಗೊಳಿಸಿರಲಿಲ್ಲ. ಮತ್ತೆ ರಾಜವ್ವನತ್ತ ದೃಷ್ಟಿ ಹರಿಸಿದರು. 'ಯಾವ್ದು ತನಗ ಇಷ್ಟ್ ಹ್ಯಾವ ಹುಟ್ಟೊ ಹಂಗ ಮಾಡಿದ್ದು? ಎರಡೆರಡ್ ಮನಿ ಮಾಡಿಕೊಂಡೋರು ತನ್ನ ಗಂಡ ಒಬ್ರ ಅಲ್ಲಲ್ಲ. ಆದ್ರೂ ತನಗ ಯಾಕ ಇದನ್ನ ಕೊನೀತನ್ಕ ಒಪ್ಗಳ್ಳಾಕ ಆಗಲಿಲ್ಲಾ? ರಾಜವ್ವನ ಗುಣಾನ ? ಸೌಂದರ್ಯನ ? ಅಲ್ಲಾ ತಾನ್ ಎಷ್ಟೇ ಹೊಂದಿಕೋಬೇಕು ಅಂದಾಗ್ಲೂ ರಾಜವ್ವನ ಮನೀಗೆ ಹೋಗೋದನ್ನ ಬಿಡಲಾರ್ದ ಗಂಡನ ಮ್ಯಾಲಿನ ಸಿಟ್ಟಾ?... ಹಂಗಂತ ರಾಜವ್ವ ಮರಿಬೇಕು ಅಂದ್ರ ರಾಜವ್ವ ಏನ್ ಸಂಪನ್ನಿ ಅನ್ನಕಾದಾ ? ಅಪರೂಪಕ್ಕೊಮ್ಮಿ ತಾನು ಈ ಮನೀಗೆ ಬಾಳಾಕ ಅಂತ ಬಂದಾಗೆಲ್ಲ ಉರ್‌ಮಾರಮ್ಮನಂಗ ಆಕಿ ಉರೀತಿರ್ಲಿಲ್ಲಾ? ಹಂಗಾರ ಆಸ್ತಿಯಾಗ ಆಕೀಗೆ ಏನೂ ಬರ್ದಿಲ್ಲ ಅಂತ ತಿಳ್ದೂ ಹ್ಯಾಂಗ ಸುಮ್ಕ ಕುಂತಾಳಲ್ಲ? ರಾಜವ್ವನ ಬಗ್ಗೆ ತನಗ ಇಲ್ಲೀತನ್ಕ ಚಾಡಿ ಹೇಳ್ತಿದ್ರಲ್ಲ ಅವರ್ ಮಾತು ಖರೇನಾ ? ಸುಳ್ಳಾ ?' ಎಂಬ ದ್ವಂದ್ವ ಚನ್ನಮ್ಮನಲ್ಲಿ ಆರಂಭವಾಯಿತು.

ವಕೀಲರು ರೋಖ ಹಣದ ವಿಲೇವಾರಿ ಬಗ್ಗೆ ಮಾತಾಡತೊಡಗಿದರು, ''ಬ್ಯಾಂಕ್‌ನಾಗ ಇರೂ ಒಂದ್ ಲಕ್ಷದಾಗ ಇಪ್ಪತ್ತೈದು ಸಾವ್ರ ಶರಣಪ್ಪಗ ಅಂಗಡಿ ಇಟ್ಕೊಳ್ಳಾಕ, ಹತ್ ಸಾವ್ರ ದಿನಾ ಅಡಿಗೀ ಮಾಡಿ ಹಾಕ್ತಿದ್ದ ಕನಕವ್ವಗ, ಹತ್ತ ಸಾವ್ರ ಮನೀ ಆಳ್‌ಮಗ ಚಂದಪ್ಪಗ ಕೊಡಬೇಕು, ಉಳಿದದ್ದು ಚನ್ನವ್ವನ ಮನ್ಸಿಗೆ ಬಂದಂಗ ವಿಲೇವಾರಿ ಆಗಬೇಕು'' ಎಂದು ವಿಲ್ ಓದಿ ಮುಗಿಸಿದರು. ತಂಗಿಗೆ ಆಗಲಿರುವ ಅನ್ಯಾಯ ತಡೆಯಲೆಂದು ಬಂದಿದ್ದ ಚನ್ನವ್ವನ ಅಣ್ಣಂದಿರು ಬೇಸ್ತು ಬಿದ್ದಿದ್ದರು, ಶಿವಮ್ಮನ ಮನಸ್ಸು ಭಾರವಾಗಿತ್ತು.

''ಹೂಂ... ನಮ್ ಭಾವನ್ದು ಭಾರೀ ದೊಡ್ ಮನ್ಸು. ಅವರ್ ಸಣ್ಣಾವ್ರಿದ್ದಾಗ ಯಾರ್ದೋ ಮನಿಗೆ ದತ್ತಕ್ಕ ಹೋದ್ರಂತ. ಅಲ್ಲೀ ಅನುಕೂಲದಾಗ ತಮ್ಮಂದ್ರ ಬಡತನಾನ ಕಣ್ಣೀಲೆ ನೋಡ್‌ಲಾರ್ದೆ ಎಲ್ಲಾನೂ ಇವ್ರಿಗೆ ಸುರ್ದ. ಒಬ್ರರ ನೆಟ್ಗ ಅವರ್ನ ಅರ್ಥ ಮಾಡ್ಕೊಳ್ಳಿಲ್ಲ. ಅವರ್ಗೆ ನೆಮ್ದಿ ತರ್‌ಲಿಲ್ಲ...'' ಎಂದು ಪೇಚಾಡುತ್ತಿದ್ದಳು. ಅಷ್ಟರಲ್ಲಿ ಒಂದು ನಿರ್ಧಾರಕ್ಕ ಬಂದ ಚೆನ್ನಮ್ಮ ಕಣ್ಣೊರೆಸಿಕೊಂಡು, ''ಅವರ್ ಹೇಳಿದಾಂಗ ರೊಕ್ಕಾ ಕೊಡೋರಿಗೆ ಕೊಡ್ರಿ. ಉಳಿದದ್ ರೊಕ್ಕಾನ ಸುಂದ್ರವ್ವನ ಹೆಸ್ರಾಗ ಹಚ್ಚ್‌ರಿ. ಮನಿ ಬಂಗಾರನ ಈರವ್ವ ಮತ್ತು ಸುಂದ್ರವ್ವರಿಗೆ ಸಮಪಾಲುಮಾಡ್ರೀ'' ಎಂದಳು.

ಡಾ|| ಸಬಿಹಾ ಭೂಮಿಗೌಡ
ರೀಡರ್, ಕನ್ನಡ ಅಧ್ಯಯನ ವಿಭಾಗ, ಮಂಗಳ ಗಂಗೋತ್ರಿ
ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳೂರು - ೫೭೪ ೧೯೯

# ಎರಡು ಚಿಂತನಗಳು

ಡಾ|| ರಾವೂರಿ ಭರದ್ವಾಜರು (ಜನನ : ೧೯೨೭) ತೆಲುಗಿನ ಒಬ್ಬ ಹೆಸರಾಂತ ಲೇಖಕರು. ಅವರ ವಿದ್ಯಾಭ್ಯಾಸ ಎಂಟನೆಯ ತರಗತಿಯವರೆಗೆ ಮಾತ್ರವೇ ಆಗಿದ್ದರೂ ಆಂಧ್ರ, ನಾಗಾರ್ಜುನ ಮತ್ತು ಜೆ. ಎನ್. ಟಿ. ವಿಶ್ವವಿದ್ಯಾನಿಲಯಗಳು ಅವರಿಗೆ ಗೌರವ ಡಾಕ್ಟರೇಟ್ ಪದವಿಯನ್ನು ನೀಡಿವೆ. ಪ್ರಾರಂಭದಲ್ಲಿ ಅವರು ಕಾರ್ಮಿಕರಾಗಿ, ಮೆಕ್ಯಾನಿಕ್ ಆಗಿ ದುಡಿದರು. ಅನಂತರ ಅನೇಕ ತೆಲುಗು ನಿಯತಕಾಲಿಕೆಗಳಲ್ಲಿ ಕೆಲಸ ಮಾಡಿದರು. ಆಕಾಶವಾಣಿಯಲ್ಲಿ ಕೆಲಸ ಮಾಡಿದರು. ಸಣ್ಣಕಥೆ, ಕಾದಂಬರಿ, ನಾಟಕ, ಪ್ರಬಂಧ, ಶಿಶುಸಾಹಿತ್ಯ ಮೊದಲಾದ ಪ್ರಕಾರಗಳಲ್ಲಿ ಸುಮಾರು ನೂರನಲವತ್ತಕ್ಕೂ ಹೆಚ್ಚು ಕೃತಿಗಳನ್ನು ರಚಿಸಿದ್ದಾರೆ. ಆಂಧ್ರಪ್ರದೇಶ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಕೇಂದ್ರ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, ಸೋವಿಯೆಟ್ ಲ್ಯಾಂಡ್ ನೆಹರೂ ಪ್ರಶಸ್ತಿಗಳು ಅವರಿಗೆ ದೊರಕಿವೆ.

* * *

ಕಾಷಾಯಾಂಬರಗಳನ್ನು ಧರಿಸಿರುವ ಆ ಸ್ಥೂಲಕಾಯನು, ಬದುಕಲು ಕಲಿತ ಜಾಣ. ಶತಶತಮಾನಗಳಿಂದಲೂ ಅನೇಕ ಚಿಂತನಪರರು ಹೇಳಿದ ಸೂಕ್ತಿಗಳನ್ನೇ ಸ್ವಲ್ಪ ಹೆಣೆದು, ಮತ್ತೆ ಸ್ವಲ್ಪ ಸೇರಿಸಿ, ಪದೇ ಪದೇ ಹೇಳುತ್ತಿರುವ ಮಾಯಕಾರ ಆತ. ಹಾಗೆ ಹೇಳುತ್ತ ಬಹಳ ಮಂದಿಯ ಕೈಯಲ್ಲಿ ಪೂಜೆ ಮಾಡಿಸಿ ಕೊಳ್ಳುತ್ತಿದ್ದಾನೆ. ಪ್ರಶಂಸೆ ಪಡೆಯುತ್ತಿದ್ದಾನೆ. ಕಾಣಿಕೆ ಸ್ವೀಕರಿಸುತ್ತಿದ್ದಾನೆ. ಸುಖಜೀವನವನ್ನು ಮಾಡುತ್ತಿದ್ದಾನೆ.

ಮರಕ್ಕೆ ಒರಗಿ ಕುಳಿತಿರುವ ಆ ಕೃಶಕಾಯನಾದ ಮನುಷ್ಯ ತನಗೆ ತೋಚಿದ ಯಾವುಯಾವುದೋ ಒಳ್ಳೆಯ ಕೆಲಸಗಳನ್ನು ಮಾಡುತ್ತ ಹೋಗುತ್ತಾನೆ. ಭಗವಂತನನ್ನು ಕುರಿತಾಗಲೀ ವೇದಾಂತವನ್ನು ಕುರಿತಾಗಲೀ ಅಸಲು ಪ್ರಸ್ತಾಪ ಸಹ ಮಾಡುವುದಿಲ್ಲ.

ಮೊದಲನೆಯವನಿಗೆ ಬಾಯಿ ಮಾಡುವುದು ಮಾತ್ರವೇ ಗೊತ್ತು.

ಎರಡನೆಯವನಿಗೆ ಉಪಕಾರ ಮಾಡುವುದರ ಹೊರತು ಮತ್ತೇನೂ ತಿಳಿಯದು.

*

''ಅವರು ದೊಡ್ಡ ವಿದ್ವಾಂಸರು, ಹಿರಿಯ ತತ್ತ್ವಜ್ಞಾನಿಗಳು. ವಿವಿಧ ಭಾಷೆಗಳ ಎಷ್ಟೋ ವೇದಾಂತ ಗ್ರಂಥಗಳನ್ನು ಅವರು ಓದಿದ್ದಾರೆ. ಅವುಗಳಲ್ಲಿನ ಸಾರವನ್ನೆಲ್ಲ ಜೀರ್ಣಿಸಿಕೊಂಡಿದ್ದಾರೆ. ಯಾವುದು ಸತ್ಯ ಯಾವುದು ಅಸತ್ಯ ಎಂಬುದನ್ನು ಅವರು ಹೇಳುತ್ತಾರೆ. ಯಾವುದು ನಿತ್ಯ ಯಾವುದು ಅನಿತ್ಯ ಎಂಬುದನ್ನು ಅವರು ಹೇಳುತ್ತಾರೆ. ಯಾವುದು ಪುಣ್ಯ ಯಾವುದು ಪಾಪ ಎಂಬುದನ್ನು ಅವರು ಸ್ಪಷ್ಟವಾಗಿ ಹೇಳುತ್ತಾರೆ. ಆ ಹೇಳುವುದನ್ನು ಸಹ ನಮ್ಮೆಲ್ಲರಿಗೂ ಅರ್ಥವಾಗುವ ರೀತಿಯಲ್ಲಿ ಸರಳವಾದ ಮಾತುಗಳಲ್ಲಿ ಹೇಳುತ್ತಾರೆ. ಹಿಂದೆ ಅವರ ಬೋಧನೆಗಳನ್ನು ಕೇಳಿದ್ದೇವೆ. ಆದರೂ ನಮಗೆ ತೃಪ್ತಿ ಆಗಲಿಲ್ಲ. ಆದ್ದರಿಂದಲೇ ಮತ್ತೊಮ್ಮೆ ಕೇಳೋಣ ಎಂದು ಬಹಳ ದೂರದಿಂದ ಬರುತ್ತಿದ್ದೇವೆ. ನೀವೂ ಬನ್ನಿ'' ಎಂದು ಆ ಭಕ್ತರು ಆಹ್ವಾನಿಸಿದರು.

''ನಿಮ್ಮ ಆಹ್ವಾನಕ್ಕೆ ಕೃತಜ್ಞ. ಅವರ ಹೆಸರು ಕೇಳಿದ್ದೇನೆಯೇ ಹೊರತು ಬೋಧನೆಯನ್ನು ಆಲಿಸಲಿಲ್ಲ. ದಿಕ್ಕುದೆಸೆಯಿಲ್ಲದ ಈ ಮುದುಕಮ್ಮ ಕೂರಲಾರದ ಸ್ಥಿತಿಯಲ್ಲಿ ಇದ್ದಾಳೆ. ಈಕೆಗೆ ಸ್ವಲ್ಪ ತಿನ್ನಿಸಿ ಚೇತರಿಸಿಕೊಂಡ ಮೇಲೆ ಆ ಮರದ ನೆರಳಿಗೆ ಒಯ್ದು ನಂತರ ಬರಲು ಪ್ರಯತ್ನಿಸುತ್ತೇನೆ'' ಎಂದ ಆತ ಆ ವೃದ್ಧೆಗೆ ಬಾಳೆಹಣ್ಣನ್ನು ತಿನ್ನಿಸುತ್ತ.

ಡಾ|| ರಾವೂರಿ ಭರದ್ವಾಜ
ಅನುವಾದ : ಡಾ|| ಎಚ್. ಎಸ್. ಸುಜಾತಾ,
೫೩, 'ಸುಹಾಸ,' ೪ನೇ ಮುಖ್ಯರಸ್ತೆ, ಮಾರುತಿ ದೇವಸ್ಥಾನದ ಬೀದಿ
ಕುವೆಂಪುನಗರ, ಮೈಸೂರು - ೫೭೦ ೦೧೯

# ಸಿಎಮ್ಮಾವ್ರ ಸತ್ಯನಾರಾಯಣ ಪೂಜೆ

**ಪ್ರೊ|| ಭಾಲಚಂದ್ರ ಜಯಶೆಟ್ಟಿ**

"ಮಗ ಬೆಳೆದು ನಿಂತಾನ, ಅಂವನಿಗೊಂದು ಕಂಕಣ ಕಟ್ಟಬೇಕು ಅನ್ನೋ ಚಿಂತಿ ನಿಮಗಿಲ್ಲ. ಯಾವಾಗ ನೋಡಿದ್ರೂ ಆ ಮೀಟಿಂಗು, ಈ ಮೀಟಿಂಗು ಅಂತ ಹಾರಿ ಬಿಡ್ತೀರಿ. ಮನ್ಯಾಗ ಕಾಲೇ ನಿಲ್ಲೋದಿಲ್ಲ. ನೀವು ಸಿಎಂ ಆದಾಗಿನಿಂದ ನಮ್ಮ ಪ್ರೈವೇಟ್ ಲೈಫೇ ಇಲ್ಲದಾಂಗಾಗ್ಯಾದ."

"ನೋಡು, ನಿನಗೆ ಎಷ್ಟ ಸಾರೆ ಹೇಳೀನಿ, ಈ ರಾಜಕೀಯ ಅಂದ್ರ ಹೆಂಗಸ್ರಿಗೆ ತಿಳ್ಯಾಂಗಿಲ್ಲ. ಗಾಳಿ ಬಿಟ್ಟಾಗ ತೂರಿಕೋಬೇಕು."

"ಹೆಂಗಸ್ರಿಗೆ ತಿಳ್ಯಾಂಗಿಲ್ಲಂತ ಮಾತ್ರ ಅನ್ಬ್ಯಾಡ್ರಿ. ನನಗೆ ಸಿಟ್ಟ ಬರ್ತದ. ಶರಣ ಸ್ವಾಮಾರಕ್ಕೊಮ್ಮಿ ಶಿವನ ಗುಡಿಗೆ ಹೋಗೋಹಾಂಗ ನೀವು ಮ್ಯಾಲಿಂದ ಮ್ಯಾಲ ಹೈಕಮಾನ್ ಅಂತ ಆ ದುರ್ಗಮ್ಮಗ ನೇವ್ದ್ಯ ತೊಗೊಂಡು ಹೋಗಾಂಗಿಲ್ಲೇನು? ಆ ದುರ್ಗಮ್ಮನ ಝಳಾ ಬಡ್ದು ಗಂಡಸರೆಲ್ಲ ಏನೇನೋ ಆಗ್ಯಾರಂತ ಮಂದಿ ಏನೇನೋ ಆಡ್ಕೋತಿರ್ತಾರ, ಗೊತ್ತೇನು! ನಾನು ನಿಮ್ಮ ಹೆಣ್ತಿ. ನಿಮ್ಮ ತಾಕತ ಏನಂತ ನಂಗೊತ್ತು. ಮಂದಿಗೇನು ಗೊತ್ತು. ಎಲು ಇಲ್ಲದ ನಾಲ್ಗಿ ಅಂತ ಬಾಯಿಗೆ ಬಂದದ್ದು ಆಡ್ಕೋತಾರ. ಆದರೆ ಒಂದು ಮಾತು, ನೀವು ಹೀಂಗ ಹೆಣ್ತಿ ಮಕ್ಕಳ ಚಿಂತಿ ಬಿಟ್ಟು ರಾಜಕೀಯ ಅಂತ ಪಿರಿಪಿರಿ ಒದ್ಯಾಡೋದು ನನಗೆ ಪಟಾಸಾಂಗಿಲ್ಲ ನೋಡ್ರಿ."

"ಅಲ್ಲೆ! ನಮ್ಮ ಧಂಧ್ಯಾನೇ ಹಾಂಗದ. ಇಲ್ಲಾಂದ್ರ ನೀ ಹೀಂಗ ಮಹಾರಾಣಿ ಹಾಂಗ ಇರ್ತಿದ್ದೀ ಏನು? ನೀ ಇಷ್ಟ ಐಷಾರಾಮದಾಗ ಇರ್ತೀ ಅಂತ ನಿಮ್ಮ ಅವ್ವಾಪ್ಪಗರೇ ಗೊತ್ತಿತ್ತೇನು?"

"ನೋಡ್ರಿ, ಅವ್ವಾಪ್ಪನ ಮಾತ ತೆಗಿಬ್ಯಾಡ್ರಿ. ಮುದುಕರಾಗಾಕ ಹತ್ತೀರಿ. ಬೆಳ್ದ ಮಕ್ಕಳ ಮದ್ವಿ ಚಿಂತಿ ಮಾಡಾದ ಬಿಟ್ಟು ಸತ್ತು ಸ್ವರ್ಗದಾಗಿರೋ ನಮ್ಮ ಅವ್ವಾಪ್ಪನ ಮಾತ ತೆಗೀಬ್ಯಾಡ್ರಿ."

"ಆಯ್ತು, ಈಗೇನಾಗ್ಬೇಕು ಹೇಳು. ಪಿಎಂ ಅವರಿಗೆ ರಿಸೀವ ಮಾಡಾಕ ನನಗ ಏರ್‌ಪೋರ್ಟಿಗೆ ಹೋಗ್ಬೇಕಾಗೆದ."

"ಏನಿಲ್ಲ, ಲಗೂನ ಕುಮಾರನ ಕಂಕಣ ಬಲ ಕೂಡಿ ಬರ್ಲಿ ಅಂತ ಸತ್ಯನಾರಾಯಣ ಪೂಜೆ ಮಾಡಿಸ್ಬೇಕಂತೀನಿ. ನೀವು ಸಿಎಂ ಆಗಿರೋದರೊಳಗೆ ದೇವರು ಕಣ್ಣು ಬಿಟ್ಟು ಅದೊಂದು ಅಪೇಕ್ಷಾ ತೀರತು ಅಂದ್ರ ನಾನು ನಿಮಗೆ ಮತ್ತೇನು ಕೇಳೋದಿಲ್ಲರಿ."

"ನೋಡು, ಸಿಎಂ ಅವ್ರು ಸತ್ಯನಾರಾಯಣ ಪೂಜೆ ಮಾಡ್ತಾರಂದ್ರ ಸುದ್ದಿ ನಾಕೂ ಕಡೆಗೆ ಟಾಂಟಾಂ ಆಗ್ತದ. ಮಂತ್ರಿ ಮಂಡಲದವರು, ಪಾರ್ಟಿ ಎಮ್ಮೆಲ್ಲೆಗಳು, ವರ್ಕರ್ಸು ಎಲ್ಲಾರೂ ಕುಟುಂಬ ಸಮೇತ ಪೂಜೆಗೆ ಬಂದು ವಕ್ರಸ್ತಾರ. ಬ್ಯಾಡ ಅನ್ನಿಕಿ ಬರಲ್ಲ."

"ಬಂದ್ರ ಬರ್ಲಿ ಬಿಡ್ರಿ. ಬಂದ್ರೇನು ಖಾಲಿ ಕೈಲೆ ಬರ್ತಾರ? ದೇವರ ಪೂಜೆಗೆ ಬರಾವ್ರಿಗೆ ಬ್ಯಾಡ ಅನಬಾರ್ದು."

"ನಿನಗೆ ಗೊತ್ತಾಗಲ್ಲ. ಈ ವಿರೋಧ ಪಕ್ಷದವರು ಏನ್ ಕಣ್ಣಕಟ್ಗೊಂಡು ಕುಂತಿರ್ತಾರಂತೀ ಏನು?"

ಸಿಎಮ್ಮಾವ್ರು ಖಡಾಖಂಡಿತವಾಗಿ ಹೇಳಿದರು, "ಅವರಿಗೂ ಕರೀರಿ. ಬಂದ್ರ ಬರ್ಲಿ. ಆದ್ರ ನಾನು ಮಾತ್ರ ನಿಮ್ಮ ಪಿಳ್ಳೆನೆವಾ ಕೇಳಾಲ್ಲ. ನಾನು ಸತ್ಯನಾರಾಯಣ ಪೂಜೆ ಮಾಡೇ ಮಾಡಬೇಕು. ನೀವು ಅನಬಾರ್ದು. ಅಷ್ಟೆ."

ಅಷ್ಟರಲ್ಲಿ ಸೆಕ್ರೆಟರಿ ರೂಮಿನಲ್ಲಿ ಪ್ರವೇಶಿಸಿದ. ಆತ ಅಮ್ಮಾವ್ರ ಕೊನೆ ಮಾತುಗಳನ್ನು ಕೇಳಿಸಿಕೊಂಡಿದ್ದ. ಗಂಡಹೆಂಡಿರ ನಡುವೆ ತಾನು ಹೋಗಬೇಕೋ ಬೇಡವೋ ಎಂದು ಅನುಮಾನಿಸಿದ. ಆದರೆ ಈಗ ರೂಮಿನಲ್ಲಿ ಕಾಲು ಇಟ್ಟಾಗಿದೆ. ಹಿಂದಕ್ಕೆ ತಿರುಗಿ ಹೋಗುವುದು ಸರಿಯಲ್ಲ ಎಂದು ತಿಳಿದು ಮುಂದೆ ಹೆಜ್ಜೆ ಹಾಕಿದ. ಅಮ್ಮಾವರ ಮಾತಿಗೆ ದನಿಗೂಡಿಸುತ್ತ ಸಮಾಧಾನದ ಮಾತಾಡಿದ.

"ತಮ್ಮ ಸಂಕಲ್ಪದಂತೆ ಖಂಡಿತವಾಗಿಯೂ ಪೂಜೆಗೆ ವ್ಯವಸ್ಥೆ ಮಾಡೋಣ ಅಮ್ಮಾವ್ರೆ. ಆ ಕೆಲಸ ನನಗೆ ಬಿಟ್ಟುಬಿಡಿ. ಸಾಹೇಬ್ರಿಗ್ಯಾಕ ತೊಂದರೆ ಕೊಡ್ತೀರಿ. ಜನ ಎಂದೂ ಮರೀಬಾರ್ದು, ಆ ರೀತಿ ಪೂಜೆಯ ವ್ಯವಸ್ಥೆ ಮಾಡಿಸ್ತೇನೆ. ನೀವು ಚಿಂತೆ ಮಾಡಬೇಡಿರಿ. ಈಗ ಸಾಹೇಬ್ರಿಗೆ ಹೊತ್ತಾಯಿತು. ಏರ್‌ಪೋರ್ಟಿಗೆ ಹೋಗಬೇಕು. ಅವರನ್ನು ಬಿಟ್ಟುಬಿಡಿ" ಎಂದು ವಿನಂತಿಸಿಕೊಂಡ.

*  *  *

ರಾಸೂರಿನ ಹೆದ್ದಾರಿಯ ಮೇಲೆ ಈ ಕಡೆ ಜಗನ್ನಾಥ ಮಹಾರಾಜರ ಮಠದಿಂದ ಹಿಡಿದು ಆ ಕಡೆಗೆ ಹಿಮ್ಮತನಗರದವರೆಗೆ ಪೆಂಡಾಲು ಹಾಕಿ ರಂಗುರಂಗಿನ ಜಾಲರಿ, ಬಣ್ಣಬಣ್ಣದ ಲೈಟು, ಮೈಕು, ಆಸನಗಳು ಎಲ್ಲ ಸಿದ್ಧವಾದವು. ಪಡುವಣದ ತುದಿಗೆ ಮೂಡಣಕ್ಕೆ ಮುಖಮಾಡಿ ದೊಡ್ಡ ವೇದಿಕೆ ತಯಾರಾಯಿತು. ದೊಡ್ಡ ವೇದಿಕೆಯ ಮೇಲೊಂದು ಚಿಕ್ಕ ಮಂಟಪ, ಸತ್ಯನಾರಾಯಣ ಸ್ವಾಮಿಯ ಪ್ರತಿಷ್ಠಾಪನೆಗಾಗಿ.

ರಾಸೂರಿನ ರಂಗಾಚಾರ್ಯರಿಗೇನೆ ಪೌರೋಹಿತ್ಯ ವಹಿಸಿಕೊಡಲಾಗಿತ್ತು. ಪೂಜೆ ಪುನಸ್ಕಾರಗಳಲ್ಲಿ ಅವರನ್ನು ಮೀರಿಸಿದ ಪರಿಣತರು ನಾಲ್ಕೂ ಊರುಗಳಲ್ಲಿ ಯಾರೂ ಇಲ್ಲ. ಅವರು ಸತ್ಯನಾರಾಯಣ ಕಥೆಯ ನಿರೂಪಣೆಯಲ್ಲಿ ಸ್ಪೆಷಲಿಷ್ಟು. ಮಾರವಾಡಿಯ ಪೇಟದ ಹಾಗೆ ಎಷ್ಟು ಬೇಕಾದರೂ ಬೆಳೆಸಿ ಸುದೀರ್ಘವಾಗಿ ನಾಲ್ಕೈದು ತಾಸು ಸತ್ಯನಾರಾಯಣ ಕಥಾ ನಿರೂಪಣೆ ಮಾಡಬಲ್ಲರು. ನೀವು ಬಹಳೇ ಅವಸರದಲ್ಲಿದ್ದರೆ 'ಮಜ್ಜಿಗೆ ರಾಮಾಯಣ'ದಂತೆ ನಾಲ್ಕಾರು ಕ್ಷಣಗಳಲ್ಲೇ ಮುಗಿಸಬಲ್ಲರು. ಯಜಮಾನರ ಘನತೆ ಗೌರವಗಳಿಗೆ ತಕ್ಕಂತೆ ಅವರ ಕಥಾನಿರೂಪಣೆ ಹಿಗ್ಗುತ್ತ ಕುಗ್ಗುತ್ತ ಹೋಗುತ್ತಿತ್ತು.

ಸಿಎಮ್ಮಾವ್ರು ಮಾಡಿಸುವ ಸತ್ಯನಾರಾಯಣ ಪೂಜೆಯೆಂದರೆ ಮಾಮೂಲಿಯೆ? ಬ್ರಹ್ಮಮುಹೂರ್ತದಲ್ಲೇ ಬಂದು ಮಂಟಪವನ್ನು ಸಿಂಗರಿಸಿ, ಮಂಟಪದಲ್ಲಿ ರಂಗೋಲಿ ಹಾಕಿ, ಕಳಶ ಸ್ಥಾಪನೆ ಮಾಡಿ ಅದರ ಹಿಂದೊಂದು ಸತ್ಯನಾರಾಯಣನ ಫೋಟೊ, ಮುಂದೊಂದು ಪಂಚಲೋಹದ



ಮೂರ್ತಿಯನ್ನು ಪ್ರತಿಷ್ಠಾಪಿಸಿದರು. ''ಶುಕ್ಲಾಂಬರಧರಂ ......'' ದಿಂದ ಪೂಜೆ ಪ್ರಾರಂಭವಾಯಿತು.

ಸಿಎಮ್ಮಾವ್ರ ಹೆಸರಿನಿಂದ ಸತ್ಯನಾರಾಯಣನ ಪೂಜೆಯ ಜವಾಬ್ದಾರಿಯನ್ನು (ಪವರ ಆಫ ಅಟಾರ್ನಿ) ರಂಗಾಚಾರ್ಯರೇ ಹೊತ್ತುಕೊಂಡ ಮೇಲೆ ಸಿಎಂರಿಗಾಗಲೀ, ಸಿಎಮ್ಮಾವ್ರಿಗಾಗಲೀ ಅಲ್ಲೇನು ಕೆಲಸ! 'ಎಲ್ಲವಂ ಸಮರ್ಪಯಾಮಿ' ಎಂದು ಸಿಎಂ ದಂಪತಿಗಳಿಂದ ಹೇಳಿಸಿಕೊಂಡು ಆಚಾರ್ಯರು ಕಥಾವಾಚನಕ್ಕೆ ಪ್ರಾರಂಭಿಸಿದರು. ದೂರದೂರದವರೆಗೆ ಮೈಕುಗಳು, ಟಿವಿ ಪರದೆಗಳು ಅಳವಡಿಸಿರುವುದರಿಂದ ಕುಳಿತವರು ಕುಳಿತಲ್ಲೇ, ನಿಂತವರು ನಿಂತಲ್ಲೇ, ಓಡಾಡುವರು ಓಡಾಡುತ್ತಲೇ ಕಥಾ ಶ್ರವಣ - ದರ್ಶನ ಮಾಡುತ್ತಿದ್ದರು.

ಸಿಎಂ ಹಾಗೂ ಸಿಎಮ್ಮಾವ್ರ ಬಂದ ಅತಿಥಿಗಳನ್ನು ಕೈಜೋಡಿಸಿ, ಕೈಕುಲುಕಿ, ನಗೆ ಬೀರಿ, ಬೆನ್ನು ಚಪ್ಪರಿಸಿ, ಆಲಂಗಿಸಿ ಅವರವರ ಸಂಬಂಧ, ಘನತೆಗಳಿಗೆ ತಕ್ಕಂತೆ ಗೌರವಿಸಿ ಸ್ವಾಗತಿಸುತ್ತಿದ್ದರು. ವಾರೂಪ್ಪತ್ತಿನಲ್ಲಿ ಮಂತ್ರಿಮಂಡಲ ವಿಸ್ತಾರವಾಗಲಿದೆ ಎಂಬ ಒಂದು ರಹಸ್ಯದ ಸುದ್ದಿಯನ್ನು ಸೆಕ್ರೆಟರಿಯು ರಹಸ್ಯವಾಗಿ ಪತ್ರಿಕೆಯವರಿಗೆ ತಿಳಿಸಿದ್ದ. ಪತ್ರಿಕೆಯವರೂ ಕೂಡ ಸುದ್ದಿಯನ್ನು ಬಯಲು ಮಾಡದೆ ತುಂಬ ರಹಸ್ಯವಾಗಿಯೇ ಸಾರ್ವಜನಿಕರ ಕಿವಿಗೆ ಮುಟ್ಟಿಸಿದ್ದರು. ಅದರ ಪರಿಣಾಮ ಸತ್ಯನಾರಾಯಣ ಪೂಜೆಯ ಮೇಲಾಯಿತು.

ಸ್ವಾಮಿಯ ಪೂಜೆಗೆ, ದರ್ಶನಕ್ಕೆ ಬರಿಗೈಯಲ್ಲಿ ಹೋಗಬಾರದು ಎಂದು ಶಾಸ್ತ್ರ ಹೇಳುತ್ತದೆ. ಎಲ್ಲ ದರ್ಶನಾರ್ಥಿಗಳ ಕೈಯಲ್ಲಿ ಕಾಣಿಕೆಯ ಒಂದೊಂದು ಪ್ಯಾಕು. ಕಾಣಿಕೆ ತಂದ ಭಕ್ತರ ಒಂದು ಯಾದಿಯನ್ನು ತಯಾರಿಸಲಾಗುತ್ತಿತ್ತು. ಯಾಕೆಂದರೆ ದೇವರಿಗೆ ಕಾಣಿಕೆ ಸಲ್ಲಿಸಿದವರದ್ದು ಏನೇನೋ ಸಂಕಲ್ಪಗಳಿರುತ್ತವೆಯಲ್ಲ. ಒಂದಿಷ್ಟಾದರೂ ಸಂಕಲ್ಪಗಳು ಪೂರ್ಣಗೊಳಿಸಬೇಕಲ್ಲವೆ. ಅವರು ಖಾಲಿ ಕೈಲಿ ಹೋಗಬಾರದಲ್ಲ. ಮಂತ್ರಿಮಂಡಲದ ನೊಗಕ್ಕೆ ಹೆಗಲು ಕೊಡಲು ಜೊಲ್ಲು ಸುರಿಸುತ್ತಿದ್ದವರ ಕಾಣಿಕೆಯ ಪ್ಯಾಕುಗಳು ನೋಡಲು ಕಿರಿದಾಗಿರುತ್ತಿದ್ದವು. ಯಾಕೆಂದರೆ ಈತ 'ಮಸ್ಕಾ' ಹಚ್ಚುತ್ತಿದ್ದಾನೆ ಎಂದು ನೋಡುವವರು ಆಡಿಕೊಳ್ಳಬಾರದಲ್ಲ. ಆದರೆ ಸಿಎಮ್ಮಾವ್ರಿಗೆ ಚಿಕ್ಕ ಪ್ಯಾಕಿನ ರಹಸ್ಯ ಗೊತ್ತು. ಪ್ಯಾಕು ಚಿಕ್ಕದಾದಷ್ಟೂ ಬೆಲೆ ಜಾಸ್ತಿ.

ಹೈಕಮಾನ್ ಎಂಬ ದೇವರ ಸುಪ್ರಿಮ ದರಬಾರಿನಿಂದ ಹಸಿರು ನಿಶಾನೆ ಬರುವುದಕ್ಕೆ ಮುಂಚೆ ಓಡುವ ಕತ್ತೆಯ ಮುಂದೆ ಹುಲ್ಲಿನ ಕಂತೆ ಹಿಡಿದಂತೆ ಸತ್ಯನಾರಾಯಣನ ಭಕ್ತರ ಕಾಣಿಕೆಗಳ ಆಧಾರದ ಮೇಲೆ ಅವರವರಿಗೆ ನೀಡಬಹುದಾದಂಥ ವರಗಳ ಯಾದಿ ತಯಾರಾಗಬೇಕಾಗಿತ್ತು.

ಈ ಕಡೆಗೆ ಈ ಚಟುವಟಿಕೆಗಳು ನಡೆಯುತ್ತಿರಬೇಕಾದರೆ ಆ ಕಡೆ ರಂಗಾಚಾರ್ಯರು ''ಇತಿ ಶ್ರೀ ದೇವಾಖಂಡೆ ... ಸತ್ಯನಾರಾಯಣ ಕಥಾಯಾಂ ಪರಿಸಮಾಪ್ತಿ'' ಎಂದು ಮಂಗಳ ಹಾಡಿದರು.

ಈ ಪೂಜೆಗೆ ಮಾಧ್ಯಮದವರೂ ಬಂದಿದ್ದರು. ಅವರನ್ನೆಲ್ಲ ತುಂಬ ಗೌರವದಿಂದ ನೋಡಿಕೊಳ್ಳಲಾಯಿತು. ಯಾರನ್ನು ನಂಬಿದರೂ ಮಾಧ್ಯಮದವರನ್ನು ನಂಬಬಾರದು ಎಂಬ ಮಾತು ಸೆಕ್ರೆಟರಿಗೆ ಚೆನ್ನಾಗಿ ಗೊತ್ತು. ಮಾಧ್ಯಮದವರನ್ನೆಲ್ಲ ತುಂಬ ಸತ್ಕರಿಸಿ ಅವರಿಗಾಗಿ ಏರ್ಪಡಿಸಿದ ವಿಶೇಷ ಭೋಜನಶಾಲೆಗೆ ಕರೆದುಕೊಂಡು ಹೋದರು. ಅವರವರಿಗೆ ತಕ್ಕಂತೆ ತೀರ್ಥ ಪ್ರಸಾದದ ಸಮಾರಾಧನೆ ಮಾಡಿಸಿ ಎಲ್ಲರಿಗೂ ಭದ್ರವಾಗಿ ಪ್ಯಾಕು ಮಾಡಿದ ಲಕೋಟೆಗಳೊಂದಿಗೆ ಫಲತಾಂಬೂಲ ನೀಡಿದರು. ಮಾಧ್ಯಮದವರು ಇಂಥ ಎಷ್ಟೋ ಪೂಸಿ ನೋಡಿದರು. ಇಷ್ಟಕ್ಕೆಲ್ಲ ಜಪ್ಪಯ್ಯ ಅನ್ನುತ್ತಾರೆಯೇ! ತಾವು ಮಾಡಬೇಕಾದ ವರದಿಯನ್ನು ಮಾಡೇಮಾಡುತ್ತಾರೆ. ಊಟ ತಿಂಡಿ ಮುಗಿಸಿಕೊಂಡು ಹೊರಗೆಬಂದು ಬಿಗಿ ಬಂದೋಬಸ್ತಿನಲ್ಲಿ ಇಟ್ಟಿದ್ದ ತಮ್ಮ ಆಡಿಯೋ, ವಿಡಿಯೋ, ಸ್ಥಿರ ಕ್ಯಾಮರಾ, ವರದಿ ಡೈರಿ ಇತ್ಯಾದಿಗಳನ್ನು ಹೆಗಲಿಗೆ ಏರಿಸಿಕೊಂಡು ಬಿಸಿಬಿಸಿ ಸುದ್ದಿ ವರದಿಮಾಡಲು ತಮ್ಮ ತಮ್ಮ ಕಚೇರಿಗಳಿಗೆ ಧಾವಿಸಿದರು.

ಸಿಎಂರ ಹೂರಣ ಹೊರಹಾಕಬೇಕೆಂದು ಹಿರಿಹಿರಿ ಹಿಗ್ಗಿನಿಂದ ವರದಿಗಾರರು ತಮ್ಮ ಕಚೇರಿಗಳಲ್ಲಿ ಕ್ಯಾಮರಾ ತೆರೆದು ನೋಡಿದರೆ, ವರದಿಯ ಡೈರಿಗಳನ್ನು ಬಿಚ್ಚಿನೋಡಿದರೆ ಅಲ್ಲೇನಿದೆ ? ಎಲ್ಲಾ ಮಂಗಮಾಯ. ಅವರು ಮಾಡಬೇಕೆಂದಿದ್ದ ವರದಿಯ ಒಂದಂಶವೂ ಸಾಕ್ಷ್ಯಾಧಾರವಿಲ್ಲದೆ ಕಣ್ಮರೆಯಾಗಿತ್ತು.

* * *

ಮರುದಿನ ಸತ್ಯನಾರಾಯಣ ಪೂಜೆ ನಡೆದ ಪಂಡಾಲಿನ ಸ್ವರೂಪವೇ ಬದಲಾಗಿತ್ತು. ಆ ಇಡೀ ಪ್ರದೇಶದಲ್ಲಿ ನಾಲ್ಕೈದು ವೇದಿಕೆಗಳು ನಿರ್ಮಾಣವಾಗಿದ್ದವು. ಪ್ರತಿಯೊಂದು ವೇದಿಕೆಯು ಸುತ್ತಮುತ್ತ ಆ ವೇದಿಕೆಗೆ ಸಂಬಂಧಿಸಿದ ಬ್ಯಾನರ್‌ಗಳು, ಘೋಷಣಾಪತ್ರಗಳು, ಪ್ರಚಾರ ಸಾಮಗ್ರಿಗಳು. ಸಾರ್ವಜನಿಕರ ಸೇವೆಗಾಗಿ ಟ್ರಿಮ್ಮಾಗಿ ಓಡಾಡಿಕೊಂಡಿದ್ದ ಅಧಿಕಾರಿಗಳು, ಅವರ ಸಿಬ್ಬಂದಿ ವರ್ಗ.

**ವೇದಿಕೆ - ೧**

''ರಾಸೂರು ನಾಡು ಸಾಕ್ಷರ ನಾಡು''
''ಕಲಿತ ಹೆಣ್ಣು, ಕುಟುಂಬದ ಕಣ್ಣು.''
''ಅನ್ನ ನೀರು ಜೀವಕ್ಕೆ ಆಧಾರ, ಓದುಬರಹ ಜೀವನಕ್ಕೆ ಆಧಾರ''

ಈ ರೀತಿಯ ಘೋಷಣ ಫಲಕಗಳಿಂದ ವೇದಿಕೆಯು ಅಲಂಕಾರಗೊಂಡಿದೆ. ರಾಸೂರಿನ ಸರಕಾರಿ ಶಾಲೆಯ ಮಕ್ಕಳಿಗೆ ಬುಡಕಟ್ಟು ಜನಾಂಗದ ಮಕ್ಕಳಂತೆ ವೇಷ ಹಾಕಿ ಸಾಕ್ಷರತಾ ಪ್ರಸಾರದ ಪ್ರಾತ್ಯಕ್ಷಿಕೆಗಾಗಿ ತಂದು ಕೂಡಿಸಲಾಗಿದೆ. ಇಂಥ ಲಕ್ಷಾಂತರ ಮಕ್ಕಳನ್ನು ಸಾಕ್ಷರಗೊಳಿಸುವ ಗುರಿ ಹೊಂದಲಾಗಿದೆ ಎಂದು ಮಾಧ್ಯಮದವರಿಗೆ ತಿಳಿಸಿ ಹೇಳಲಾಗುತ್ತಿದೆ.

**ವೇದಿಕೆ - ೨**

ರೈತನೇ ರಾಸೂರಿನ ಬೆನ್ನೆಲುಬು
ಕೋಟಿ ವಿದ್ಯೆಗಳಲ್ಲಿ ಮೇಟಿವಿದ್ಯೆಯೇ ಮೇಲು
ಅನ್ನದಾತ ಭಾಗ್ಯವಿಧಾತಾ

ರಾಸೂರಿನ ಹೆದ್ದಾರಿಯ ಮೇಲೆ ಮಟ್ಕಾ ಆಡುತ್ತ ಕಾಲಹರಣ ಮಾಡುತ್ತಿದ್ದ ಜನರನ್ನು ರೈತರನ್ನಾಗಿ ಮಾಡಿ 'ರೈತ ಕೂಟ'ಕ್ಕೆ ಕರೆತರಲಾಗಿದೆ. ತರಾತುರಿಯಲ್ಲಿ ಕಾರ್ಯಕ್ರಮ ಏರ್ಪಟ್ಟಿದ್ದರಿಂದ ರಾಷ್ಟ್ರೀಯ ಉಗ್ರಾಣದಿಂದ ಸಾಚಾ ಬೀಜಗಳನ್ನು ತರಿಸಿಕೊಳ್ಳುವುದು ಸಾಧ್ಯವಾಗಿರಲಿಲ್ಲ. ಹೀಗಾಗಿ ಭೂಸಾ ತುಂಬಿದ ಸೀಲು ಮಾಡಿದ ಪಾಕೇಟುಗಳನ್ನು ಮಾದರಿ ಬೀಜಗಳೆಂದು ಹಂಚುತ್ತಿರುವ ಸಚಿತ್ರ ವರದಿಗಳನ್ನು ವರದಿಗಾರರಿಗೆ ನೀಡಲಾಗುತ್ತಿತ್ತು.

**ವೇದಿಕೆ - ೩**

ನಮ್ಮ ನಾಡು ಮುನ್ನಡೆದ ನಾಡು
ರಾಸೂರಿನ ಸಂಚರಣ ಕೈಗಾರಿಕಾಕರಣ

ಕೈಗಾರಿಕೆಗಳ ಹೊರತು ದೇಶದ ಅಭಿವೃದ್ಧಿ ಸಾಧ್ಯವಿಲ್ಲ. ಕೈಗಾರಿಕೆಗಳ ವಿಕಾಸಕ್ಕಾಗಿ ಸಾಲ ಯೋಜನೆ, ಬರಗಾಲ ಪೀಡಿತರಿಗೆ ಪರಿಹಾರ ಯೋಜನೆ ...

**ವೇದಿಕೆ - ೪**

**ಭಾಷಣ :** ''ಮದುವೆ ಮುಂಜಿ ಅಂತ ನಮ್ಮ ಜನ ಮಿತಿಮೀರಿ ಹಣ ಪೋಲುಮಾಡಿ ಪಾಪರ ಆಗ್ತಾ ಇದ್ದಾರೆ. ಇದು ತಪ್ಪಬೇಕು. ಅದಕ್ಕಾಗಿ ನಾವು ಈ ಸಾಮೂಹಿಕ ವಿವಾಹಗಳನ್ನು ಏರ್ಪಡಿಸಿದ್ದೇವೆ. ಇಲ್ಲಿ ಅರವತ್ತು ವರ್ಷ ಮೀರಿದ ವಧುವರರೂ ಇದ್ದಾರೆ. ಪಾಪ ಮದುವೆ ಮಾಡಿಕೊಳ್ಳಲು ಕೈಯಲ್ಲಿ ಕಾಸಿಲ್ಲದೆ ಇಷ್ಟು ಜೀವನ ಸವೆಸ್ಯಾರ. ಅವರಿಗೆ ಈಗ ಮದುವೆಯಾಗಿ ಬಾಜಾಪ್ತಾ ಗಂಡಹೆಂಡತಿ ಅಂತ ಹೇಳಿಕೊಳ್ಳಿಕ್ಕೆ ಸಾಧ್ಯ ಆಗ್ಯಾದ...''

**ವರದಿಗಾರ :** ಏನಜ್ಜ ಅರವತ್ತವರ್ಷಾದ್ರೂ ಇನ್ನೂ ಯಾಕ ಮದುವೆಯಾಗಿಲ್ಲ ?

**ಮುದುಕ :** ಯಾರ ಹೇಳ್ತಾರ ಮದುವೆಯಾಗಿಲ್ಲಂತ ?

**ವರದಿಗಾರ :** ಮತ್ತ ಈ ಸಾಮೂಹಿಕ ಮದವಿಯೊಳಗೆ ನೀವು ...

**ಮುದುಕ :** ಮದುವ್ಯಾಗೋ ಜೋಡಿಗಳು ಕಮ್ಮಿ ಬಿದ್ದಾವಂತ ನಮ್ಮೂರಿಂದ ಐವತ್ತು ಮಂದಿ ಮದಿವ್ಯಾದವರ್ನ ಕರ್ಕೊಂಡು ಬಂದ್ರು. ಒಂದ ಜೋಡಿ ಸೀರಿ ಕುಬ್ಸ, ಧೋತ್ರ ಅಂಗಿ ಅರಬಿ ಸಿಗ್ತಾವಂತ ಬಂದ್ವಿ.

**ವೇದಿಕೆ - ೫**

ಟಿ.ಬಿ. ಹೋಯ್ತು ಕ್ಯಾನ್ಸರ ಬಂತು,
ಕ್ಯಾನ್ಸರ ಆಯ್ತು ಏಡ್ಸ ಬಂತು,
ಏಡ್ಸ ಜೊತೆಗೆ ಸಾವು ತಂತು
''ಏಡ್ಸ ಬಗ್ಗೆ ಎಚ್ಚರವಿರಲಿ, ಏಡ್ಸಿನ ಜ್ಞಾನವೇ ಏಡ್ಸಿನಿಂದ ಪಾರಾಗುವ ಮಾರ್ಗ''

ರಾಸೂರಿನ ರಾಚಣ್ಣ ಗೊಣಗಾಡುತ್ತಿದ್ದ. ''ನಮಗ್ಯಾಕ ಏಡ್ಸ ಬ್ಯಾಡ ? ಸಾಲೀಗೆ ಏಡ್ಸ ಕೊಡ್ತಾರ, ಹೆಂಗಸ್ರ ಸಮಾಜಕ್ಕೆ ಏಡ್ಸ ಕೊಡ್ತಾರ, ಭಜನಾ ಮಂಡಳಿಗೆ ಏಡ್ಸ ಕೊಡ್ತಾರ, ನಮಗ್ಯಾಗ ಏಡ್ಸ ಬ್ಯಾಡ ?

* * *

ಈ ಎಲ್ಲಾ ಕಾರ್ಯಕ್ರಮಗಳ ವರದಿಗಳು ಮಾಧ್ಯಮದವರಲ್ಲಿ ನಾಶವಾಗಲಿಲ್ಲ. ಚಿತ್ರಗಳೊಂದಿಗೆ ಅಗ್ರವಾರ್ತೆಗಳಾಗಿ ಪ್ರಕಟಗೊಂಡವು.

**ಪ್ರೊ|| ಭಾಲಚಂದ್ರ ಜಯಶೆಟ್ಟಿ**
'ನಮ್ಮ ಮನೆ', ಜಯನಗರ, ಸೇಡಂ ರಸ್ತೆ, ಗುಲಬರ್ಗಾ - ೫೮೫ ೧೦೫

# ಬೌದ್ಧ ಧರ್ಮ ಹಾಗೂ ಅದರ ಪ್ರಸ್ತುತತೆ

ಡಾ|| ಮೂಡ್ನಾಕೂಡು ಚಿನ್ನಸ್ವಾಮಿ



ಬುದ್ಧ ಅರಿವಿನ ಸಂಕೇತ. ಜಗತ್ತಿನಾದ್ಯಂತ ಚಿಂತಕರು, ತತ್ವಜ್ಞಾನಿಗಳು ವಿಜ್ಞಾನಿಗಳಾದಿಯಾಗಿ ಧರ್ಮವನ್ನು ಹೊರತುಪಡಿಸಿಯೂ ಜ್ಞಾನದ ಸಂಕೇತವಾಗಿ, ಶಾಂತಿಯ ಸಂಕೇತವಾಗಿ, ಅಹಿಂಸೆಯ ಸಂಕೇತವಾಗಿ ಬುದ್ಧನನ್ನು ಒಪ್ಪಿಕೊಳ್ಳುತ್ತಾರೆ, ಗೌರವಿಸುತ್ತಾರೆ. ಜಗತ್ತಿನಲ್ಲಿ ಯಾರಾದರೂ ಒಬ್ಬ ಶ್ರೇಷ್ಠ ಮಾರ್ಗದರ್ಶಕನ ಹೆಸರು ಹೇಳುವುದಾದರೆ ಅದು 'ಬುದ್ಧ' ಎಂಬುದೇ ಆಗಿರುತ್ತದೆ. ಬುದ್ಧಿ ಮನಸ್ಸಿನ ಮಾರ್ಗದರ್ಶಕ. ಮನಸ್ಸನ್ನು ಪಡೆದ ಈ ವಿಶೇಷ ಪ್ರಾಣಿ ಮನುಷ್ಯ ಬುದ್ಧಿಯನ್ನು ಆಶ್ರಯಿಸಿದರೇನೇ ಒಳ್ಳೆಯ ಮಾರ್ಗದಲ್ಲಿ ನಡೆಯಲು ಸಾಧ್ಯ.

ಮನುಷ್ಯ ನಿಸರ್ಗದ ಕೂಸು. ಹಾಗಾಗಿಯೆ ಹುಟ್ಟಿನಿಂದ ಸಾವಿನವರೆವಿಗೆ ನಿಸರ್ಗದ ನಿಯಮಕ್ಕೊಳಪಡುತ್ತಾನೆ. ಆದ್ದರಿಂದ ಬುದ್ಧ ನಿಸರ್ಗದ ನಿಯಮಗಳನ್ನು ಮೊದಲು ಸರಿಯಾಗಿ ಅರ್ಥೈಸುತ್ತಾನೆ ಮತ್ತು ಅರ್ಥಮಾಡಿಸುತ್ತಾನೆ. ಬೌದ್ಧ ಧರ್ಮ ನಿಸರ್ಗ ದೊಡನೆ ಸರಾಗವಾಗಿ ಸಾಗುತ್ತದೆ. ಹಠದಿಂದ ಯಾವ ನಿಯಮವನ್ನೂ ಎದುರುಹಾಕಿ ಕೊಳ್ಳುವುದಿಲ್ಲ. ಸುಳ್ಳು ತತ್ವಗಳನ್ನು ಹೇಳಿ ನಂಬಿಸುವುದಿಲ್ಲ. ಬೌದ್ಧ ತತ್ವಗಳೆಲ್ಲವೂ ಪರೀಕ್ಷೆಗೆ ಒಳಪಡಿಸಬಹುದಾದ ತತ್ವಗಳೇ. ಪ್ರಶ್ನಿಸಬಹುದಾದ ತತ್ವಗಳೇ. ಯಜ್ಞದ ಅನರ್ಥಕಾರಿ ಫಲಗಳನ್ನು ಕುರಿತು ಒಮ್ಮೆ ಬುದ್ಧ ತನ್ನನ್ನು ಪ್ರಶ್ನಿಸುತ್ತಿದ್ದ ಬ್ರಾಹ್ಮಣರಿಗೆ ಹೀಗೆ ಹೇಳುತ್ತಾನೆ: ''ಲೋಕದ ಸಚರಾಚರ ವಸ್ತುಗಳನ್ನು ಸೃಷ್ಟಿಸಿದವನೂ ಬ್ರಹ್ಮ ಎಂದು ಹೇಳುತ್ತೀರಿ. ಹಾಗಾದರೆ ಅಗ್ನಿಯನ್ನು ಸೃಷ್ಟಿಸಿದವನೂ ಅವನೇ. ಮತ್ತೆ ಅಗ್ನಿಯನ್ನೇಕೆ ಪೂಜಿಸಬೇಕು. ದಹಿಸುವುದು ಅಗ್ನಿಯ ನಿಸರ್ಗ ನಿಯಮ. ನೀವು ಏನನ್ನೇ ಹಾಕಿದರೂ ಅಗ್ನಿ ದಹಿಸಬಲ್ಲದು. ಆದರಿಂದ ಫಲಗಳನ್ನು ನಿರೀಕ್ಷಿಸುವುದು ಮೂರ್ಖತನ''.

ಇಂಥ ಸಾಮಾನ್ಯ ಜ್ಞಾನವನ್ನು ಉಣಬಡಿಸುವ ಬುದ್ಧನ ಹೇಳಿಕೆಗಳ ಮೊತ್ತವೇ ಬೌದ್ಧ ಧರ್ಮವಾಗಿದೆ. ಯಾವ ಕಠಿಣ ವ್ರತವನ್ನೂ ಪಾಲಿಸದೆ, ಯಾವುದೇ ತೆರನಾದ ಆಚರಣೆಗಳನ್ನೂ ಮಾಡದೆ ತನಗೂ ಇತರರಿಗೂ ಹಿತವಾಗುವಂತೆ ನಡೆದು ಕೊಳ್ಳುವುದನ್ನೇ ಬೌದ್ಧ ಧರ್ಮ ಹೇಳುತ್ತದೆ.

ಇದನ್ನು ಇನ್ನಷ್ಟು ಸ್ಪಷ್ಟಪಡಿಸಲು ಸುಂಗುಟ್ಠ ಜಾತಕದ ಈ ಕಥೆಯ ಸಾರಂಶವನ್ನು ನೋಡಬಹುದು.

ವಾರಾಣಸಿಯಲ್ಲಿ ಬ್ರಹ್ಮದತ್ತನು ರಾಜ್ಯವಾಳುತ್ತಿದ್ದಾಗ ಬೋಧಿಸತ್ತ್ವನು ಔದೀಚ್ಯ ಎಂಬ ಬ್ರಾಹ್ಮಣ ಕುಲದಲ್ಲಿ ಜನಿಸಿ ಬಂದನು. ಅವನು ಜನಿಸಿದ ದಿನವೇ ಅವನ ತಂದೆತಾಯಿಗಳು ಜಾತಾಗ್ನಿಯನ್ನಿಟ್ಟರು. ಅವನು ಹದಿನಾರು ವರ್ಷದವನಾದ ಮೇಲೆ ತಂದೆತಾಯಿಗಳು ಬೋಧಿಸತ್ವನಿಗೆ ಹೀಗೆ ಹೇಳಿದರು: ''ತಮ್ಮ, ನೀನು ಜನಿಸಿದ ದಿನವೇ ಈ ಅಗ್ನಿ ಸ್ಥಾಪಿತವಾಗಿದೆ. ನೀನು ಗೃಹಸ್ಥನಾಗಿ ಇರುವುದಿದ್ದರೆ ಮೂರು ವೇದಗಳ ಅಧ್ಯಯನ ಮಾಡು; ಒಂದು ವೇಳೆ ನಿನಗೆ ಬ್ರಹ್ಮಲೋಕ ಪರಾಯಣನಾಗುವ ಇಚ್ಛೆ ಇದ್ದರೆ ಈ ಅಗ್ನಿಯನ್ನು ಅರಣ್ಯಕ್ಕೆ ಕೊಂಡೊಯ್ದು ಅದರ ಸೇವೆಯಿಂದ ಬ್ರಹ್ಮದೇವನನ್ನು ಆರಾಧಿಸಿ ಬ್ರಹ್ಮಲೋಕಪರಾಯಣನಾಗು''.

ಬೋಧಿಸತ್ತ್ವನಿಗೆ ಗೃಹಸ್ಥಾಶ್ರಮ ಬೇಡಾಗಿತ್ತು. ತನ್ನ ಜಾತಾಗ್ನಿಯನ್ನು ತೆಗೆದುಕೊಂಡು ಅವನು ಅರಣ್ಯಕ್ಕೆ ಹೋದನು. ಅಲ್ಲಿ ಆಶ್ರಮವನ್ನು ಕಟ್ಟಿ ಅಗ್ನಿಯ ಸೇವೆಯನ್ನು ಮಾಡುತ್ತ ನಿಂತನು. ಒಂದು ದಿನ ರೈತನೊಬ್ಬನು ದಕ್ಷಿಣೆಸಹಿತವಾಗಿ ಒಂದು ಹೋರಿಯನ್ನು ಬೋಧಿ ಸತ್ತ್ವನಿಗೆ ಕೊಟ್ಟನು. ಅದನ್ನು ಬಲಿಕೊಟ್ಟು ಅಗ್ನಿಭಗವಂತನ ಪೂಜೆಮಾಡಬೇಕೆಂದು ಬೋಧಿಸತ್ತ್ವನ ವಿಚಾರವಿದ್ದಿತು. ಆದರೆ ಆಶ್ರಮದಲ್ಲಿ ಉಪ್ಪು ತೀರಿತ್ತು. ಅದನ್ನು ತರುವುದಕ್ಕೆಂದು ಅವನು ಗ್ರಾಮಕ್ಕೆ ಹೋದನು. ಇತ್ತ ಕೆಲವು ಕಿಡಿಗೇಡಿ ಹುಂಬರು ಆ ಹೋರಿಯನ್ನು ಕೊಂದು ತಮಗೆ ಬೇಕಿದ್ದಷ್ಟು ಮಾಂಸವನ್ನು ಅಗ್ನಿಹೋತ್ರದ ಮೇಲೆ ಬೇಯಿಸಿ ತಿಂದು ಉಳಿದದ್ದನ್ನು ತಮ್ಮ ಜೊತೆಗೆ ಒಯ್ದರು.

ಉಪ್ಪನ್ನು ತೆಗೆದುಕೊಂದು ಆಶ್ರಮಕ್ಕೆ ಮರಳಿದ ಬ್ರಾಹ್ಮಣ ನೋಡುತ್ತಾನೆ, ಹೋರಿಯ ತೊಗಲು, ಬಾಲ ಮತ್ತು ಎಲುಬು ಇಷ್ಟೇ ಶಿಲ್ಲಕ ಉಳಿದಿವೆ. ''ಈ ಅಗ್ನಿಭಗವಂತನು ತನ್ನ ಬಲಿಯ ರಕ್ಷಣೆಯನ್ನೆ ಮಾಡಲು ಸಮರ್ಥನಿಲ್ಲ, ಇನ್ನು ನನ್ನನ್ನು ರಕ್ಷಿಸುವನು ಹೇಗೆ ?'' ಎಂದು ತನ್ನಷ್ಟಕ್ಕೇ ಅಂದುಕೊಂಡು ಅಗ್ನಿಹೋತ್ರವನ್ನು ನೀರೊಳಗೆ ಬಿಸಾಡಿ ಋಷಿಪ್ರವ್ರಜ್ಯೆ ಯನ್ನು ಸ್ವೀಕರಿಸಿದನು. (ಧರ್ಮಾನಂದ ಕೋಸಾಂಬಿ, ಭಗವಾನ್ ಬುದ್ಧ - ಪು. ೮೩).

ಬೌದ್ಧ ಧರ್ಮವನ್ನು ಒಂದು ರಥದ ರೂಪಕದ ಮೂಲಕ ಹೇಳಲು ಇಚ್ಛೆಪಡುತ್ತೇನೆ. ಈ ಲೋಕದಲ್ಲಿ ಜನಿಸಿದಮೇಲೆ ಜೀವಿಗಳಿಗೆ ಕ್ರಮಿಸುವ ಮಾರ್ಗವೊಂದು ಇರಲೇಬೇಕಲ್ಲ, ಅದು ಕತ್ತಲೆಯಿಂದ ಕೂಡಿದೆ. ಅದೇ ದುಃಖ. ಆ ಮಾರ್ಗವನ್ನು ಕ್ರಮಿಸಲು ಅರಿವಿನ ಬೆಳಕು ಬೇಕು. ಪ್ರಜ್ಞೆ, ಶೀಲ, ಕರುಣೆ ಎಂಬ ಪ್ರಣತೆ, ಎಣ್ಣೆ, ಬತ್ತಿಗಳಿದ್ದರೆ ಅರಿವೆಂಬ ಬೆಳಕು ಹೊತ್ತಿಕೊಳ್ಳುತ್ತದೆ. ಅನತ್ತ (ಆತ್ಮವಿಲ್ಲದಿರುವಿಕೆ) ಮತ್ತು ಅನಿಚ್ಚ (ಅಶಾಶ್ವತತೆ) ಆ ರಥದ ಎರಡು ಗಾಲಿಗಳು. ನಾಲ್ಕು ಆರ್ಯ ಸತ್ಯಗಳೇ ಕುದುರೆಗಳು. ಪಂಚಶೀಲಗಳೆಂಬ ಅಭಯಾಸನದ ಮೇಲೆ ಕುಳಿತಿರುವ ಸಾರಥಿ; ಆರನೆಯ ಇಂದ್ರಿಯವೆಂದು ಕರೆಸಿಕೊಳ್ಳುವ ಮನಸ್ಸು. ರಥಿಕನಾದರೋ ಈ ಇಹಲೋಕದಲ್ಲಿ ಮೂರ್ತೀಭವಿಸಿದ ರಕ್ತಮಾಂಸದ ಮನುಷ್ಯ.

ಇಷ್ಟನ್ನು ತಿಳಿದಿಕೊಳ್ಳುವುದಾದರೆ ಬೌದ್ಧ ಧರ್ಮದ ಒಂದು ಸ್ಥೂಲ ರೂಪ ಸಿಕ್ಕುತ್ತದೆ. ಇಲ್ಲಿ ಅಲೌಕಿಕತೆ ಲವಲೇಶವೂ ಇಲ್ಲ. ಬುದ್ಧನೆಂಬ ಅರಿವು ಪಡೆದ ವ್ಯಕ್ತಿಯೊಬ್ಬ ಮನುಷ್ಯನ ಒಳಿತನ್ನು ಕುರಿತು ವೈಜ್ಞಾನಿಕವಾಗಿ ಚಿಂತನೆ ನಡೆಸಿ ಮಂಡಿಸಿದ ಮಹಾಪಾಠ ಇದು. ಇದನ್ನು ಪರೀಕ್ಷಿಸಬಹುದು, ವಿಮರ್ಶಿಸಬಹುದು, ತರ್ಕಿಸಬಹುದು. ಬುದ್ಧ ಬದುಕಿರುವಾಗಲೇ ಇವೆಲ್ಲವೂ ನಡೆದಿದ್ದವು. ಅವನು ಗೆದ್ದದ್ದರಿಂದ ಇದು ಧರ್ಮವಾಗಿ ಉಳಿಯಿತು. ಇಷ್ಟೊಂದು ಸತ್ವಯುತವಾದ ಧರ್ಮ ಹುಟ್ಟಿದ ನಾಡಿನಲ್ಲಿ ಏಕೆ ಉಳಿಯಲಿಲ್ಲ ಎಂದು ಅನೇಕರು ಪ್ರಶ್ನೆ ಹಾಕುತ್ತಾರೆ. ಅದನ್ನು ಹಿಂಸೆಯ ಮೂಲಕ ಹೊರದೂಡ ಲಾಯಿತು ಎಂದಷ್ಟೇ ಚಿಕ್ಕದಾಗಿ ಕೊಡಬಹುದಾದ ಉತ್ತರ. ಭಾರತಕ್ಕೆ ಮುಸಲ್ಮಾನರ ಆಗಮನ ನಂತರ ಬೌದ್ಧಧರ್ಮ ಅಳಿಯಿತು ಎಂದು ಬಾಬಾಸಾಹೇಬ್ ಅಂಬೇಡ್ಕರ್ ಅವರು ಅಭಿಪ್ರಾಯಪಡುತ್ತಾರೆ. ಮುಸಲ್ಮಾನರು ನಡೆಸಿದ ಮೂರ್ತಿಭಂಜನೆಯ ಕಾರ್ಯಾಚರಣೆಯಲ್ಲಿ ಬುದ್ಧನ ಪಳೆಯುಳಿಕೆಯೂ ನಾಶವಾಗಿರಬೇಕು. ಆದರೆ ಅದರ ಉಚ್ಚಾಟನೆ ೮ನೆಯ ಶತಮಾನದಲ್ಲೇ ಪ್ರಾರಂಭವಾಯಿತು ಎಂದು ಧರ್ಮಾನಂದ

ಕೋಸಾಂಬಿಯವರು ಅನೇಕ ಪುರಾವೆಗಳನ್ನು ಒದಗಿಸುತ್ತಾರೆ. ಬೌದ್ಧ ಸಾಹಿತ್ಯದ ನಾಶಕ್ರಿಯೆ ಪ್ರಾರಂಭವಾದದ್ದು ಆಗಲೇ. ತಕ್ಷಶಿಲಾ ಮತ್ತು ನಳಂದ ವಿಶ್ವವಿದ್ಯಾಲಯಗಳ ನಾಶ, ಶೂದ್ರರಿಗೆ ವಿದ್ಯೆ ಸಲ್ಲದೆಂದು ಶಾಸ್ತ್ರನಿಷೇಧ ಹೇರಿದ ಮಿದುಳು ಚಿವುಟುವ ವೈದಿಕ ಮನಸ್ಸಿನ ಹುನ್ನಾರವೇ ಆಗಿದೆ. ಚೀಣಾ, ಜಪಾನ್ ಮತ್ತು ದಕ್ಷಿಣ ಏಷ್ಯಾ ದೇಶಗಳಲ್ಲಿ ಬೌದ್ಧಧರ್ಮ ವ್ಯಾಪಿಸಿರುವುದು ಅದಕ್ಕೆ ಮತ್ತೊಂದು ಪುರಾವೆ ಒದಗಿಸುತ್ತದೆ.

**ಬೌದ್ಧ ಧರ್ಮ ನಾಸ್ತಿಕ ಧರ್ಮವಲ್ಲ**

ಮನುಷ್ಯ ತನ್ನ ಮೂಲವನ್ನು, ತಾನಿರುವ ಈ ಜಗತ್ತಿನ ಮೂಲವನ್ನು ಕಂಡುಕೊಳ್ಳಲು ಸಾಧ್ಯವಾಗದೇ ಇರುವುದರಿಂದ, ಇವೆಲ್ಲವನ್ನೂ ನಿಯಂತ್ರಿಸುವ ಒಂದು ಅಗೋಚರ ಶಕ್ತಿ ಇದೆ ಎಂದು ನಂಬಿದ್ದಾನೆ. ಹಾಗಾಗಿ ಬೇರೆ ಬೇರೆ ನಂಬಿಕೆಯುಳ್ಳ ಧರ್ಮಗಳು ಆ ಅಗೋಚರ ಶಕ್ತಿಯನ್ನು ಬೇರೆ ಬೇರೆ ಬಗೆಯಾಗಿ ಅರ್ಥೈಸಿಕೊಂಡಿವೆ. ಹಾಗೆ ನಡೆದುಕೊಳ್ಳುತ್ತಿವೆ. ಆದರೆ ವೈದಿಕ ಧರ್ಮ ಆ ನಂಬಿಕೆಯನ್ನು ಮನುಷ್ಯರೂಪೀ ಬ್ರಹ್ಮನ ಮುಖಾಂತರ ಕಲ್ಪಿಸಿ ಸುಳ್ಳುಗಳ ಸರಮಾಲೆಯನ್ನೆ ಸೃಷ್ಟಿಸಿದೆ. ಅದು ಮೇಲ್ನೋಟಕ್ಕೆ ಒಂದು ವರ್ಗದ ಶ್ರಮರಹಿತ ಉಂಬಳಿಗಾಗಿ ಹೆಣೆದ ಕಥೆಯಂತಿದೆ. ಅದು ಅನೈತಿಕತೆಯ ಉತ್ತುಂಗವನ್ನು ಮುಟ್ಟಿದೆ. ಸೇವೆಗಾಗಿಯೆ ಹುಟ್ಟಿರುವ ಬಹುಸಂಖ್ಯಾತ ಶೂದ್ರ ಸಮುದಾಯ ಸದಾ ದೇವರೆಂಬ ಭಯದ ನೆರಳಲ್ಲಿ ಬದುಕು ಸವೆಸುತ್ತಾ ಭಯ ನಿರ್ಮೂಲನ ವ್ರತಗಳಾದ ಮೌಢ್ಯಾಚರಣೆಗಳನ್ನೇ ಭಕ್ತಿಯೆಂದು ನಂಬಿ ತಮ್ಮ ತನು ಮನ ಧನಗಳನ್ನು ವಿನಿಯೋಗಿಸುತ್ತಾ ವ್ಯರ್ಥ ಬದುಕನ್ನು ಸಾಗಿಸುತ್ತಾ ಬಂದಿದೆ. ಇಂಥ ಧಾರ್ಮಿಕ ನೀತಿಯಿಂದ ದೇಶದ ಆರ್ಥಿಕತೆ, ಸಾಮಾಜಿಕತೆ ಕುಗ್ಗಿ ಜಾಗತಿಕ ಮಟ್ಟದಲ್ಲಿ ತಲೆತಗ್ಗಿಸುವಂತಾಗಿರುವುದು ಅದಕ್ಕೆ ಸಾಕ್ಷೀಭೂತವಾಗಿದೆ.

ಭೌದ್ಧ ಧರ್ಮವನ್ನು ನಾಸ್ತಿಕವಾದವೆಂದು ಕರೆಯುವ ರೂಢಿಯಿದೆ. ಆದರೆ ಅದು ಪೂರ್ಣ ಸತ್ಯವಲ್ಲ. ಬುದ್ಧ ಯಾವುದನ್ನೂ ಪುರಾವೆಯಿಲ್ಲದೆ ನಂಬುವವನಲ್ಲವಾದ್ದರಿಂದ ಆತ್ಮವನ್ನು ನಿರಾಕರಿಸಿದ. ಅದು ಜೈವಿಕವಲ್ಲ, ಆದ್ದರಿಂದ ತಾಯಿಯ ಗರ್ಭದಿಂದ ಬರುವುದಿಲ್ಲ, ಹೊರಗಿನಿಂದಲೂ ಬರುವುದಿಲ್ಲ ಎಂದು ಹೇಳಿದ. ಆದರೆ ದೇವರು ಇಲ್ಲ ಎಂದೂ ಹೇಳಿಲ್ಲ. ಅಂಥ ಪ್ರಶ್ನೆಗಳಿಗೆ ಬುದ್ಧನ ಮರು ಪ್ರಶ್ನೆ ಏನಾಗಿತ್ತೆಂದರೆ ಯಾರಾದರೂ ಗಂಗಾ ನದಿಯ ತಟದಲ್ಲಿರುವ ಮರಳು ಕಣಗಳನ್ನು ಎಣಿಸಬಲ್ಲರೆ ? ಸಮುದ್ರದ ಆಳ ಅಗಲಗಳನ್ನು ತಿಳಿಯಬಲ್ಲರೆ ? ಎಂಬುದಾಗಿತ್ತು. ಅಂದರೆ ಅದು ಮನುಷ್ಯನ ಮಿತಿಗೆ ಮೀರಿದ್ದು. ಅದನ್ನು ತಿಳಿದುಕೊಳ್ಳುವ ಪ್ರಯತ್ನವೇ ವ್ಯರ್ಥ ಕಾಲಹರಣವಾಗಿಬಿಡುತ್ತದೆ. ಹೆಚ್ಚೆಂದರೆ ಪುಂಡರ ಗೋಷ್ಠಿಯಾಗಿಬಿಡುತ್ತದೆ. ಅದನ್ನು ಬಿಟ್ಟು ಇರುವಿನ ಕಡೆಗೆ ಗಮನ ಹರಿಸುವುದೇ ಸೂಕ್ತ ಎಂಬುದು ಬುದ್ಧನ ಅಭಿಮತ.

ಬುದ್ಧ, ಒಮ್ಮೆ ಜೈನ ನಿರ್ಗಂಥರೊಬ್ಬರಿಗೆ ಉತ್ತರಿಸುತ್ತಾ ಪೂರ್ವಜನ್ಮದಲ್ಲಿ ಪುಣ್ಯ ಮಾಡಿದವನು ಶ್ರೀಮಂತನ ಮಗನಾಗಿ, ಪಾಪ ಮಾಡಿದವನು ಬಡವನ ಮಗನಾಗಿ ಹುಟ್ಟುವುದಾದರೆ, ಬ್ರಾಹ್ಮಣನಿಗೆ ತಾನು ಬ್ರಾಹ್ಮಣ ಕುಲದಲ್ಲಿಯೇ ಹುಟ್ಟುವೆನೆಂಬ ಪೂರ್ವನಿರ್ಧಾರಿತ ಶಕ್ತಿ ಇರುವುದಾದರೆ, ಬ್ರಾಹ್ಮಣನಿಗೆ ಬ್ರಹ್ಮನ ಅಗತ್ಯವಾದರೂ ಏನು ? ಅಥವಾ ಬ್ರಹ್ಮನಿಗೆ ಬ್ರಾಹ್ಮಣನ ಅಗತ್ಯವಾದರೂ ಏನು ? ಇದು ಕಪೋಲಕಲ್ಪಿತ ಕತೆಯಲ್ಲವೆ, ಸತ್ಯಕ್ಕೆ ಮಾಡಿದ ಅಪಚಾರವಲ್ಲವೆ ? ಎಂದು ಪ್ರಶ್ನಿಸುತ್ತಾನೆ. ಹೀಗೆ ಎಲ್ಲವನ್ನೂ ತರ್ಕದ ಆಧಾರದ ಮೇಲೆಯೇ ನಿರಾಕರಿಸುವುದರಿಂದ ಅಥವಾ ಒಪ್ಪುವುದರಿಂದ ಇಹಲೋಕದ ಆಸ್ತಕರಿಗೆ ಬುದ್ಧ ಸುಲಭವಾಗಿ ಒಪ್ಪಿಗೆಯಾಗಿಬಿಡುತ್ತಾನೆ. ಇಂಗ್ಲಿಷಿನಲ್ಲಿ agnostic ಎಂಬ ಪದವಿದೆ. ಅಂದರೆ ಅಜ್ಞೇಯತಾವಾದ. ಅಂದರೆ ಆಸ್ತಿಕತೆಗೆ ವಿಮುಖವಾಗಿಬಿಡುವುದು. ನಾಸ್ತಿಕವಾದಕ್ಕೆ ಜೋತು ಬಿದ್ದರೆ ದೇವರನ್ನು ಖಂಡಿಸುವ, ಖಂಡನೆಯನ್ನು ಸಮರ್ಥಿಸಿಕೊಳ್ಳುವ ಅಗತ್ಯ ಬೀಳುತ್ತದೆ, ಅದೇ ಒಂದು ಕಾಯಕವಾಗಿಬಿಡುತ್ತದೆ. ಆ ಅನಗತ್ಯ ಕ್ರಮವನ್ನು ತಡೆಯುವ ಮಾರ್ಗವೇ ಬುದ್ಧನ ಮಧ್ಯಮ ಮಾರ್ಗವಾದ ಅಜ್ಞೇಯತಾವಾದ.

**ನಕಾರಾತ್ಮಕ ವಾದವಲ್ಲ**

ಪ್ರತಿಗಾಮಿ ಹಿಂದೂಗಳೆನಿಸಿಕೊಂಡವರ ಒಂದು ವಾದವಿದೆ. ಅದು ಬೌದ್ಧಧರ್ಮ ನಕಾರಾತ್ಮಕ ವಾದವಾಗಿದೆ. ಅದು ಜೀವ ಪೋಷಕವಲ್ಲ, ದುಃಖವನ್ನೇ ಪ್ರಧಾನವಾಗಿ ಚಿಂತಿಸುತ್ತದೆ ಎಂಬುದು. ಇತ್ತೀಚೆಗೆ ಖ್ಯಾತ ಸಾಹಿತಿಯೊಬ್ಬರು ಸಂಸಾರಿಯಾಗಿ ಮೋಕ್ಷ ಪಡೆಯುವ ಮಾರ್ಗವನ್ನು ಹಿಂದೂ ಧರ್ಮ ಹೇಳುತ್ತದೆ. ಬ್ರಹ್ಮಚರ್ಯೆ ಅಸ್ವಾಭಾವಿಕ ಎಂಬಿತ್ಯಾದಿ ಮಾತುಗಳನ್ನು ಹೇಳಿದ್ದಾರೆ.

ವಾಸ್ತವದಲ್ಲಿ ಅದು ಬೇರೆಯೆ ಆಗಿದೆ. ಇಹವನ್ನು ಕುರಿತು ಚಿಂತಿಸುವ ಧರ್ಮ, ಮನುಷ್ಯನನ್ನು, ಮನಸ್ಸನ್ನು ಕುರಿತು ಚಿಂತಿಸುವ ಧರ್ಮ ಬೌದ್ಧ ಧರ್ಮ. ತ್ರಿಪಿಟಕಗಳಲ್ಲಿ ಕಬ್ಬಿಣದ ಕಡಲೆಯಂತಿರುವ ಅಭಿಧಮ್ಮ ಪಿಟಕ ಮನಸ್ಸನ್ನು ಕುರಿತು ನಡೆಸಿದ ಬುದ್ಧನ ಚಿಂತನೆ. ಅದರಲ್ಲಿ ಇದುವರೆವಿಗೂ ಮನಶ್ಶಾಸ್ತ್ರಜ್ಞರು ನಿರಾಕರಿಸಬಹುದಾದ ಯಾವ ಅಂಶವೂ ಕಂಡುಬಂದಿಲ್ಲ. ಮನುಷ್ಯನಲ್ಲಿ ಪ್ರಾಣಿಜನ್ಯವಾದ ಮೂಲ ಸ್ಫುರಣೆಗಳು ಮನಸ್ಸನ್ನು ಕೆಡುಕಿನತ್ತಲೇ ಸೆಳೆಯುತ್ತವೆ. ಅದಕ್ಕೆ ಬುದ್ಧಿಯ ಅನುಸಂಧಾನ ಅಗತ್ಯ. ಬುದ್ಧಿ ತಂತಾನೆ ಪ್ರಕಾಶಿಸುವುದಿಲ್ಲ. ಅದಕ್ಕೆ ಜ್ಞಾನದ ಬೆಳಕು ಬೇಕು. ದುಃಖವನ್ನು ಹೋಗಲಾಡಿಸುವುದೆಂದರೆ ಮೊದಲು ಮನಸ್ಸನ್ನಾವರಿಸಿದ ಕತ್ತಲೆಯನ್ನು ಜ್ಞಾನದ ಬೆಳಕಿನಿಂದ ದೂರಮಾಡುವುದು. ಕತ್ತಲನ್ನು ಹೊರದೂಡುವುದು ಎಂದರೆ ಬೆಳಕಿನಲ್ಲಿ ಬದುಕುವುದು. ಅದು ದುಃಖವನ್ನೇ ಕುರಿತ ಧ್ಯಾನವಲ್ಲ, ದುಃಖಕ್ಕೆ ಬೌದ್ಧ ಅರ್ಥ ಪರಂಪರೆಯಲ್ಲಿ ವ್ಯಾಪಕವಾದ ಅರ್ಥವಿದೆ. ಎಲ್ಲ ಕೆಡುಕುಗಳ ಮೂಲವೂ ಸಕಲ ಅಕುಶಲ ವಿಚಾರಗಳೂ ದುಃಖವೆಂದೇ ಕರೆಸಿಕೊಳ್ಳುತ್ತವೆ. ಹಾಗೆಯೇ 'ಆಸೆಯೇ ದುಃಖಕ್ಕೆ ಕಾರಣ' ಎಂಬ ಧರ್ಮಸೂತ್ರ ವಾಕ್ಯವೂ ಸಹ ಅತ್ಯಂತ ಸರಳ ಅನುವಾದ. ಇತರ ಅನೇಕ ಭಾಷೆಗಳಲ್ಲಿ ಹೀಗೆಯೇ ಸರಳ ಅನುವಾದ ಪಡೆದುಕೊಂಡು ಸಂಕುಚಿತ ಅರ್ಥವನ್ನು ನೀಡುತ್ತಿದೆ. 'ಆಸೆ' ಎಂಬ ಪದವನ್ನು ಇಲ್ಲಿ 'ತೃಷ್ಣೆ' ಎಂಬ ಅರ್ಥದಲ್ಲಿ ಓದಿಕೊಳ್ಳಬೇಕಾಗುತ್ತದೆ. ಪ್ರಾಯಶಃ ಈ ಅನುವಾದ ಉದ್ದೇಶಪೂರ್ವಕವಾದದ್ದೆಂದು ನನ್ನ ತಿಳಿವಳಿಕೆ. ಪುರೋಹಿತಶಾಹಿಯ ಹುನ್ನಾರವಿದ್ದರೂ ಇರಬಹುದು. ಬುದ್ಧನ ಮೂಲ ಉದ್ದೇಶ ಮನುಷ್ಯನ ಬದುಕನ್ನು ಹಸನುಗೊಳಿಸುವುದು. ಆದ್ದರಿಂದ ಇಹವನ್ನು ಕುರಿತೇ ಅವನ ಧ್ಯಾನ. ಬುದ್ಧನಲ್ಲಿ ಪರಲೋಕ ನಿಷ್ಠೆ ಲವಲೇಶವೂ ಕಾಣುವುದಿಲ್ಲ ಎಂಬುದಕ್ಕೆ ಈ ಪ್ರಕರಣ ಸಾಕ್ಷಿಯಾಗಿದೆ. ಬುದ್ಧನನ್ನು ಸಂಧಿಸಿದ ದೊರೆ ಪಸೇನದಿಯು ಭಕ್ತಿ ಗೌರವದಿಂದ ವಂದಿಸಿ ಸಮೀಪವೇ ಕುಳಿತು ಹೀಗೆ ಪ್ರಶ್ನಿಸುತ್ತಾನೆ:

**ಆತ್ಮ, ದೇವರು, ಸ್ವರ್ಗ ಇತ್ಯಾದಿ ಅಲೌಕಿಕ ಅಸ್ತಿತ್ವಗಳಿಗೆ ಬೌದ್ಧ ಧರ್ಮದಲ್ಲಿ ನೆಲೆಯೇ ಇಲ್ಲ. ಅಂದಮೇಲೆ ಮನುಷ್ಯನಿಗೆ ದೇವರ ಭಯವೇ ಇರುವುದಿಲ್ಲ, ಇರುವುದು ನೈತಿಕತೆಯ ಭಯ ಮಾತ್ರ. ಬೌದ್ಧ ಧರ್ಮವು ನೈತಿಕತೆಯ ನೆಲೆಗಟ್ಟಿನ ಮೇಲೆ ನಿಂತಿದೆ. ಪಂಚಶೀಲಗಳನ್ನು ಪರಿಪಾಲಿಸುವ ಯಾರೇ ಆದರೂ ನೈತಿಕವಾಗಿ ಧೈರ್ಯಶಾಲಿಗಳಾಗಿರುತ್ತಾರೆ. ಅವರಿಗೆ ದೈವತ್ವ ಪ್ರಾಪ್ತಿಯಾಗಿರುತ್ತದೆ ಎಂದೇ ಹೇಳಬೇಕು. ನೈತಿಕತೆಯನ್ನು ಪಾಲಿಸಲು ಆರ್ಥಿಕ ಹೊರೆ ಬೀಳುವುದಿಲ್ಲ. ಇತರ ಧರ್ಮಗಳಲ್ಲಿ ಮಾಡುವ ತೀರ್ಥ, ಪದಾರ್ಥ ಯಾತ್ರೆಗಳೆಲ್ಲವೂ ಭಯಮೂಲವಾದುವು ಮತ್ತು ಆರ್ಥಿಕ ಹೊರೆಯನ್ನು ಸೃಷ್ಟಿಮಾಡುವಂಥವು. ಇಂಡಿಯಾ ದೇಶದ ಭಯಪೀಡಿತ ಕೆಳಜಾತಿ ವರ್ಗಕ್ಕೆ ಬೌದ್ಧ ಧರ್ಮ ಹೇಳಿಮಾಡಿಸಿದಂತಿದೆ.**

**ಈ ಸಾಮಾಜಿಕ ರೋಗಗಳನ್ನು ನಾಶಮಾಡುವ ಶಕ್ತಿ ಬೌದ್ಧ ಧರ್ಮಕ್ಕಿದೆ. ಸಮಾನತೆ, ಭ್ರಾತೃತ್ವ ಮತ್ತು ನ್ಯಾಯವನ್ನು ಒದಗಿಸುವ ಧರ್ಮ ಬೌದ್ಧ ಧರ್ಮವಾಗಿರುವುದರಿಂದ ಅದರ ಪ್ರಸ್ತುತತೆಯನ್ನು ಪ್ರಶ್ನೆ ಮಾಡುವ ಅವಕಾಶವೇ ಇರುವುದಿಲ್ಲ. ಆದ್ದರಿಂದಲೇ ಐನ್‌ಸ್ಟೈನ್ ಎಂಬ ವಿಜ್ಞಾನಿ ಭವಿಷ್ಯದ ಧರ್ಮವೆಂಬುದೇನಾದರೂ ಇದ್ದರೆ ಅದು ಬೌದ್ಧ ಧರ್ಮ ಎಂದು ಹೇಳಿದ್ದು ಇಲ್ಲಿ ಉಲ್ಲೇಖನೀಯವಾಗಿದೆ.**

''ಮಹಾಪ್ರಭು, ಬಹುದಿನದಿಂದ ನನ್ನನ್ನು ಕಾಡುತ್ತಿರುವ ಪ್ರಶ್ನೆಯೊಂದಿದೆ. ಅದನ್ನು ತಮ್ಮನ್ನೇ ನೇರವಾಗಿ ಪ್ರಶ್ನಿಸುವುದು ಸೂಕ್ತವೆಂದು ಬಗೆದು ವಿನಂತಿಸಿಕೊಳ್ಳುತ್ತಿರುವೆ.''

''ಮರಣದ ನಂತರ ತಥಾಗತನು ಬದುಕಿರುವನೆ ?''

''ಎಲೈ ದೊರೆಯೇ, ಈ ವಿಷಯ ನನ್ನಿಂದ ವ್ಯಕ್ತವಾಗಿಲ್ಲ.''

''ಮಹಾಪ್ರಭು, ಹಾಗಾದರೆ, ತಥಾಗತರು ಮರಣದ ನಂತರ ಬದುಕಿರುವುದಿಲ್ಲವೆ ?''

''ಎಲೈ ದೊರೆಯೇ, ಈ ಪ್ರಶ್ನೆಗೆ ಕೂಡ ನಾನೆಲ್ಲೂ ಉತ್ತರಿಸಿಲ್ಲ.''

''ಮಹಾಪ್ರಭು, ಪರಮಾತ್ಮ ಅಥವಾ ದೇವರಿದ್ದಾನೆಯೆ ?''

''ಎಲೈ ದೊರೆಯೇ, ಈ ಪ್ರಶ್ನೆಗೆ ಕೂಡ ನಾನು ಉತ್ತರಿಸಿಲ್ಲ.''

''ಮಹಾಪ್ರಭು, ಪುನರ್ಜನ್ಮ ಎಂಬುದು ಉಂಟೆ ?''

''ಎಲೈ ದೊರೆಯೇ, ಈ ಪ್ರಶ್ನೆಗೆ ಕೂಡ ನಾನು ಉತ್ತರಿಸಿಲ್ಲ.''

''ಮಹಾಪ್ರಭು, ಸ್ವರ್ಗ - ನರಕಗಳುಂಟೆ ?''

''ಎಲೈ ದೊರೆಯೇ, ಈ ಪ್ರಶ್ನೆಗೆ ಕೂಡ ನಾನು ಉತ್ತರಿಸಿಲ್ಲ.''

''ಮಹಾಪ್ರಭು, ಅತಿಮಾನುಷ ಶಕ್ತಿ ಮತ್ತು ಪವಾಡಗಳು ನಿಜವೆ ?''

''ಎಲೈ ದೊರೆಯೇ, ಈ ಪ್ರಶ್ನೆಗೆ ಕೂಡ ನಾನು ಉತ್ತರಿಸಿಲ್ಲ.''

''ಮಹಾಪ್ರಭು, ಇದಕ್ಕೆ ಕಾರಣವೇನು? ನಿಮಿತ್ತವೇನು ? ಈ ಗಹನವೂ, ಗಂಭೀರವೂ, ಮೂಲಭೂತವೂ ಆದ ಈ ವಿಷಯಗಳು ತಮ್ಮಿಂದ ಏಕೆ ಉತ್ತರ ಪಡೆದಿಲ್ಲ ?''

''ಎಲೈ ದೊರೆಯೇ, ಈ ಎಲ್ಲವೂ ಊಹೆ, ಕಲ್ಪನೆ, ಕನಸು, ಕುತಂತ್ರ, ವ್ಯವಸ್ಥಿತ ಸಂಚು, ಪರಾವಲಂಬಿತನ ಹಾಗೂ ಶೋಷಣೆಗೆ ಮೂಲವಾದದ್ದರಿಂದ, ನನ್ನ ಅಲ್ಪ ಆಯುಷ್ಯದ ಮಿತಿಗೆ ಸವಾಲಾದುದ್ದರಿಂದ, ನನ್ನ ಪಂಚೇಂದ್ರಿಯಗಳಿಗೆ ಸ್ಪರ್ಶಿಸದೆ ಇದ್ದುದಕ್ಕೆ ನನ್ನ ಅನುಭವ, ಅನುಭಾವ, ಇರುವಿಕೆ, ಆಗುವಿಕೆ ಮತ್ತು ಸ್ಪರ್ಶಕ್ಕೆ ನಿಲುಕದೇ ಇದ್ದುದ್ದರಿಂದ. ಈ ಯಾವುದರ ಹಿನ್ನೆಲೆಯಲ್ಲಿಯೂ ಕಾರ್ಯಕಾರಣ ಸಂಬಂಧ ಇಲ್ಲದೇ ಇರುವುದರಿಂದ, ಈ ಎಲ್ಲವನ್ನೂ ಮೌನವಾಗಿ ತಿರಸ್ಕರಿಸಿದೆ.''

''ವಿಚಿತ್ರ ಮಹಾಪ್ರಭು. ಆದರೆ ಕರ್ಮ ಸಿದ್ಧಾಂತವನ್ನು ನೇರವಾಗಿ ಸ್ಪಷ್ಟವಾಗಿ, ಕಟುವಾಗಿ ಟೀಕಿಸಲು ಕಾರಣವೇನು ?''

''ಎಲೈ ದೊರೆಯೇ, ಅದು ಬದುಕಿಗೆ ನೇರವಾಗಿ ಸಂಬಂಧಿಸಿದ್ದು ಎಂಬ ಕಾರಣಕ್ಕಾಗಿ ! ಅಸಮಾನತೆ ಮತ್ತು ಶೋಷಣೆಗೆ ಮೂಲ ಎಂಬ ಕಾರಣಕ್ಕೆ ! ಇದೂ ಕೂಡ ಊಹೆ, ಕಲ್ಪನೆ ಮತ್ತು ಕೃತ್ರಿಮಕ್ಕೆ ಮೂಲಮಂತ್ರ ಎಂಬ ಕಾರಣಕ್ಕಾಗಿ !''

''ಮಹಾಪ್ರಭು, ಈ ಕಾರಣಗಳಿಗಾಗಿ ಪಾರಮಾರ್ಥ್ಯವನ್ನೇ ಅಲ್ಲಗಳೆಯುವುದು ಸಮಂಜಸವೇ ? ಇದರಿಂದ ಒಮ್ಮೆಲೆ ಮನುಷ್ಯ ತತ್ತರಿಸಿಹೋಗುವುದಿಲ್ಲವೆ ? ಇದು ಪ್ರವಾಹಕ್ಕೆ ಎದುರಾಗಿ ಈಜುವ ನಿಲುವಲ್ಲವೆ ? ಇದು ಅನ್ಯಾಯವಲ್ಲವೆ ?''

''ಎಲೈ ದೊರೆಯೇ, ಯಾವುದು ಅನ್ಯಾಯ ?! ತೋರಿಕೆಗಾಗಿ ನಟನೆ ಮಾಡುವುದು ಅನ್ಯಾಯವಲ್ಲವೆ ? ಮತ್ತೊಬ್ಬರನ್ನು ಮೆಚ್ಚಿಸಲಿಕ್ಕಾಗಿ ಸುಳ್ಳು ಹೇಳುವುದು ಅನ್ಯಾಯವಲ್ಲವೆ ? ಸತ್ಯವನ್ನು ಸತ್ಯವೆಂದು, ಅಸತ್ಯವನ್ನು ಅಸತ್ಯ ಎಂದು ಸ್ಪಷ್ಟವಾಗಿ ಪ್ರತಿಪಾದಿಸುವುದು ಅನ್ಯಾಯವೆ ?''

''ಎಲೈ ದೊರೆಯೇ, ಹಾಗಾದರೆ ನಿನಗೊಂದು ಪ್ರಶ್ನೆಯನ್ನು ಕೇಳುತ್ತೇನೆ. ನಿನಗೆ ಯಾವುದು ಸೂಕ್ತವೆನಿಸುತ್ತದೋ ಹಾಗೆ ಉತ್ತರಿಸು. ನೀನಾಗಲಿ, ನಿನ್ನ ಸಿಬ್ಬಂದಿಗಳಾಗಲಿ, ಅಸಂಖ್ಯಾತ ಲೆಕ್ಕಿಗರಾಗಲಿ ಗಂಗಾನದಿಯಲ್ಲಿನ ಮರಳ ಕಣಗಳ ಸಂಖ್ಯೆಯನ್ನು ನಿಖರವಾಗಿ ಹೇಳಬಲ್ಲಿರಾ ? ಅಥವಾ ಸಮುದ್ರದ ಆಳ, ಅಗಲ, ಉದ್ದ ಮತ್ತು ನೀರಿನ ಪ್ರಮಾಣವನ್ನು ಹೇಳಬಲ್ಲಿರಾ ?''

''ಮಹಾಪ್ರಭು, ಸಾಧ್ಯವಿಲ್ಲ, ಖಂಡಿತಾ ಸಾಧ್ಯವಿಲ್ಲ, ಏಕೆಂದರೆ ಇದು ನನ್ನ ಮಿತಿಗೆ ಮೀರಿದ್ದು, ನನ್ನ ಊಹೆ, ಕನಸು ಮತ್ತು ಕಲ್ಪನೆಗೆ ಮೀರಿದ್ದು ...!''

''ಎಲೈ ದೊರೆಯೇ, ನಾನು ಕೂಡ ಇದನ್ನೇ ಹೇಳಿದ್ದು ! ಇದಕ್ಕಿಂತ ಹೊಸದನ್ನು ಭಿನ್ನವಾದುದ್ದನ್ನು ಏನೂ ಹೇಳಲಿಲ್ಲ...!!!''

''ಅದ್ಭುತ ಪ್ರಭು ! ಅದ್ಭುತ ! ಆಶ್ಚರ್ಯಕರ ! ಅದೆಷ್ಟು ವಿಚಿತ್ರ ಪ್ರಭು !! ಗುರು ಶಿಷ್ಯರಿಬ್ಬರ ಅರ್ಥ ವಿವರಣೆಯೂ ಅಕ್ಷರ ಮತ್ತು ಎರಡರಲ್ಲಿಯೂ ಹೊಂದಾಣಿಕೆ, ಸಾಂಗತ್ಯ ಮತ್ತು ಉತ್ಕೃಷ್ಟತೆ ಇದೆ.''

''ಮಹಾಪ್ರಭು, ಈ ಹಿಂದೆ ಒಮ್ಮೆ ನಿಮ್ಮ ಪರಮಶಿಷ್ಯಳಾದ ಸಾಧ್ವಿ ಖೇಮಾಳನ್ನು ಸಂಧಿಸಿ ಇದೇ ಪ್ರಶ್ನೆಗಳನ್ನು ಕೇಳಿದೆ. ಇದೇ ಉತ್ತರವನ್ನು ಪಡೆದೆ. ಅಕ್ಷರ ಮತ್ತು ಅರ್ಥಗಳಲ್ಲಿ ಎಂತಹ ಸಾಮ್ಯವಿದೆ. ಉತ್ಕೃಷ್ಟತಂದೆಯೇ, ಉತ್ಕೃಷ್ಟ... !''

''ಹೌದು, ಮಹಾಪ್ರಭು, ನಿನ್ನಂತಹ ಗುರುವನ್ನು ನೀನು ತರಬೇತುಗೊಳಿಸಿದ ಶಿಷ್ಯರನ್ನು ಪಡೆದ ಭರತಖಂಡವೇ ಧನ್ಯ... !!'' ಎಂದ.

ಇದಕ್ಕೆ ಹೊರತಾಗಿ ಬುದ್ಧ ದುಃಖವನ್ನು ಅರಿತುಕೊಳ್ಳುವ, ದುಃಖಕ್ಕೆ ಕಾರಣಗಳನ್ನು ತಿಳಿದುಕೊಳ್ಳುವ, ದುಃಖ ನಿವಾರಣೆಯನ್ನು ಕಂಡುಕೊಳ್ಳುವ ಮತ್ತು ದುಃಖ ನಿವಾರಣೆಗೆ ಮಾರ್ಗಗಳನ್ನು ಹುಡುಕಿಕೊಳ್ಳುವ ವಿಧಾನವನ್ನು ಹೇಳಿಕೊಡುತ್ತಾನೆ. ಅಷ್ಟಾಂಗ ಮಾರ್ಗಗಳನ್ನು ಪಾಲಿಸುವವನಿಗೆ ದೈವದ ಆಶ್ರಯ ನಗಣ್ಯವಾಗಿಬಿಡುತ್ತದೆ. ಆತನೇ ದೈವತ್ವಕ್ಕೇರುತ್ತಾ ಹೋಗುತ್ತಾನೆ.

**ಇಂದಿಗೂ ಎಂದೆಂದಿಗೂ ಸಲ್ಲುವ ಧರ್ಮ**

ಈಗಾಗಲೇ ಚರ್ಚಿಸಿರುವಂತೆ ಬೌದ್ಧ ಧರ್ಮ ಪರಲೋಕ ನಿಷ್ಠೆಯ, ಪಾರಮಾರ್ಥಿಕ ನಂಬುಗೆಗಳ ಧರ್ಮವಲ್ಲ, ಅದು ಇಹದ ಮತ್ತು ಮನುಷ್ಯಪರ ಧರ್ಮ. ಆದ್ದರಿಂದ ಪ್ರಜ್ಞೆಯ ಮಿತಿಗೆ ಸಿಕ್ಕುವ ಧರ್ಮ. ದೇವರು ಇರಲೇಬೇಕು ಎಂದು ಹಠ ಹಿಡಿಯುವವರಿಗೆ ಬುದ್ಧ ನಿಲುಕುವುದಿಲ್ಲ. ಇತರ ಧರ್ಮಗಳು ಮುಕ್ತಿಗಾಗಿ, ಸ್ವರ್ಗಕ್ಕಾಗಿ ಜೀವನವನ್ನು ನಡೆಸುವಂತೆ ಪ್ರಚೋದಿಸುತ್ತವೆ. ಆದರೆ ಬೌದ್ಧ ಧರ್ಮದಲ್ಲಿ ಸ್ವರ್ಗ-ನರಕಗಳ ಬಗ್ಗೆ ವ್ಯಾಖ್ಯಾನವೇ ಇಲ್ಲ. ಹುಟ್ಟಿಗೂ ಮುಂಚೆಯೇ ನಾನು ಏನಾಗಿದ್ದೆ, ಎಲ್ಲಿದ್ದೆ ಎನ್ನುವ ಮೂರ್ಖ ಪ್ರಶ್ನೆಗಳಿಂದ ಮುಕ್ತಿಗೊಳಿಸಿ, ಸಾವಿನ ನಂತರ ನಾನು ಏನಾಗಬಹುದು ಎಲ್ಲಿರಬಹುದು ಎಂಬ ತಲೆತಿರುಕ ಜಿಜ್ಞಾಸೆಯಿಂದ ತಪ್ಪಿಸಿ ಇವತ್ತಿನ ಬದುಕಿಗೆ ಎಳೆದು ನಿಲ್ಲಿಸುವುದೇ ಬೌದ್ಧ ಧರ್ಮ. ಬದುಕಿರುವಾಗ ತನ್ನ ಒಳಿತು, ಇತರರ ಒಳಿತು ಮತ್ತು ಪ್ರಕೃತಿಯ ಒಳಿತಿಗಾಗಿ ಹೇಗೆ ನಡೆದುಕೊಳ್ಳಬೇಕೆಂಬ ನಡಾವಳಿಗಳನ್ನು ಬುದ್ಧ ತನ್ನ ಜೀವನದುದ್ದಕ್ಕೂ ಬೋಧಿಸಿದ. ಅವುಗಳ ಒಟ್ಟು ಮೊತ್ತವೇ ಬೌದ್ಧ ಧರ್ಮ.

ಇದು ಹೇಗೆ ಪ್ರಸ್ತುತ ಎಂಬ ಪ್ರಶ್ನೆ ಕಾಡಬಹುದು. ಬಡವ ಶ್ರೀಮಂತನೆಂಬ ಭೇದಭಾವವಿಲ್ಲದ ವೈಚಾರಿಕತೆಯನ್ನು ಮನಸ್ಸು ಒಪ್ಪುತ್ತದೆ. ವೈಚಾರಿಕತೆಯ ಒರೆಗಲ್ಲಿಗೆ ಹಚ್ಚಿದ ಈ ಧರ್ಮವನ್ನು ಸೂಕ್ಷ್ಮವಾಗಿ ಗಮನಿಸಿದರೆ ಒಪ್ಪಿಗೆಯಾಗುತ್ತದೆ. ಬುದ್ಧಯಾನ ಪ್ರಾರಂಭವಾಗುವುದೇ ಅಸಮಾನತೆಯ ವಿರುದ್ಧ. ಅಲ್ಲಿ ಜಾತಿ ಉಪಜಾತಿಗಳಿಲ್ಲ. ಆದ್ದರಿಂದ ಜಾತಿಯ ಕೀಳರಿಮೆಯಿಂದ ಬಳಲುವವರಿಗೆ ಬುದ್ಧನ ಸಿದ್ಧೌಷಧ ಇದು. ಅಂದರೆ ಬೌದ್ಧ ಧರ್ಮದಲ್ಲಿ ಸಮಾನತೆ ಇದೆ.

ಇಂಡಿಯಾವನ್ನು ಒಳಗೊಂಡು ಜಗತ್ತನ್ನು ಕಾಡುತ್ತಿರುವ ಅತಿ ದೊಡ್ಡ ಶತ್ರು ಎಂದರೆ ಮೌಢ್ಯ (Superstition). ಮೌಢ್ಯಾಚರಣೆಗೆ ಬೌದ್ಧಧರ್ಮದಲ್ಲಿ ಅವಕಾಶವೇ ಇಲ್ಲ. ಒಳ್ಳೆಯ ಅಥವಾ ಕೆಟ್ಟ ಕಾಲಗಳೆಂಬುದಿಲ್ಲ. ದಿನದ ೨೪ ಗಂಟೆಗಳೂ, ವರ್ಷದ ೩೬೫ ದಿನಗಳೂ ಒಳ್ಳೆಯ ಕಾಲವೇ. ನಿರ್ಮಲ ಮನಸ್ಸಿನಿಂದ ಒಳ್ಳೆಯ ಕೆಲಸಗಳನ್ನು ಯಾವಾಗಲೂ ಮಾಡಬಹುದು. ಆದ್ದರಿಂದ ದೇಶದ ಪ್ರಗತಿ ಅವ್ಯಾಹತವಾಗಿ ನಡೆಯಲು ಸಾಧ್ಯ.

ಆತ್ಮ, ದೇವರು, ಸ್ವರ್ಗ ಇತ್ಯಾದಿ ಅಲೌಕಿಕ ಅಸ್ತಿತ್ವಗಳಿಗೆ ಬೌದ್ಧ ಧರ್ಮದಲ್ಲಿ ನೆಲೆಯೇ ಇಲ್ಲ. ಅಂದಮೇಲೆ ಮನುಷ್ಯನಿಗೆ ದೇವರ ಭಯವೇ ಇರುವುದಿಲ್ಲ. ಇರುವುದು ನೈತಿಕತೆಯ ಭಯ ಮಾತ್ರ. ಬೌದ್ಧ ಧರ್ಮವು ನೈತಿಕತೆಯ ನೆಲಗಟ್ಟಿನ ಮೇಲೆ ನಿಂತಿದೆ. ಪಂಚಶೀಲಗಳನ್ನು ಪರಿಪಾಲಿಸುವ ಯಾರೇ ಆದರೂ ನೈತಿಕವಾಗಿ ಧೈರ್ಯಶಾಲಿಗಳಾಗಿರುತ್ತಾರೆ. ಅವರಿಗೇ ದೈವತ್ವ ಪ್ರಾಪ್ತಿಯಾಗಿರುತ್ತದೆ ಎಂದೇ ಹೇಳಬೇಕು. ನೈತಿಕತೆಯನ್ನು ಪಾಲಿಸಲು ಆರ್ಥಿಕ ಹೊರೆ ಬೀಳುವುದಿಲ್ಲ. ಇತರ ಧರ್ಮಗಳಲ್ಲಿ ಮಾಡುವ ತೀರ್ಥ, ಪದಾರ್ಥ ಯಾತ್ರೆಗಳೆಲ್ಲವೂ ಭಯಮೂಲವಾದುವು ಮತ್ತು ಆರ್ಥಿಕ ಹೊರೆಯನ್ನು ಸೃಷ್ಟಿಮಾಡುವಂಥವು. ಇಂಡಿಯಾ ದೇಶದ ಭಯಪೀಡಿತ ಕೆಳಜಾತಿ ವರ್ಗಕ್ಕೆ ಬೌದ್ಧ ಧರ್ಮ ಹೇಳಿಮಾಡಿಸಿದಂತಿದೆ.

ಈ ಸಾಮಾಜಿಕ ರೋಗಗಳನ್ನು ನಾಶಮಾಡುವ ಶಕ್ತಿ ಬೌದ್ಧ ಧರ್ಮಕ್ಕಿದೆ. ಸಮಾನತೆ, ಭ್ರಾತೃತ್ವ ಮತ್ತು ನ್ಯಾಯವನ್ನು ಒದಗಿಸುವ ಧರ್ಮ ಬೌದ್ಧ ಧರ್ಮವಾಗಿರುವುದರಿಂದ ಅದರ ಪ್ರಸ್ತುತತೆಯನ್ನು ಪ್ರಶ್ನೆ ಮಾಡುವ ಅವಕಾಶವೇ ಇರುವುದಿಲ್ಲ. ಆದ್ದರಿಂದಲೇ ಐನ್‌ಸ್ಟೈನ್ ಎಂಬ ವಿಜ್ಞಾನಿ ಭವಿಷ್ಯದ ಧರ್ಮವೆಂಬುದೇನಾದರೂ ಇದ್ದರೆ ಅದು ಬೌದ್ಧ ಧರ್ಮ ಎಂದು ಹೇಳಿದ್ದು ಇಲ್ಲಿ ಉಲ್ಲೇಖನೀಯವಾಗಿದೆ.

ಡಾ|| ಮೂಡ್ನಾಕೂಡು ಚಿನ್ನಸ್ವಾಮಿ
ಮುಖ್ಯ ಲೆಕ್ಕಾಧಿಕಾರಿ, ಎನ್.ಇ.ಕೆ.ಎಸ್.ಆರ್.ಟಿ.ಸಿ. ಕೇಂದ್ರ ಕಛೇರಿ, ಮುಖ್ಯರಸ್ತೆ, ಗುಲಬರ್ಗಾ - ೫೮೫೧೦೨

# ಕಿಂಗ್ ಮೇಕರ್ ಮತ್ತು ಮಣ್ಣಿನ ಮಗ

"**ಚೆಂ**ದಾಗಿದ್ದೀರಾ ಗೌಡ್ರೇ? ನಿಮ್ನ ಒಂದ್ ಕಿತ ನೋಡ್ಕಂಡೋಗಾನ ಅಂತ ಬಂದೆ!"

ಆತ ಯಾವುದೋ ಹಳ್ಳಿಯಿಂದ ದಣಿದು ಬಂದಿದ್ದ ಮಣ್ಣಿನ ಮಗ ಎಂಬುದನ್ನು ನಮ್ಮ ದೇವೇಗೌಡರಿಗೆ ಯಾರೂ ಹೇಳಿಕೊಡಬೇಕಾಗಿರಲಿಲ್ಲ.

"ಯಾರು ಅಂತ ಗೊತ್ತಾಗ್ಲಿಲ್ವಲ್ಲೊ?"

"ಐ ಅಂಗಲ್ದೆ! ಓಟ್‌ಕೊಡೀ ಅಂತ ಬರೂವಾಗ ದೊಡ್‌ದಾಗಿ ಕೈಮುಗೀತೀರಿ. ನಮ್ಮೆಲ್ರ ಮೊಕಾನೂ ನೆಪ್ಪಿರ್ತದೆ. ಆಮ್ಯಾಲೆ ಈ ಪಾಯ್ಗಳು ಏನಾದ್ರು ಎತ್ತಾದ್ರು ಅಂತ ನೆಪ್ಪಂಗಿರ್ತದೆ ಏಳಿ!" – ಎಂದು ಮಣ್ಣಿನ ಮಗನ ಭಾಷೆಯಲ್ಲಿ ಝಾಡಿಸಿದ.

ಕಳೆದ ಅರ್ಧಶತಮಾನದಿಂದ ರಾಜಕಾರಣದಲ್ಲಿ ನುರಿತಿದ್ದ ಗೌಡರಿಗೆ ಥಟ್ಟನೆ ಅರ್ಥವಾಯಿತು.

"ಬಾರ್ಲಾ, ಬರ್ತಾ ಇದ್ದಂಗ್ಯೆ ಕ್ವಾಪಾ ಮಾಡ್ಕಂಡ್ರೆ ಎಂಗ್ಲಾ? ನೀನೇನಾರೋ ಅಂದ್ಕೋ. ಗಾಡ್ ಪ್ರಾಮಿಸ್ – ನಿನ್ನೆಸ್ರು ಮರ್ತೋಗದೆಕಣ್ಲಾ!" ಎಂದು ಸಂಭಾಳಿಸಿದರು.

"ಐ ನಾನಲ್ವ ಗೌಡ್ರೆ ಬೀರಣ್ಣ, ಗೊಂದಲ್ಪುರದ್ ಬೀರಣ್ಣ!"

"ಯಾವ್ ಗೊಂದಲ್ಪುರ?"

"ಸರೋಯ್ತು ತಗಳಪ್ಪ. ನಮ್ ಗುಂಡಯ್ಯನ್ ಗುಡಿಗೂ ಬಂದಿದ್ರಲ್ಲ ಗೌಡ್ರೆ. ಅದೇ ಓಬಿರಾಯ್ನ್ ಕೊಪ್ಲು..."

ಇದು ಬಗ್ಗುವ ಆಸಾಮಿಯಲ್ಲ ಎಂಬುದು ಗೌಡರಿಗೆ ಥಟ್ಟನೆ ಅರ್ಥವಾಯಿತು. ಆದರೆ ನುರಿತ ರಾಜಕಾರಣಿಗೆ ಇಂಥ ಎಷ್ಟೋ ಪ್ರಸಂಗಗಳಲ್ಲಿ ಸಂಭಾಳಿಸಿದ ಅನುಭವವಿತ್ತು.

"ಓಹೋ ಬಾರ್ಲಾ... ಬಾ. ಗೊತ್ತಾಯ್ತು. ನಿಮ್ಮೂರ್ನಲ್ಲಿ ಏನ್ ಸಮಾಚಾರ..."

"ನಮ್ದೇನು ಇದ್ದೇ ಇರ್ತದೆ ಬುಡಿ ಗೌಡ್ರೆ. ರಾಮ ಆಳಿದ್ರೇನು, ರಾವ್ಣ ಆಳಿದ್ರೇನು, ರಾಗಿ ಬೀಸೂದು ತಪ್ತದ ಅಂತ ಗಾದಿ ಮಾತಿಲ್ವೆ? ಅದಿರ್ಲಿ, ನಮ್ ರಾಮಾಂಜ್ನಿ ಬಂದೋನು ಗೌಡ್ರು ಯಾರ್ ಸಂಗ್ಡಾನೂ ಸೇರ್ತಿಲ್ವಂತೆ, ಯಾರ್ ಸಂಗ್ಡಾನೂ ಮಾತಡ್ದನೆ ಸುಮ್ನೆ ಬಾಣ ನೋಡ್ತಾ ಕುಂತಿರ್ತಾರಂತೆ. ಸಾನೆ ಬೇಜಾರ್ ಮಾಡ್ಕಂಡವ್ರಂತೆ ಅಂದ್ನಪ್ಪ. ನೀವೇನಾರ ಅಂದ್ಕಳಿ ಗೌಡ್ರೆ. ನಂಗೆ ಮನ್ಸು ತಡೀನಿಲ್ಲ...

"ಅಲ್ಲಾ ಗೌಡ್ರೆ ಪ್ರತಿದಿನ ದೇವೇಗೌಡ್ರು ಅಂಗಂದ್ರು, ಇಂಗಂದ್ರು ಅಂತ ಪೇಪರಲ್ಲಿ ಸುದ್ದಿ ಬರ್ತಿತ್ತು. ರೈತರ್ರು, ಬಡವ್ರು ಬಗ್ರು ಅಂದ್ರೆ ಈ ಸರ್ಕಾರಕ್ಕೆ ಕೇರೇ ಇಲ್ಲ. ಯಾವಾಗ್ ನೋಡಿದ್ರೂ ಐಟಿಬಿಟಿ – ಅಂತ ಹಣಗಾರರ್ಗೇ ಸವಲತ್ ಕೊಡ್ತದೆ. ನನ್ ಜೀವಾ ಇರೂಗಂಟ ರೈತರ್ಗಾಗಿ ಓರಾಟ ಮಾಡ್ತೀನಿ, ಅಂತ ಕೂಗಾಡ್ತಿದ್ರಿ. ಇದ್ದಕ್ಕಿದ್ದಂಗೆ ಇಂಗೆ ತೆಪ್ಗಾದ್ರೆ ನಾವು ಏನ್ ಅನ್ಕೋಬೇಕು?"

"ಅದೆಲ್ಲ ಇದ್ದದ್ದೆ ಬುಡ್ಲಾ. ಇಂತೇವ್ನೆಲ್ಲ ಸಾಕಷ್ಟ್ ನೋಡಿವ್ನಿ. ನಂಗ್ಯಾಕ್ ಬೇಜಾರಾಯ್ತು ಅಂದ್ರೆ, ನಾನು ಇಷ್ಟ್ ವರ್ಷ ಪಬ್ಲಿಕ್ ಲೈಫ್‌ನಲ್ಲಿದ್ದೀನಿ. ನನ್ ಐಡಿಯಾಲಜಿ ದಾಟಿ ಆಚೆ ಹೋದದ್ನ ಎಂದಾದ್ರು ಕಂಡಿದ್ದೀರಾ? ಈ ಹುಡುಗ್ರು ಇಂಗ್ ಮಾಡಿದ್ರಲ್ಲ ಅಂತ ನಂಗೆ ನಿದ್ದೇನೇ ಹೊರ್ಟೋಯ್ತು ಅನ್ನು!"

"ಐ ತಗೀರಿ ಗೌಡ್ರೆ, ನಿಮ್ ಐಡಿಯಾಲಜಿ ಪೈಡಿಯಾಲಜಿ ಎಲ್ಲ ನನ್ ತಲೆಗೆ ಓಗುವಂತದ್ದಲ್ಲ. ಆದ್ರೆ ನೀವ್ ಮಾತ್ರ ಯಾರಿಗೂ ಎದರ್‌ಬ್ಯಾಡ್ರಿ... ನಾವೆಲ್ಲ ಮಣ್ಣಿನ್ ಮಕ್ಳು ಇರೂದ್ಯಾಕೆ, ಮಣ್ ತಿನ್ನೂಕ ಅಂತೀನಿ!"

ಅಷ್ಟರಲ್ಲಿ ಯಾರೋ ದೊಡ್ಡ ಲೋಟದಲ್ಲಿ ತಣ್ಣಗಿನ ರಾಗಿ ಅಂಬ್ಲಿ ತಂದಿತ್ತರು.

ಬೀರಣ್ಣಗೆ ಬಹಳ ಸಂತೋಷವಾಯಿತು. ಹೊಟ್ಟೆ ತಣ್ಣಗಾಯಿತು.

"ಗೌಡ್ರೆ... ಇಂಗಂದ್ನಲ್ಲ ಈ ಬೀರಣ್ಣ ಅಂತ ತೆಪ್ ತಿಳ್ಕಾಬ್ಯಾಡಿ. ಈರಾಂಜ್ನಿ ಇನ್ನೂ ಒಂದ್ ಮಾತೇಳ್ದ. ಗೌಡ್ರು ಸೆಕ್ಯುಲರೂ ಅಲ್ಲ ಗಿಕ್ಯೂಲರೂ ಅಲ್ಲಾಂತ. ಅದ್ಯಾಕ್ ಗೌಡ್ರ ಅಂಗಂದ?"

ಗೌಡರು ಸ್ವಲ್ಪ ಗರಮ್ಮಾದರೂ "ಲೋ ಬೀರಣ್ಣ, ನಿಮ್ಗೆಲ್ಲ ಯಾವತ್ಲ ಬುದ್ದಿ ಬರೂದು? ಯಾರ್ಯಾರ್ ಮಾತ್ನೋ ಕಟ್ಗಂಡು ಇಂಗ್ಯೆ ಆಡ್ತಾರ್ದು ಗೊತ್ತಾಯ್ತ? ರಾಜ ಆಗಿರೋನು ಲೋಕ ಕಲ್ಯಾಣಕ್ಕಾಗಿ ಕೆಲವು ಕರ್ತವ್ಯ ಮಾಡ್ಬೇಕಾಯ್ತದೆ ಕಣ್ಲಾ! ಶಿವ ವಿಷ್ಣು ಬ್ರಹ್ಮ, ಹರಿ-ಹರ, ಅಯ್ಯಪ್ಪ, ಕೊಡಂಗಲೂರು ಭಗವತಿ, ಬಣ್ಣಾರಿಯಮ್ಮ, ತಿಮ್ಮಪ್ಪ, ದುಗ್ಗಾಲಮ್ಮ, ಅಣ್ಣಮ್ಮ, ಬಂಡೇಶ್ವರ – ಮುಂತಾಗಿ ಸಕಲೆಂಟು ದೇವರುಗಳಿಗೂ ನಡ್ಕೊಳ್ಳೂದು, ಎಲ್ಲರ್ಗೂ ಒಳ್ಳೇದಾಗ್ಲಿ ಅಂತ ಅಂತ್ರ-ತಂತ್ರ, ಯಜ್ಞ-ಯಾಗ ಮಾಡೂದು. ಗೊತ್ತಾಯ್ತೆ? ಇದ್ನೆಲ್ಲ ಯಾತಕ್ಕಾಗ್ ಮಾಡ್ಬೇಕಾಯ್ತು. ಅದನ್ನ ಥಿಂಕ್ ಮಾಡ್ಬೇಕು. ಸುಮ್ನೆ ಬಾಯಿಗ್ ಬಂದಂಗ್ ಏಳ್ಕಂಡ್ ತಿರ್ಗೂದಲ್ಲ..."

"ಐ ಬುಡಿ ಗೌಡ್ರೆ ನೀವು ಇದ್ನೆಲ್ಲ ಯಾರ್ಗಾಗ್ ಮಾಡ್ತೀರಿ ಅಂತ ನಮಗೊತ್ತಿಲ್ವೆ. ಒಸಿ ದೇವ್ರಾಗಿ. ನಿಮ್ ಬೀಪಿಗೀಪಿ ಜಾಸ್ತಿ ಮಾಡ್ಕಂಡು, ಈ ಬೀರಣ್ಣ ಅನ್ನೋ ಪಾಪಿ ಬಂದು ಇಂಗಾಯ್ತು ಅಂತ ನಂಗೂ ಕೆಟ್ಟೆಸ್ರು...! ಆಮ್ಯಾಲೆ ಗೌಡ್ರೆ... ನೂರ್‌ಬಾಯಿ ನೂರ್‌ತರ ಮಾತಾಡಿದ್ರೆ ನಮ್ಗೇನಾಗ್ಬೇಕು. ಆಡೋರ್ ಬಾಯಿ ಇಡ್ಕೋಳ್ಳೂ ಕಾಗ್ತದ? ಅಡ್ಕಳ್ಲಿ ಬುಡಿ.."

ಅಷ್ಟರಲ್ಲಿ ಗೌಡರಿಗೆ ಊಟಕ್ಕೆ ಬುಲಾವ್ ಬಂತು. ಬೀರಣ್ಣ ಗೌಡರ ಸಹಾನುಭೂತಿ ಗಿಟ್ಟಿಸಿದ್ದರಿಂದ ಆತನನ್ನೂ ಜೊತೆಯಲ್ಲಿ ಊಟಕ್ಕೆ ಕರೆದೊಯ್ದರು.

ತೆಳ್ಳಗಿನ ಬಿಸಿಬಿಸಿ ರಾಗಿಮುದ್ದೆ. ಹುರುಳಿಕಾಳು ಅರಿವೆಸೊಪ್ಪಿನ ಉಪ್‌ಸಾರು. ಮೂಗಿಗೆ ಅಡರುವ ಬೆಳ್ಳುಳ್ಳಿ ಖಾರದ ಘಮಘಮ. ಬೀರಣ್ಣ ಸಂಕೋಚಪಟ್ಟುಕೊಳ್ಳದೆ, ಚಪ್ಪರಿಸತೊಡಗಿದ. ಊಟದ ಮಧ್ಯೆ ದೇವೇಗೌಡರನ್ನು ಕೆಣಕಿ ರೇಗುವಂತೆ ಮಾಡಿದ.

"ಅಲ್‌ಕಣ್ ಗೌಡ್ರೆ. ನಮ್ ತರ್ಲೆ ತಿಪ್ನ ಯೋಗ್ತೆ ಏನು, ನಿಮ್ ಯೋಗ್ತೆ ಏನು? ಊರ್ನಲ್ಲಿ ಕುರುಕ್ಸೇತ್ರ ನಾಟ್ಕ ಅಂತ ಸುರು ಮಾಡ್ಕಂಡ್ರಪ್ಪ. ಮೇಸ್ಟ್ರು ಎಲ್ರ ಕೈಲೂ ಪದ ಏಳ್ಸಿ ಯಾರ್ಯಾರ್ಗೆ ಯಾವ್ ಪಾರ್ಟು ಅಂತ ಅಂಚ್ತಾ ಇರ್ಬೇಕಾದ್ರೆ, ಆ ಬೇಕೂಪ್ ನನ್‌ಮಗ ತಿಪ್ಪ 'ದುತರಾಸ್ಟ್ರನ್ ಪಾತ್ರ ನಮ್ ದೇವೇಗೌಡ್ರಿಗೆ ಚಂದಾಗ್ ಒಂದ್ಕೆಯಾಯ್ತದೆ!' ಅಂದ್ಬುಡೂದೆ! ನಂಗೆ ಮೈಯೆಲ್ಲ ಉರ್ದೋಯ್ತು ಗೌಡ್ರೆ. ನೀವೇನಾರ ಅಂದ್ಕಳಿ. ನಿನ್ ನಾಲ್ಗೆ ಸೀಳ್ತೀನಿ ಅಂತ ನಾನೂ ಕೊಸರ್ಕಂಡು ಎದ್ದೇಬುಟ್ಟೆ. ಚೆಳಪಳ್ಳೆ ಐಕ್ಳೆಲ್ಲ ನನ್ನ ಇಡ್ಕಳ್ದೆ ಓಗಿದ್ರೆ ನಿಮ್ ಕುರುಕ್ಸೇತ್ರ ಅಲ್ಲೇ ಆಗೋಗಿರೋದು ಗೌಡ್ರೆ..." ಎನ್ನುತ್ತ ಮತ್ತೊಂದು ತುತ್ತು ಗುಳಕ್ಕನೆ ನುಂಗಿದ.

"ನಮ್ ಜಗಳೇಸ ನಿಮಗೊತ್ತಲ್ಲ ಗೌಡ್ರೆ. ಬೋಕಿತಾಪತಿ ನನ್‌ಮಗ. ಅವಂದು ಒಂದೇ ಕಂಪ್ಲೇಂಟು. ನಮ್ ದರಮ್ ಸಿಂಗು ಆರಕ್ಕೇರ್ನಿಲ್ಲ ಮೂರಕ್ಕಿಳಿನಿಲ್ಲ ಅನ್ನೊವಂಗೆ

• ಗುಗ್ಗಪ್ಪ



ತುಲಾಬಾರ ಗಿಲಾಬಾರ ಮಾಡಿಸ್ಕಂಡು ಎಂಗೋ ರಾಜ್ಯಭಾರ ಮಾಡ್ತಿದ್ರಪ್ಪ. ಈ ಕುಮಾರಣ್ಣ ದೇವೇಗೌಡ್ರ ಮಾತ್ನೂ ಕೇಳ್ದೇನೆ ಈ ಇಟ್ಗೆ ಪಾರ್ಟಿ ಜೊತೇಲಿ ಸೇರ್ಕಂಡು ಇಂಗ್ ಮಾಡಿದ್ನಲ್ಲ, ನಮ್ ಗೌಡ್ರು ಮೊಕ ಎತ್ದಂಗ್ ಮಾಡ್ಬುಟ್ನಲ್ಲ ಅಂತ...''

ಗೌಡರು ಮುದ್ದೆ ಯಜ್ಞದಲ್ಲಿ ಮಗ್ನರಾಗಿದ್ದರು. ಮಾತು ಆಡಲೇಬೇಕಾದಾಗ ತೆಪ್ಪಗಿರುವುದು ಈ ಗೌಡರ ಜಾಯಮಾನ ಎಂಬುದು ಬೀರಣ್ಣನಿಗೆ ತಿಳಿಯದ ವಿಷಯವೇನಲ್ಲ.

ಬೀರಣ್ಣ ಗೌಡರತ್ತ ಬಾಗಿ ಕಣ್ಣು ಮಿಟುಕಿಸುತ್ತ ಚೇಷ್ಟೆಯ ದನಿಯಲ್ಲಿ ಹೇಳಿದ: ''ಐ ಬುಡಿ ಗೌಡ್ರೆ. ಇದ್ಕೆಲ್ಲ ತಲೆ ಕೆಡಿಸ್ಕಬ್ಯಾಡಿ. ಮಕ್ಳು ತಿಳಿದೆ ಏನೋ ತಪ್ ಮಾಡ್ತವೆ, ಅವ್ನೆಲ್ಲ ದೊಡ್ಡೋರು ಒಟ್ಟೀಗಾಕಬೇಕಪ್ಪ. ಇಷ್ಟಕ್ಕೂ ಕುಮಾರಣ್ಣ ಮಾಡಿದ್ದಾದ್ರೂ ಏನು ದೊಡ್ ತಪ್ಪು ಅಂತೀನಿ? ಅಳೇ ರಾಜ್ಯಬಾರ ಮುಂದ್ವರ್ದಿದ್ರೆ ಈಗಿರೋರೆಲ್ಲ ಮಂತ್ರಿ ಗಳಾಗಾಕಾಯ್ತಿತ್ತ? ಬಿಸಿರಕ್ತ, ನಾವೇ ಮನೆ ನಡಿಸ್ತಿವಿ ಅಂದ್ರೆ, ಮನೆ ಯಜ್ಮಾನ್ ಸಟೀಗ್ ದೇವ್ರಾಗಿ ತಲೆ ಒಡಿಸ್ಬೇಕಾಯ್ತದೆ. ಕೈ ಮೀರಿದ್ ಮಗನ್ನ ಹ್ನೂ ಒಗಪ್ಪ ನೀನೇ ಯಜಮಾನ್ಕೆ ಮಾಡು ಅನ್ನೂದೆ ಬುದ್ವಂತ್ಕೆ ಗೌಡ್ರೆ. ಏನಂತೀರಿ? ಈ ಮುಕ್ಕ ಬೀರಣ್ಣ ಇಂಗಂದ್ನಲ್ಲ ಅನ್ಕಬ್ಯಾಡ್ರಿ ಗೌಡ್ರೆ...''

ಊಟದ ನಂತರ ಗೌಡ್ರು ಆತ್ಮೀಯತೆಯಿಂದ ಬೀರಣ್ಣನ ಹೆಗಲಮೇಲೆ ಕೈಹಾಕಿ ನಡೆಯುತ್ತ ಮನೆಯ ಮುಂದೆ ನೆರಳಿನಲ್ಲಿ ಹಾಕಿದ್ದ ಆರಾಮಕುರ್ಚಿಯ ಕಡೆಗೆ ಬಂದರು. ಆಗ ಬೀರಣ್ಣ 'ಧೃತರಾಷ್ಟ್ರಾಲಿಂಗನ' ಪ್ರಕರಣ ನೆನೆದು ಒಳಗೇ ಬೆವರಿಹೋದ.

ಬೀರಣ್ಣ ಧೈರ್ಯದಿಂದ ವಟಗುಟ್ಟುತ್ತಲೇ ಇದ್ದ.

ಗೌಡರಿಗೆ ಯಾರದೋ 'ಜಂಗಮವಾಣಿ' ಕರೆಬಂತು. ತಮಗೇ ಕೇಳಿಸದಷ್ಟು ತಗ್ಗುದನಿಯಲ್ಲಿ ಮಾತಾಡಿದರು. ಒಂದೆರಡು ಪಿಸುನುಡಿಗಳು ಬೀರಣ್ಣನ ಕಿವಿಗೂ ಬಿದ್ದವು: ''ಜ್ವಾಕೆ ಕಣ್ಲಾ ಮಗ. ನೀ ಮಾತ್ರ ಯಾರನ್ನೂ ನಂಬ್ ಬ್ಯಾಡ! ಇಷ್ಟ್ ದಿನ ಎಂಗಿದ್ಯೋ ಅಂಗ್ಯೇ ಮುಂದವರಿಲಿ. ಬೇರೆ ಏನಾದ್ರೂ ಡೌಟಾದ್ರೆ ಫೋನ್ ಮಾಡು...''

ಆ ಜಂಗಮವಾಣಿ ಕರೆ ಕುಮಾರಣ್ಣನಿಂದಲೇ ಬಂದದ್ದು ಎಂದು ಬೀರಣ್ಣನಿಗೆ ಖಾತರಿಯಾಯಿತು. ಆದರೂ ನಮ್ ಗೌಡ್ರು ಇಂಗ್ಯಾಕೆ ಮಳ್ಳಾಟ ಆಡ್ತಾರೆ, ಅನ್ನುವುದು ಅರ್ಥವಾಗಲಿಲ್ಲ.

ಅವರ ಆಪ್ತ ಸಹಾಯಕ ಮತ್ತೊಂದು ಜಂಗಮವಾಣಿ ತಂದು ಅವರ ಕೈಗಿಡುತ್ತ 'ನಮ್ ಸಿಂಧ್ಯಾ ಸಾಯೆಬ್ರು...' ಎಂದ. ಗೌಡರು ಅವನತ್ತ ಕೆಂಗಣ್ಣು ಬಿಡುತ್ತ, ಅದೇ ವೇಳೆ ಯಾರಿಗೂ ಕೇಳಿಸದ ದನಿಯಲ್ಲಿ ಏನೋ ಉತ್ತರಿಸಿದರು. ಮತ್ತೆ ಒಂದೆರಡು ನಿಮಿಷದಲ್ಲಿ 'ಅಯ್ನೋರು ಮಾತಾಡ್ತಾ ಅವ್ರೆ' – ಎನ್ನುತ್ತ ಸಹಾಯಕ ಮುಂದೆ ಬಂದ. 'ಆ ಐಯ್ನೋರು ನಮ್ಮ ಎಂಪಿ ಪ್ರಕಾಶಪ್ನೋರು!' ಅಂದುಕೊಂಡ ಬೀರಣ್ಣ.

''ಲೋ ಬೀರಣ್ಣ... ನೀವು ಯಾರೂ ಈ ದೇವೇಗೌಡ ಇಂಗೆ ಭೂಮಿಗೆ ಇಳ್ದೋದ್ನಲ್ಲ ಅಂತ ತಲೆಕೆಡಿಸ್ಕಬ್ಯಾಡಿ. ಫೀನಿಕ್ಸ್ ಅಂತ ಒಂದ್ ಹಕ್ಕಿ ಕತೆ ಕೇಳಿದ್ದೀಯಾ?''

ಬೀರಣ್ಣ ಗಡದ್ದಾಗಿ ಮುದ್ದೆ ನುಂಗಿದ್ದರಿಂದ ನಿದ್ದೆ ಬರತೊಡಗಿತು.

''ಅದೆಲ್ಲ ನಂಗೇನ್ ಗೊತ್ತು ಗೌಡ್ರೆ. ಗೇಮೆ ಕಾಲ್ದಲ್ಲಿ ಕತೆಗಿತೆ ಅಂತ ಚಾವಡಿ ಕಟ್ಟೇಲ್ ಕೂತ್ಕಂಡು ಸೋಮಾರಿತನ ಮಾಡಿದ್ರೆ ಅಷ್ಟೇಯ. ನಮ್ಮಂಗಸ್ರು ನಮ್ಮ ಗತಿ ಕಾಣಿಸ್ತಾರೆ. ಈಗ ಅವಕ್ಕೆ ಬಾಯ್ಕೊಡುಕ್ಕಾದ್ದು ಗೌಡ್ರೆ. ನೀನು ಅಂದ್ರೆ ನಿಮ್ಮಪ್ಪ ಅಂತಾವೆ. ನಾನೇಳುದೇನಪ್ಪ ಅಂದ್ರೆ – ಯಾರೇ ಕೂಗಾಡಲಿ, ಊರೇ ಒರಾಡಲಿ – ಅಂತ ನಮ್ಮ ಅಣ್ಣೋರು ಪದ ಏಳಿರುವಂಗೆ, ನಿಮ್ ಪಾಡ್ಗೆ ತೆಪ್ಗಿರಿ ಗೌಡ್ರೆ. ಆಗಾಗ ಒಸಿ ಬೀಪಿ-ಗೀಪಿ ಚೆಕ್ ಮಾಡಿಸ್ಕಳಿ. ಮುದ್ದೆ ಮರೀಬ್ಯಾಡಿ. ಹುಡುಗ್ರು ಮೆಜಾರ್ಟಿಗೆ ಬಂದವೆ. ಎಂಗೋ ನಡಿಸ್ಕಂಡು ಒಯ್ತವೆ! ಬತ್ತೀನಿ ಗೌಡ್ರೆ... ಜ್ವಾಪಾನ. ಸುಮ್ನೆ ದಿಲ್ಲಿ ಗಿಲ್ಲಿ ಅಂತ ಒಂಟ್‌ಬುಡ್‌ಬ್ಯಾಡಿ. ತೆಪ್ಗೆ ಇಲ್ಲೇ ಇರಿ...''

ಮಾತಿನ ಮಧ್ಯೆ ಗೌಡರಿಗೆ ಏನಾಯಿತೋ ಏನೋ. ಅತ್ತಕಡೆ ತಿರುಗಿ ಗಳಗಳ ಅಳತೊಡಗಿದರು. ಬೀರಣ್ಣನಿಗೆ ಗಾಬರಿಯೋ ಗಾಬರಿ!'' ಅಯ್ಯೋ ಅತ್ಲಾಗ್ ಬುಟ್ಟಾಕಿ ಗೌಡ್ರೆ! ಇಂಗೆ ಅಳುವಂತದ್ದೇನಾಯ್ತು? ನೀವು ಮನೆಗೆ ಇರಿಯೋರಪ್ಪ! ನೀವೇ ಇಂಗ್ ಅಳ್ತಾ ಕುಂತ್ಕಂಡ್ರೆ ಮನೆ ಎಂಗ್ ನಡೀಬೇಕು? ಒಸಿ ಸಮಾಧಾನ ಮಾಡ್ಕಳ್ಳಿ. ಈ ಸಮೆದಲ್ಲಿ ನಮ್ ತಿಪ್ಪ, ಈರಾಂಜಿನಿ ಯಾರಾರೂ ನಿಮ್ ನೋಡಿದ್ರೆ ಮುಗ್ದೋಯ್ತು ಕತೆ. 'ನಮ್ಮುಡುಗ್ರ ಇಂಗ್ ಮಾಡ್ಬುಟ್ರಲ್ಲ' ಅಂತ ಗೌಡ್ರು ಸುಮ್ನೆ ತಲೆಮ್ಯಾಲೆ ಬಟ್ಟೆ ಆಕಂಡು ಅಳ್ತಾ ಕೂತವ್ರೆ ಅಂತ ಪುಕಾರ್ ಮಾಡ್ತಾರೆ...''

ಬೀರಣ್ಣ ಕನವರಿಸಿದ್ದನ್ನು ಕೇಳಿಸಿಕೊಂಡವ

ಗುಗಪ್ಪ
ಗೊಂದಲಪುರ

## ತೆಂಕಣಭಾಮೆ

ಕಾಕಡಾ, ನಮ್ಮ ಬಯಲು ಸೀಮೆಯ ಹೂವು
ಹೆಸರಿನಲೂ ಮೃದುವಿಲ್ಲ, ಮೈಯೂ ಕೋಮಲವಲ್ಲ
ರೂಕ್ಷ ಬೇಸಿಗೆಯಲೂ ಬದುಕಿ ನಸುನಗುವ ರೂಹು
ಮಣ್ಣಗುಣಕನುಸಾರಿ ಕಲ್ಲರಳಿ ಹೂವಾದ ಗಟ್ಟಿ ಚೆಲುವು

ಮಲ್ಲಿಗೆಯ ಮೇಲೆಷ್ಟೊಂದು ಕಥನಗಳು ಕಾವ್ಯಗಳು
ಆ ಕುಸುಮನಾಯಕಿಯ ಮುಖದ ಭೋಪರಾಕಿನಲಿ
ಹರಿದವೆಷ್ಟೊಂದು ಪಾತರಗಿತ್ತಿ ಬಣ್ಣ ತೇರುಗಳು
ಕೇಳುವವರೇ ಇಲ್ಲ, ಈ ನಮ್ಮ ಬಯಲುಸೀಮೆಯ ಹೆಣ್ಣ
ಕಷ್ಟದಲೂ, ನಷ್ಟದಲೂ, ಕೊರತೆ ನೀರಿನಲೂ
ಕೋಟಲೆಯ ಮೆಟ್ಟಿದೀ ದ್ರಾವಿಡೆಯ ಉರುಟುಗಣ್ಣ

ನಸುಹಸಿರ ದೇಟ ತುದಿಯಲ್ಲಿ ಬಿಚ್ಚಿದಂತಿದೆ ಬಿಳಿಗೊಡೆಯು
ಐದು ಹರಳಿನ ಬೇಸರಿಯ ಹಾಗೆ ಸ್ಫುಟವಾದ ತಿಲಕದಳವು
ತಿರುತಿರುಗಿ ಸೆಳವಂಥ ಗಂಧ ಪಾತ್ರೆಯಿರದಿದ್ದರೇನು
ಕಾಮಕಸ್ತೂರಿಯನೇ ಜೀವ ಸದಾ ನೆಚ್ಚುವುದೇನು
ಬಾಡಿಗೆಯ ಬೆಡಗಿನಲಿ ಚಂದ್ರಾಮ ಕುಲುಕಿ ನಕ್ಕಂತಲ್ಲ
ಈ ಪುಷ್ಪಗುವರಿಯ ಮೊಗದ ಕಳೆ ಕೊಪ್ಪರಿಗೆ ಬೆಲ್ಲ

ನಡುಬಿದ್ದ ನಯನಾರಿಯಂತಿವಳು ಬಳುಕುವುದಿಲ್ಲ
ಕಂಡ ಮರಗಳನ್ನೆಲ್ಲ ತಬ್ಬಿ ಹಿಡಿಯುವುದಿಲ್ಲ
ಧೂಳುನೆಲ ಗುದ್ದುತ್ತ ಜಿದ್ದಿನಲ್ಲಿ ಹೋರಾಡಿ
ಜಿಗುಟಾದ ಎದೆಕಟ್ಟು ತೋಳು ತೊಡೆ ಒರಟು
ಬೇರು ನೆಟ್ಟಗೆ ಇಳಿಸಿ ಹೊರದಟ್ಟ ಪೊದೆಯಾಗಿ
ಹಸಿರು ಕಕ್ಕುವಳಿವಳು ಜೊಂಪೆ ಕವಲಾಗಿ

ಬಿರುಮೊಗ್ಗ ಸುರಿಸುವಳು ಮೈಯ್ಯ ತುಂಬ
ಹಾಲುಹನಿಯಿಟ್ಟಂತೆ ತೋಟಸಾಲಿನ ತುಂಬ
ತುಂಬುದೋಳಿನ ತೆರದ ದುರುದುಂಡು ಮಾಲೆ ನಡುವೆ
ಪಚ್ಚೆ, ಕನಕಾಂಬರ ದಿಂಡುಕಟ್ಟಿದರದೇ ಅಸಲಿ ಒಡವೆ
ಮುಡಿದ ಹೆರಳಿಗೂ ತಳೆದ ಕೊರಳಿಗೂ ಸದಾ ಕ್ಷೇಮ
ಹಗುರಾದ ಹೂವಿದು ಸುರ ಸುಂದರೀ ತೆಂಕಣದ ಭಾಮ

ಜೀವನದಿಯೆಂದರೇನೆಂದು ಬರಿ ಓದಿ ತಿಳಿದವರು
ಬಯಲು ಸೀಮೆಯ ನಾವು ಬರ ಶ್ರೀಮಂತರು
ನಮ್ಮ ಬೊಗಸೆಗೆ ಬೇಡ ಅತಿ ವಿನಯವು
ಇರಲಿ ಕಾವಿನಲ್ಲೂ ಸ್ನೇಹ ನಲುಗದ ಕಾಕಡದ ಹೂವು.



ಲಲಿತಾ ಸಿದ್ದಬಸವಯ್ಯ
ಚಿನ್ಮಯಿ ಪ್ರಕಾಶನ, ನಂ. ೫೨೧೬, ೨ನೇ ಕ್ರಾಸ್, ಅಶೋಕ ನಗರ
ತುಮಕೂರು - ೫೭೨ ೧೦೩

# ಸಂಕರಮೂರ್ತಿ



ನನ್ನ ಮೈಮೇಲಿನ ಬಟ್ಟೆಯ ಹೆಸರು
ಶರಟು
ಇದರ ಗುಂಡಿ ಯಾರು ಮಾಡಿದರೋ
ಇದರ ದಾರ ಯಾವ ಮರದ ನಾರೋ
ಇದನ ಯಾರು ನೇದರೋ
ಇದು ನನ್ನ ಅಳತೆಗೆ ಹೊಲೆದ ಶರಟು

ನಾನೂ ಹೀಗೇ ಶರಟಿನ ಹಾಗೇ
ಅಜ್ಜಿಯ ಕಣ್ಣು, ಅಮ್ಮನ ಹುಬ್ಬು
ಸಂಪಿಗೆ ಮೂಗು ಕೊಕ್ಕರೆ ಉಗುರು
ತಾತನ ಹೆಸರು ಪರಂಗಿ ಬಣ್ಣ...
ಹತ್ತೆಂಟರ ಸಂಕರ; ಸಂಕರ ಮೂರ್ತಿ.

'ಇದು ನನ್ನ ಬೀಜಾನೇ ಏನೇ'
ನನ್ನ ನೋಡಿ ಅಪ್ಪ ಅಮ್ಮನನ್ನು ಕಿಚಾಯಿಸುತ್ತಾನೆ
ಯಾರು ಯಾರ ಬೀಜವೋ ಕಾಣೆ
ನಾನಂತೂ ನಾನಾಗಿದ್ದೇನೆ.
ಯಾರಾದರೂ ರೇಗಿಸಲೆಂದೇ
ಏನಯ್ಯಾ ಸಂಕರ ಮೂರ್ತಿ ಎಂದರೆ
ಖಂಡಿತಾ ಅವಮಾನವಿಲ್ಲ ನನಗೆ
ನಾನು ಸಂಕರ ಮೂರ್ತೀನೇ

ಎಂದೂ ಕತ್ತಿ ಮಚ್ಚಿನ ಜೋಡಿ ಆಡಲಿಲ್ಲ ಅವರಂತೆ
ಕತೆ ಕವಿತೆಗಳ ಜೋಡಿ ಆಡಿ ಬೆಳೆದೆ
ಎಲ್ಲೂ ಉಳಲಿಲ್ಲ, ಬಿತ್ತನೆ ಮಾಡಲಿಲ್ಲ ಇವರಂತೆ
ನನ್ನಾನೆ ಬೆಳೆ ಬೆಳೆದು ನಿರ್ವೀರ್ಯವಾಗಿದ್ದೇನೆ
ಇದು ಒಳಿತೇ ಎನ್ನಿಸಿದೆ ಇವಳಿಗೆ
ಸ್ತ್ರೀವಾದ ತಪ್ಪಿಯೂ ಸುಳಿದಿಲ್ಲ ಬಳಿಗೆ
ಅವಳ ಕಯ್ಯಲ್ಲಿ ಕೋಟು ನನ್ನ ಕಯ್ಯಲ್ಲಿ ಸೌಟು.

ನಮ್ಮ ಮನೆಗೂ ಒಂದು ಹಿತ್ತಿಲಿದೆ ಎಲ್ಲರ ಹಾಗೆ
ಬಚ್ಚಲ ನೀರು ದಿನಾ ಹರಿಯುತ್ತದೆ ಹಿತ್ತಿಲ ಮರಕ್ಕೆ
ಅದರ ಎಲೆ ಎಲೆಗೂ ಕಾಮನ ಬಿಲ್ಲಿನ ಬಣ್ಣ
ಸದಾ ತೂಗುತ್ತವೆ ಒಂದೇ ಮರದಲ್ಲಿ
ಹಾಗಲ ಬೇವು ನಿಂಬೆ ಹಲಸು ಮಾವು
ಟೊಂಗೆ ಟೊಂಗೆಯಲಿ ತರಾವರಿ ಕಾಯಿ ಹಣ್ಣು ಹೂವು.

ನಮಗೂ ಒಬ್ಬ ಮೊಮ್ಮಗ ಇದ್ದಾನೆ ನಿಮ್ಮ ಹಾಗೆ
ಬಹುಮಾನ ಬಂದಿದೆ ಅವನು ಕಾನ್ವೆಂಟಿಗೆ ಬರೆದ ಚಿತ್ರಕ್ಕೆ
ಮ್ಯಾಪುಗಡಿಗಳು ಕಲಸಿಹೋಗಿವೆ ಅಡ್ಡ ತಿಡ್ಡ ರೇಖೆಗಳಲ್ಲಿ

ಅಟ್ಲಾಸು ಸೀಳಿ ಬೆಳೆದ ಕೆಂಚಣ್ಣ ಕರಿಯಣ್ಣರಿಗೆ
ಇಪ್ಪತ್ತು ಕೈಗಳು ಹತ್ತು ತಲೆಗಳು
ಅಲ್ಲೆಲ್ಲೊ ಮೂಲೆ ಮಡುಕಲ್ಲಿ ಸ್ವಿಚ್ಚುಗಳು
ಒಂದೊಂದು ತಲೆಗು ತರ ತರದ ಕಣ್ಣು ಮೂಗು
ಒಂದೊಂದು ಕೈಗು ತರ ತರದ ವಾಚು ಪೆಪ್ಸಿ
ಒಂದೊಂದು ಕಾಲಿಗೂ ಹೆಣೆದ ಪುಡಿ ಬೇರು ಗಡಿರೇಖೆ
ಒಂದೊಂದು ನೂರು ನೂರೆಂಟರ ಸಂಕರ ಲೋಕ

ಇಂದಿನ ಆದಿಯಾದಿಯ ಬಲ್ಲವರಾರು ?
ನಾಳಿನ ಗಾಳಿಯ ಸೋಸುವರಾರು ?
ಸಾಗರವ ಬಲೆಹಾಕಿ ಮೀನುಗಳಂತೆ
ನದಿಗಳ ಜರಡಿ ಹಿಡಯಲುಬಹುದೇ ?

ಉರಿಗಾಯಗಳಿಗೆ ಉಪ್ಪ ಸುರಿಯಲು ಬಾರದು.
ನಮ್ಮಲ್ಲೀಗ ಏನೇನಿದೆಯೋ ಅದೆಲ್ಲವೂ ನಮ್ಮದೇ.

ರಾಮಲಿಂಗಪ್ಪ ಟಿ. ಬೇಗೂರು
ಉಪನ್ಯಾಸಕರು, ಸರ್ಕಾರಿ ಬಾಲಕರ ಮಹಾವಿದ್ಯಾಲಯ, ಕೋಲಾರ - ೫೬೩ ೧೦೧

# ಔಟ್ ಆಫ್ ಪ್ರಿಂಟ್

**(ಪ್ರತಿಗಳು ಮುಗಿದಿವೆ...)**

ಕೆಲವು ವರ್ಷಗಳ ಹಿಂದೆ ಪೇಪರಿನೊಳಗ ಒಂದು ಜಾಹೀರಾತು ನೋಡಿದೆ. ಜಾಹೀರಾತು ಹೀಂಗ ಇತ್ತು: ''ಪುಸ್ತಕ ಬೇಕಾಗಿದೆ, ಓದಲು ಅಥವಾ ಕೊಳ್ಳಲು. ಪುಸ್ತಕದ ವಿವರ ಹೀಗಿದೆ...'' ವಿವರ ಕೊಟ್ಟು ಸಂಪರ್ಕಿಸುವ ಟೆಲಿಫೋನ್ ನಂಬರ ಕೊಟ್ಟಿದ್ದರು. ನನಗ ಈ ಜಾಹೀರಾತು ಓದಿ ಆಶ್ಚರ್ಯ ಆಯಿತು. ಈ ಜಾಹೀರಾತು ಹೆಚ್ಚು ಕಡಿಮೆ ''ಕಾಣೆಯಾಗಿದೆ, ಕಾಣೆಯಾಗಿದ್ದಾರೆ'' ಅನ್ನೋ ಹಾಗೆ ಇತ್ತು. ನಾನು ಕುತೂಹಲಿ ಆಗಿ ಅವರಿಗೆ ಫೋನ ಮಾಡಿ, ''ನೀವು ಜಾಹೀರಾತು ಮಾಡಿದ ಪುಸ್ತಕಾ ಯಾಕ ಬೇಕು ? ಅಂಥದ್ದು ಏನಿದೆ ನಿಮಗೆ ?'' ಅಂತೆಲ್ಲಾ ಪ್ರಶ್ನೆ ಕೇಳಿದ್ದಕ್ಕ ಅವರು ''ಅದು ನನ್ನ ಜೀವನಾನ ಬದಲಿ ಮಾಡತು. ಅದು ನನಗ ದಾರಿದೀಪ ಆಗಿತ್ತು. ಅದನ್ನ ಇನ್ನೊಮ್ಮೆ ಓದಬೇಕೆಂದರ ಎಲ್ಲೂ ಸಿಗವಲ್ಲು. ಔಟ್ ಆಫ್ ಪ್ರಿಂಟ್ ಆಗಿದೆ ಅಂತೆ. ನಿಮ್ಮ ಹತ್ತಿರ ಇದೆಯಾ ?'' ಅಂತ ಕೇಳಿದರು. ನಾನು, ''ನನ್ನ ಹತ್ತಿರ ಅದರ ಇಂಗ್ಲಿಷ್ ಪ್ರತಿ ಇದೆ, ನೀವು ಕೇಳಿರುವ ಕನ್ನಡ ಅನುವಾದ ಇಲ್ಲಾ. ನಿಮ್ಮ ಓದೋ ಅಭಿರುಚಿ ನೋಡಿ ನಿಮಗ ಫೋನ್ ಮಾಡಿದೆ'' ಅಂತ ಹೇಳಿ ಫೋನ ಇಟ್ಟೆ.

ಅವರು ಕೇಳಿದ ಪುಸ್ತಕಾ 'ಪ್ರವಾದಿ'. ಅದು ಖಲೀಲ ಗಿಬ್ರಾನರ 'ದಿ ಪ್ರೊಫೆಟ್' ಇಂಗ್ಲಿಷ್ ಪುಸ್ತಕದ ಕನ್ನಡ ಅನುವಾದ. ನನಗೂ ಒಂದಿಷ್ಟು ನೆನಪ ಇತ್ತು. ನಾನು ಮತ್ತ ಎಲ್ಲಿಯೂ ಆ ಪುಸ್ತಕ ನೋಡಿಲ್ಲ. ಅದು ನಿಜವಾಗಿಯೂ ಔಟ್ ಆಫ್ ಪ್ರಿಂಟ ಆಗಿರಬೇಕು. ಯಾವುದೇ ಪುಸ್ತಕಾ ಎರಡನೆಯ ಮೂರನೆಯ ಹೀಗೆ ಅನೇಕ ಮುದ್ರಣ ಕಂಡು ಅದು ಜನಪ್ರಿಯವಾಗಿತ್ತು. ಅಂದರ ಅದಕ್ಕ ಇಂಗ್ಲಿಷಿನೊಳಗ ''ಬೆಸ್ಟ ಸೆಲ್ಲರ್'' ಅಂತ ಕರೀತಾರ. ಇಲ್ಲಾ ಅಂದರ ಮೊದಲೆ ಹಾಗೂ ಕೊನೆಯ ಮುದ್ರಣ ಕಂಡು ಮಾಯ ಆಗಿಬಿಡ್ತದ. ಒಂದು ಅತ್ಯುತ್ತಮ ಪುಸ್ತಕಾ ವಿರಳ ಆಯಿತು ಅಂದ್ರ ಅದು ಸಿಗೋದು ಕಠಿಣ. ನಮ್ಮ ಸ್ನೇಹಿತರೊಬ್ಬರು ಇಂಥಾ ಪುಸ್ತಕಗಳನ್ನ ಹುಡುಕತಿರತಾರ. ಪ್ರತಿಗಳು ಮುಗಿದಿವೆ, ತೀರಿವೆ. ಮರು ಮುದ್ರಣ ಇಲ್ಲ ಅಂತ ಏನಾದರೂ ಅವರಿಗೆ ಕಾಣತು ಅಂದ್ರ ಸಾಕು ಅದನ್ನ ಹುಡುಕಲಿಕ್ಕೆ ಶುರುಮಾಡಿದರು ಮತ್ತು ಅವರ ಭಂಡಾರದೊಳಗ ಅಗದಿ ಹಳೇ ಸಿಗಲಾರದ ಪುಸ್ತಕಗಳು ಬಹಾಳ ಅದಾವು.

ನನಗ ಒಮ್ಮೆ ಹಿಂದಿ ಲೇಖಕರಾದ ಭಗವತಿ ಶರಣ ವರ್ಮಾ ಅವರ ಕಥಿ 'ಉನ್ಮಾದ' ಬೇಕಾಗಿತ್ತು. ನಾನು ಈ ಮಹಾಶಯರಿಗೆ ಕೇಳಿದೆ. ಅದು ಇದೆ ಅಂದರು ಅವರು. ಕಥಿ ಪುಸ್ತಕಾ ಕೊಡಲಿಲ್ಲ ಅದರ ಜೆರಾಕ್ಸ್ ಪ್ರತಿ ಕೊಟ್ಟರು. ಹಳೇ ಪುಸ್ತಕಾ ಅದರಲ್ಲೂ ಔಟ್ ಆಫ್ ಪ್ರಿಂಟ್ ಇದ್ದದ್ದು ಯಾರಿಗೂ ಕೊಡಾಂಗಿಲ್ಲ, ನೋಡಲಿಕ್ಕೆ ಸಹಿತ ಕೊಡಾಂಗಿಲ್ಲ. ನನಗೂ ಮೊದಮೊದಲ ಹಳೇ ಪುಸ್ತಕದ ಅಂಗಡಿ ಅಡ್ಡಾಡೋ ಚಟಾ ಬಹಾಳ ಇತ್ತು. ಇಂಥಾ ಅಂಗಡಿ ಮಾಲೀಕರಿಗೆ ಪುಸ್ತಕದ ಮಹತ್ವ, ವಿಷಯ, ಲೇಖಕರು ಯಾವುದೂ ಗೊತ್ತ ಇರಾಂಗಿಲ್ಲ, ಬರೆ ಅದರ ಬೆಲೆ ಅಷ್ಟು ಅವರಿಗೆ ಗೊತ್ತ ಇರತದ. ಒಮ್ಮೆ ನಾನು ಹಳೇ ಪುಸ್ತಕಗಳ ಮ್ಯಾಲೆ ಕಟ್ಟುಹಾಕತಾ ಇದ್ದಾಗ ಖಲೀಲ ಗಿಬ್ರಾನರ 'ದಿ ಪ್ರೊಫೆಟ್' ಅನ್ನೋ ಪುಸ್ತಕಾ ಕಂಡಿತು. ನಾನು ಅದನ್ನ ತೊಗೊಂಡು ಅದರ ಬೆಲೆ ಅಂಗಡಿಯವನಿಗೆ ಕೇಳಿದೆ. ಅವಾಂ ಕೈಯಾಗ ತೊಗೊಂಡು ಅತ್ಲಾಗ ಇತ್ಲಾಗ ಪುಟಾ ಹೊರಳಿಸಿದಾ. ಅದರೊಳಗ ಖಲೀಲ ಗಿಬ್ರಾನರೇ ಬಿಡಿಸಿದ ಕೆಲವು ನಗ್ನ ಚಿತ್ರಗಳು ಇದ್ದವು. ಅವುನ್ನ ನೋಡಿ ಮಾಲೀಕ ಅದರ ಬೆಲೆ ಎರಡು ನೂರು ರೂಪಾಯಿ ಅಂತ ಹೇಳಿದಾ. ನಾನು ಬೇಡ ಅಂತ ಹೇಳಿ ಕೆಳಗಿಟ್ಟೆ. ಬಹುಶಃ ಆತ ಆ ನಗ್ನ ಚಿತ್ರಗಳನ್ನ ನೋಡಿ ಇದೊಂದು ಕಾಮಶಾಸ್ತ್ರದ ಪುಸ್ತಕ ಇರಬಹುದೆಂದು ತಿಳಿದಿದ್ದನೋ ಏನೋ. ಸ್ವಲ್ಪ ಹೊತ್ತು ಮತ್ತೆ ಇತರ ಪುಸ್ತಕಗಳ ಮೇಲೆ ಕಣ್ಣು ಹಾಯಿಸಿದಾಗ ಅದೇ ಹೆಸರಿನ ಇನ್ನೊಂದು ಪುಸ್ತಕ ನೋಡಿದೆ. ಅದನ್ನೂ ಕೈಗೆತ್ತಿಕೊಂಡು ನೋಡಿದಾಗ ನಗ್ನ ಚಿತ್ರಗಳು ಇರಲಿಲ್ಲ. ಅದನ್ನು ಆತ ಇಪ್ಪತ್ತು ರೂಪಾಯಿಗಳಿಗೆ ಕೊಟ್ಟ. ಬಹುಶಃ ನಗ್ನ ಚಿತ್ರಗಳಿದ್ದ 'ದಿ ಪ್ರೊಫೆಟ್' ಪುಸ್ತಕ ಬಹಳ ದಿನಗಳವರೆಗೆ ಮಾರಾಟವಾಗಲಿಕ್ಕಿಲ್ಲ. ಈ ಪುಸ್ತಕಾ ಔಟ್ ಆಫ್ ಪ್ರಿಂಟ ಆಗಿದ್ದರೆ ಇಲ್ಲಿ ಬಂದು ಖರೀದಿ ಮಾಡಿರಬೇಕು.

ಸುದೈವದಿಂದ ನಮ್ಮ ಹಳೇ ತೀರಾ ಹಳೇ ಪುಸ್ತಕಗಳಲ್ಲಿ ಚಿತ್ರಗಳು ಇರೋದು ಅತಿ ವಿರಳ. ವಾತ್ಸ್ಯಾಯನನ ಕಾಮ ಸೂತ್ರದ ಹಳೇ ಪ್ರತಿಗಳಲ್ಲಿ ಯಾವ ಚಿತ್ರಗಳೂ ಇಲ್ಲ, ಅದೇ ಹೆಸರಿನ ಈಗಿನ ಪ್ರಕಟಣೆಯಲ್ಲಿ ನೂರಾರು ಚಿತ್ರಗಳನ್ನು ನೋಡಬಹುದು. ಹಳೇ ಪುಸ್ತಕದೊಳಗ ವಿಷಯ ಭರ್ತಿ ಇರತದ. ಜನಾ ಓದಲಿಕ್ಕೆ ಖರೀದಿ ಮಾಡತಿದ್ದರು. ಈಗ ಜನಾ ನೋಡಲಿಕ್ಕೆ ಖರೀದಿ ಮಾಡತಾರ. ಒಂದು ಹಳೇ ಪುಸ್ತಕದ ಚಹರೆ ಪಟ್ಟಿ ಅಂದ್ರ ಅದರ ಹಾಳಿ ಕಂದು ಬಣ್ಣಕ್ಕ ತಿರಗಿರತಾವು. ಪೇಜು ಮಡಚಿದರ ಹರಿತಿರತಾವು. ಬೈಂಡಿಂಗ ಹಾಳಾಗಿರತದ. ಹುಳಾ ಹತ್ತಿರತಾವು. ಇಷ್ಟ ಅಲ್ಲಾ, ಯಾವ ಪುಸ್ತಕಾ ಎಲ್ಲೂ ಸಿಗೋದಿಲ್ಲೋ ಅದು ಹಳೇ ಪುಸ್ತಕಾ ಅನಿಸಿ ಕೊಳ್ಳಬಹುದೇನೋ. ಹಿಂದಿನ, ಅಂದರ ಐದಾರು ವರ್ಷಗಳ ಹಿಂದ ಒಬ್ಬ ಮಹಾಶಯರು ತಮ್ಮಲ್ಲಿ ಇದ್ದ ಅನೇಕ ವಿರಳ ಪುಸ್ತಕಗಳ ಪ್ರದರ್ಶನ ಮತ್ತ ಮಾರಾಟ ಇಟ್ಟಿದ್ದರು. ಪುಸ್ತಕಗಳನ್ನ ಅತ್ಯಂತ ಕಾಳಜಪೂರ್ವಕ ಇಟ್ಟಿದ್ದರು. ಇವು ಹಳೇವು ಅಂತ ಹೇಳಲಿಕ್ಕೆ ಅವುಗಳ ವಿಷಯ, ಅವುಗಳ ಆಕಾರ, ಪ್ರಿಂಟ್ ಆಗಿರೋ ಶೈಲಿ, ಅಕ್ಷರಗಳ ಆಕಾರ ಮತ್ತ ಬೆಲೆ, ಇವು ಸಾಕು ಆಗಿತ್ತು. ಆದರ ಈ ಮಹಾಶಯರು ಹಳೇ ಬೆಲೆಯನ್ನ ಕಾಟ್‌ಹಾಕಿ ಹೊಸ ಬೆಲೆಯನ್ನ ವಿಪರೀತ ಏರಿಸಿ ಬರದುಬಿಟ್ಟಿದ್ದರು. ಹೀಂಗಾಗಿ ಅವುನ್ನ ಬರೆ ನೋಡೋದು ಆಯಿತು. ಖರೀದಿ ಮಾಡಲಿಕ್ಕೇ ಆಗಿಲಿಲ್ಲಾ. ಕೆಲವು ಜನಾ ಅಭ್ಯಾಸಿಗಳು ಅವುಗಳನ್ನ ಖರೀದಿ ಮಾಡತಾ ಇದ್ದರು. ವಿಜ್ಞಾನ ವೈದ್ಯಕೀಯ ಮುಂತಾದ ವಿಷಯಗಳ ಯಾವು ಹಳೆಯ ಪುಸ್ತಕಗಳು ಇರಲಿಲ್ಲ, ಬರೀ ಇತಿಹಾಸ, ಕಲೆ, ಸಾಹಿತ್ಯ ಕುರಿತಾನೇ ಹಳೇ ಪುಸ್ತಕಗಳು ಇದ್ದವು. ಅವುಗಳಲ್ಲಿ ಸಾಧಾರಣ ಎಲ್ಲವೂ ಔಟ್ ಆಫ್ ಪ್ರಿಂಟ ಆಗಿದ್ದವು. ಒಂದ ಪುಸ್ತಕಾ ಅತ್ಯಂತ ಮಹತ್ವದ್ದು ಆದಾಗ ಅದು ಔಟ್ ಆಫ್ ಪ್ರಿಂಟ ಆಗಲಿಕ್ಕೆ ಸಾಧ್ಯ ಅದನs ? ಖುರಾನ, ಗೀತಾ, ಬೈಬಲ್ ಇವು ಪ್ರಾಚೀನ ಧಾರ್ಮಿಕ ಗ್ರಂಥಗಳಾಗಿದ್ದರೂ ಅವು ಔಟ್ ಆಫ್ ಪ್ರಿಂಟ್ ಆಗಲಿಕ್ಕೆ ಸಾಧ್ಯ ಅದನs ? ಇಂಥಾ ಪುಸ್ತಕಗಳು ಹಳೇವು ಅಂತ ಹೇಳಿ ಹಳೇ ಪುಸ್ತಕದ ಅಂಗಡಿಯೊಳಗ ಹುಡುಕಲಿಕ್ಕೆ ಸಾಧ್ಯ ಇದನs ? ಅವು ಯಾವಾಗಲೂ ಹೊಸಾವು, ಚಿರನೂತನ.

ಜನಪ್ರಿಯತೆ ಹೆಚ್ಚಾಗಿ ಆಯಿತು ಅಂದ್ರ ಒಂದ ಪುಸ್ತಕಾ ಎಲ್ಲಾರ ಕಣ್ಣಾಗ ಚುಚ್ಚತಿರತೈತಿ (ಓದುವವರ ಕಣ್ಣಾಗ). ಅವಾಗ ಮರುಮುದ್ರಣ ಸಾಧ್ಯ ಆಗಬಹುದು. ಒಮ್ಮೆ ಕಣ್ಮರೆ ಆದ ಪುಸ್ತಕಾ ಪುನಃ ಮುದ್ರಿಸಬೇಕು ಅಂದರ ದೊಡ್ಡ ಯೋಜನಾನs ಬೇಕು. ವಿಶ್ವಕನ್ನಡ ಸಮ್ಮೇಳನ ನಡೆದಾಗ ಹಲವಾರು ಕನ್ನಡದ ಜನಪ್ರಿಯ ಗ್ರಂಥಗಳನ್ನು ರಾಜ್ಯ ಸರಕಾರದವರು ಮರುಮುದ್ರಣ ಮಾಡಿದರು. ಅದೊಂದು ಕಾಟಾಚಾರಕ್ಕ ಮಾಡಿಧಾಂಗ ಆಗಿತ್ತು. ಆದರೂ ಕೆಲವು ಹಳೇ ಪುಸ್ತಕಾನ್ನ ಮತ್ತ ನೋಡಿಧಾಂಗ ಆತು. ಈ ಸಾರೇನೂ ಸುವರ್ಣ ಸಂಭ್ರಮದೊಳಗ ರಾಜ್ಯ ಸರಕಾರ ಮತ್ತ ಕೆಲವು ಜನಪ್ರಿಯ ಕನ್ನಡ ಪುಸ್ತಕಗಳ ಮರುಮುದ್ರಣ ಮಾಡತಾದ ಅಂತ ಸುದ್ದಿ ಅದ.

ಹಳೇ ಪುಸ್ತಕಗಳನ್ನ ಹುಡುಕೋದು ಅತ್ಯಂತ ತಾಳ್ಮೆ ಸಂಯಮ ಇದ್ದವರಿಗೇ ಸಾಧ್ಯ. ನಮಗೆ ಬೇಕಾದ ಪುಸ್ತಕಾ ಹುಡುಕಾತ ಹೋಗಿ ಮತ್ತ ಯಾವುದಾದರೊಂದು ಒಳ್ಳೇ ಪುಸ್ತಕಾ ನಮ್ಮ ಕಣ್ಣಿಗೆ ಬೀಳೋ ಸಂದರ್ಭನೂ ಬರ್ತಾವು. ನಮಗ ಬೇಕಾದ ಪುಸ್ತಕಾನ್ನ ಹುಡುಕಬೇಕಾದರ ಈ ಕೆಲವು ಸಲಹೆಗಳನ್ನ ನೀವು ನೋಡಬಹುದು.

ಮೊದಲು ಆ ಪುಸ್ತಕದ ಹೆಸರು, ಲೇಖಕರು, ಪ್ರಕಾಶಕರು ಇವರೆಲ್ಲರ ಸರಿಯಾದ ವಿಳಾಸ, ಕಾಪಿರೈಟ ಮುಂತಾದ ವಿವರಗಳನ್ನ ಸಂಗ್ರಹಿಸಬೇಕು. ಜೊತೆಗೆ ಮೊದಲ ಸಾರೆ ಆದ ಪ್ರಕಾಶನದ ಇಸ್ವಿ ಇರಲೇಬೇಕು. ಈ ಎಲ್ಲಾ ಮಾಹಿತಿ ಬಹುಶಃ ನಮ್ಮೂರಿನ ಹಳೇ ಲೈಬ್ರರಿಯೊಳಗ ಸಿಕ್ಕರೂ ಸಿಗಬಹುದು.

ನಿಮ್ಮೂರಿನ ಪುಸ್ತಕದ ಅಂಗಡಿಯೊಳಗ ಇರದಿದ್ದರ ಬೇರೆ ಊರಿಗೆ ಹೋದಾಗ ಅಲ್ಲಿ ಹಳೇ ಪುಸ್ತಕದ ಅಂಗಡಿ ಗಳಿಗೆ ಹೋಗಿ ನೋಡಬಹುದು. ಬೆಂಗಳೂರಿಗೆ ಬಂದರ ಮಲ್ಲೇಶ್ವರಂ, ಜಯನಗರ, ಅವೆನ್ಯೂ ರಸ್ತೆ, ಶಿವಾಜಿನಗರ, ಚೆನ್ನೈಗೆ ಹೋದರ ಅಲ್ಲಿಯ ಮೋರ್ ಮಾರ್ಕೆಟ್ (ಈಗ ಅದು ಬೇರೆ ಕಡೆ ಸ್ಥಳಾಂತರ ಆಗೇದ), ದಿಲ್ಲಿಗೆ ಹೋದರ ಶಂಕರ ಮಾರ್ಕೆಟ್, ಪಹಾಡಗಂಜ, ಮುಂಬಯಿಗೆ ಹೋದರ ಫೋರ್ಟ್ ಏರಿಯಾ – ಹೀಂಗ ಕೆಲವು ಸ್ಥಳಗಳಿಗೆ ಹೋಗ ಬಹುದು. ಕೆಲವು ಊರಿನ ಕೆಲವು ಪ್ರದೇಶಗಳು ಹಳೇ ಪುಸ್ತಕಗಳಿಗೆ ಬಹಳ ಪ್ರಸಿದ್ಧ ಇರತಾವು.

ನಿಮ್ಮಾಂಗ ಹಳೇ ಪುಸ್ತಕಾ ಹುಡುಕೋ ಆಸಾಮಿ ಗೆಳೆತನ ಮಾಡಬೇಕು. ಅವರಿಗೆ ಹೇಳಿದರ ಅವರು ನಿಮಗೆ ಸಹಾಯ ಮಾಡಬಹುದು.

ಹಳೇ ಪುಸ್ತಕಗಳ ಸಂಗ್ರಹ ಮಾಡಿಟ್ಟಿರುವವರು ಏನಾದರೂ ಮಾರೋರು ಇದ್ದರ ಅದರ ಜಾಹೀರಾತು ಕೊಡತಿರತಾರ. ಅವುನ್ನ ನಾವು ಗಮನಿಸಬೇಕು. ನಿಮ್ಮ ಹತ್ತರ ಅಗದಿ ಹಳೇ ಪುಸ್ತಕಾ ಇದ್ದರ ನಿಮ್ಮಂತಹ ಓದೋ ಗೆಳೆಯರಿಗೆ ಹೇಳಬೇಕು.

ಹಳೇ ಪುಸ್ತಕದ ಅಂಗಡಿಗಳಿಗೆ ಆಗಾಗ ಭೆಟ್ಟಿಕೊಡತಿರಬೇಕು.

ನಮಗ ಬೇಕಾದ ಪುಸ್ತಕದ ಬಗ್ಗೆ ಬಹಳಷ್ಟು ಪ್ರಚಾರ ಮಾಡಬಾರದು. ತೀರಾ ಪ್ರಚಾರ ಆದರ ಅದರ ಬೆಲೆ ವಿಪರೀತ ಹೆಚ್ಚ ಆಗೋ ಸಂಭವವಿರತದ.

ಕೊನಿಗೆ ಇನ್ನೊಂದು ಸಲಹೆ. ಹಳೇ ಪುಸ್ತಕಾ ಹುಡುಕು ವವರ ಒಂದು ಸಂಘಾ ಯಾಕ ಸ್ಥಾಪನಾ ಮಾಡಬಾರದು ? ಹಳೇ ಪುಸ್ತಕಾ ಹುಡುಕೋವರಿಗೆ ತಾಳ್ಮೆ ಬೇಕು, ನೆನಪಿರಲಿ. ಹಳೇ ಮನಸ್ಯಾ ಜಲ್ದಿ ಸಿಗಬಹುದು. ಆದರ ಹಳೇ ಪುಸ್ತಕಾ ಅಷ್ಟ ಸಲೀಸಾಗಿ ಸಿಗೋದಿಲ್ಲಲ್ಲ.


ಜಿ. ಎಂ. ಶಿರಹಟ್ಟಿ
[illegible], ಬಿ. ಶೇಖರ್ ಎಸ್‌ಬಿಐ ಹತ್ತಿರ, ಯಲಹಂಕ ನ್ಯೂ ಟೌನ್,
ಬೆಂಗಳೂರು - [illegible]

# ಬದಲಾದ ಸನ್ನಿವೇಶದಲ್ಲಿ ಸಾಕ್ಷರತೆಯ ಸವಾಲುಗಳು

ಎಂ. ಹೆಚ್. ಶ್ರೀಧರಮೂರ್ತಿ



**ಅಭಿವೃದ್ಧಿ – ಸಾಕ್ಷರತೆ**

ಇಪ್ಪತ್ತೊಂದನೇ ಶತಮಾನವು ಮಾಹಿತಿ ಯುಗವಾಗಿ ಪರಿಣಮಿಸಿದೆ. ಇಲ್ಲಿ ಮಾಹಿತಿ ಇರುವವನೇ ಒಡೆಯ. ಮಾಹಿತಿ ಇಲ್ಲದವನು ಬಡವನಾಗಬೇಕಾದ ಪರಿಸ್ಥಿತಿ. ವಿಜ್ಞಾನ ತಂತ್ರಜ್ಞಾನದ ಶರವೇಗದ ಪ್ರಗತಿಯಿಂದಾಗಿ ಕೌಶಲ್ಯವಿದ್ದವನಿಗೆ ಇಲ್ಲಿ ಬದುಕು. ಇಲ್ಲದಿದ್ದರೆ ಅತಂತ್ರ ಬದುಕು ನಿರ್ಮಾಣವಾಗುತ್ತದೆ. ಇಲ್ಲಿ ಅಕ್ಷರಕ್ಕಿಂತಲೂ ಕೌಶಲ್ಯದ ಪರಿಣತಿ ಉತ್ತಮ ಗುಣಮಟ್ಟದ ಜೀವನ ನಡೆಸಲು ಸಾಧ್ಯವೆಂಬ ಭ್ರಮೆಯನ್ನುಂಟುಮಾಡುತ್ತಿದೆ. ಜಾಗತೀಕರಣ ಹಾಗೂ ಉದಾರೀಕರಣ ಇದಕ್ಕೆ ಅಪಾರವಾದ ಕೊಡುಗೆಯನ್ನು ನೀಡುತ್ತಿವೆ. ಹೀಗಾಗಿ ಪಟ್ಟಣ ಮತ್ತು ಗ್ರಾಮೀಣ ಜನರ ಅಭಿರುಚಿಗಳು ಅವಶ್ಯಕತೆಗಳು ಮತ್ತು ಬಯಕೆಗಳು ಬದಲಾಗುತ್ತಿವೆ. ಇದರಿಂದಾಗಿ ಗ್ರಾಮೀಣ ಜನರು ಪಟ್ಟಣದ ಉತ್ಪಾದನೆಯ ಸರಕುಗಳನ್ನು ಕೊಳ್ಳುವ ಗಿರಾಕಿಗಳಾಗಿದ್ದಾರೆ. ಅನಕ್ಷರಸ್ಥರಾಗಲಿ ಅಥವಾ ಅಕ್ಷರಸ್ಥರಾಗಲಿ ಪಟ್ಟಣದವರಾಗಲಿ ಅಥವಾ ಹಳ್ಳಿಯವರಾಗಲಿ ಅವರು ಬಂಡವಾಳಶಾಹಿಯ ಕಪಿಮುಷ್ಟಿಗೆ ಅಥವಾ ವ್ಯವಸ್ಥಿತ ಜಾಲಕ್ಕೆ ಜಾರಿ ಬೀಳುವ ಸ್ಥಿತಿಗೆ ತಲುಪುತ್ತಿದ್ದಾರೆ. ಹೀಗಾಗಿ ಸಮಾಜವು ಕೂಡ ಹೊಸ ವ್ಯವಸ್ಥೆಗೆ ಹೊರಳುತ್ತಿದೆ. ಇದರಿಂದಾಗಿ ಅಭಿವೃದ್ಧಿಯ ಪರಿಕಲ್ಪನೆಯು ಕೂಡ ಸಾಮಾನ್ಯನ ಕಣ್ಣಿನಲ್ಲಿ ಅಥವಾ ಅನಕ್ಷರಸ್ಥನ ಕಣ್ಣಿನಲ್ಲಿ ವಿಭಿನ್ನವಾಗಿ ಗೋಚರಿಸುತ್ತಿದೆ. ಉದಾರೀಕರಣದಿಂದಾಗಿ ಇಂದು ಎಲ್ಲವನ್ನೂ ಸುಲಭವಾಗಿ ಗಳಿಸುವ ದಾರಿಯ ಕಡೆಗೆ ಸೆಳೆಯುವಂತೆ ಮಾಡುತ್ತಿದೆ. ಹೀಗಾಗಿ 'ಅಭಿವೃದ್ಧಿ' ಎಂದರೆ ಸಂಪತ್ತಿನ ಹೆಚ್ಚಳ, ಆರ್ಥಿಕ ಅಭಿವೃದ್ಧಿ, ಕೈಗಾರಿಕೀಕರಣ, ಪಶ್ಚಿಮ ರಾಷ್ಟ್ರದಲ್ಲಿನ ಸೌಲಭ್ಯಗಳ ಪೂರೈಕೆ, ಭೋಗ ಜೀವನವು ಸಮಸ್ತರ ಕನಸು ಎಂಬುದಾಗಿ ಉದಾರೀಕರಣ ಬಿಂಬಿಸುತ್ತಿದೆ.

**ನಿಜವಾದ ಸಾಕ್ಷರತೆ ಎಂದರೇನು ?**

ನಿಜವಾದ 'ಅಭಿವೃದ್ಧಿ' ಕಲ್ಪನೆಗಳಾದ ಹಸಿವು, ಬಡತನ, ಅಸ್ಪೃಶ್ಯತೆ, ತಾರತಮ್ಯ, ನಿರುದ್ಯೋಗ, ಲಿಂಗಭೇದ, ಶೋಷಣೆಯನ್ನು ಹೋಗಲಾಡಿಸಲು 'ಸಾಕ್ಷರತೆ'ಯನ್ನು ಒಂದು ಅಸ್ತ್ರವಾಗಿ ಬಳಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಇರುವ ದೊಡ್ಡ ಅಡ್ಡಿ ಆಡಳಿತಗಾರರಲ್ಲಿ ಮತ್ತು ಚುನಾಯಿತ ಪ್ರತಿನಿಧಿಗಳಲ್ಲಿರುವ 'ರಾಜಕೀಯ ಇಚ್ಛಾಶಕ್ತಿ'ಯ ಕೊರತೆ. ಹೀಗಾಗಿ ನಮ್ಮ ಸರ್ಕಾರಗಳು ರೂಪಿಸುವ ಸಾಕ್ಷರತಾ ಕಾರ್ಯಕ್ರಮಗಳು ನಿರೀಕ್ಷಿತ ಪ್ರಮಾಣದಲ್ಲಿ ಯಶಸ್ಸು ಕಾಣದಾಗಿವೆ. ಸಾಕ್ಷರತೆ ಎಂದರೆ ಕೇವಲ ಓದು, ಬರಹ, ಲೆಕ್ಕಾಚಾರ ಮಾತ್ರ 'ಅಲ್ಲ, ಎನ್ನುವುದಾದರೆ ಮತ್ತೇನು ಎನ್ನುವ ಪ್ರಶ್ನೆಗೆ ಅನೇಕ ಹುಡುಕಾಟಗಳು ನಡೆದಿವೆ, ನಡೆಯುತ್ತಲೂ ಇವೆ. ಅಭಿವೃದ್ಧಿಯ ಮಾನದಂಡವಾಗಿ ಸಾಕ್ಷರತೆಯನ್ನು ಪರಿಗಣಿಸಿದಲ್ಲಿ ಅಕ್ಷರವಂಚಿತ ಜನರಿಗೆ ಅಕ್ಷರ ಕಲಿಸಬಹುದಾಗಿದೆ. ಮಾತ್ರವಲ್ಲ, ಅದಕ್ಕೆ ಹೊಸ ವ್ಯಾಖ್ಯಾನವನ್ನು ನೀಡಬಹುದಾಗಿದೆ.

'ಭಾರೀ ಪ್ರಮಾಣದ ಉತ್ಪಾದನೆಯ ಬದಲು ಬಹುಜನರು ಮಾಡುವ ಉತ್ಪಾದನೆ' ಎಂಬ ಮಂತ್ರದ ಮೂಲಕ ನೂರಾರು ಕೈಗಳಿಗೆ ಕೆಲಸ ಕೊಟ್ಟು ದಾರಿದ್ರ್ಯವನ್ನು ತೊಲಗಿಸಬೇಕು. ದರಿದ್ರ ನಾರಾಯಣ ಅಂದರೆ ಬಡವನ ಬದುಕು ಹಸನುಗೊಳಿಸಬೇಕೆಂಬ ಗಾಂಧೀಜಿಯ ಕನಸು ನನಸಾಗದೇ ಹಾಗೇ ಉಳಿದಿದೆ. ಹೀಗಾಗಿ ಆದಿವಾಸಿಗಳು, ದಲಿತರು, ಮಹಿಳೆಯರು, ಮಕ್ಕಳು, ವೃದ್ಧರು, ಬಹುಸಂಖ್ಯಾತ ಸಮುದಾಯಗಳು ಅನಕ್ಷರತೆಯ ಕೂಪದಲ್ಲಿ, ಬಡತನದ ಬೇಗುದಿಯಿಂದ ನರುಳುತ್ತಿದ್ದಾರೆ. ಇದರ ಜೊತೆಗೆ ಆರ್ಥಿಕ ಉದಾರೀಕರಣ ಬಡವನ ಸ್ಥಿತಿಯನ್ನು ಬಾಣಲೆಯಿಂದ ಬೆಂಕಿಗೆ ಹಾಕಿದಂತಾಗಿದೆ. ಇದರಿಂದಾಗಿ ಅನಕ್ಷರಸ್ಥ ಬಡವನ ಹೊಟ್ಟೆಯ ಹಸಿವನ್ನು ಇಂಗಿಸಿಕೊಳ್ಳಲು ಅನ್ಯ ಮಾರ್ಗ ಹಿಡಿಯಲು ಅವಕಾಶವಾಗುತ್ತಿದೆ. ಇಲ್ಲಿ ಅಕ್ಷರ ಕಲಿತರೆ ಹೊಟ್ಟೆ ತುಂಬಿಸಿಕೊಳ್ಳುವ ಸಾಧ್ಯತೆ ಇದೆ, ಎಂಬುದರ ಬದಲಾಗಿ ಹೇಗಾದರೂ ಮಾಡಿ ಹೊಟ್ಟೆ ತುಂಬಿಸಿಕೊಳ್ಳಬೇಕೆನ್ನುವ ಪ್ರಯತ್ನದಲ್ಲಿ ಅಡ್ಡದಾರಿಗಳನ್ನು ಹಿಡಿಯುವಂತೆ ವ್ಯವಸ್ಥೆ ಮಾಡುತ್ತಿದೆ. ಆಳುವ ವರ್ಗದ ಮನೋಧರ್ಮಕ್ಕನುಗುಣವಾಗಿ ಸಾಕ್ಷರತೆಯನ್ನು ಅರ್ಥೈಸುವ, ಹಿಗ್ಗಿಸುವ ಮತ್ತು ಕುಗ್ಗಿಸುವ ಪ್ರಯತ್ನಗಳು ಸಾಕ್ಷರತಾ ಕಾರ್ಯಕ್ರಮಗಳಲ್ಲಿ ಇಲ್ಲಿಯವರೆಗೆ ಜರುಗುತ್ತಿವೆ. ಇದರ ಸತ್ಯತೆಯನ್ನು, ಅದರಲ್ಲೂ ಸಾಕ್ಷರತಾ ಕಾರ್ಯಕ್ರಮದಲ್ಲಿ ತಮ್ಮನ್ನೇ ಅರ್ಪಿಸಿಕೊಂಡವರು, ಯೋಜನೆಯನ್ನು ಅನುಷ್ಠಾನಗೊಳಿಸುವ ನೇತಾರರು, ಕಾರ್ಯಕರ್ತರು ಮನದಟ್ಟು ಮಾಡಿಕೊಳ್ಳಬೇಕಾದುದು ಇಂದಿನ ಅಗತ್ಯ. ಅಕ್ಷರ ಸಂಸ್ಕೃತಿಯಲ್ಲಿ ನಂಬಿಕೆಯುಳ್ಳವರೆಲ್ಲರೂ ಬದಲಾದ ಸನ್ನಿವೇಶದಲ್ಲಿ ಸಾಕ್ಷರತಾ ಕಾರ್ಯಕ್ರಮವನ್ನು ಭಿನ್ನ ಆಯಾಮದಲ್ಲಿ ರೂಪಿಸಿ ಅನುಷ್ಠಾನಗೊಳಿಸುವಲ್ಲಿ ಹೊಸತನ ಕಂಡುಕೊಳ್ಳಬೇಕಾದ ಕಾಲಘಟ್ಟದಲ್ಲಿ ಸಾಕ್ಷರತಾ ಕಾರ್ಯಕ್ರಮ ನೋಡಬೇಕಾಗಿದೆ. ಅಕ್ಷರಗಳು ಕೇವಲ ಓದು, ಬರಹ, ಲೆಕ್ಕಾಚಾರ ಎನ್ನುವ ಮೂರು ಅಂಶಗಳ ಸೂತ್ರಕ್ಕೆ ಜೋತುಬೀಳದಂತೆ ಎಚ್ಚರಿಕೆ ವಹಿಸಬೇಕಾಗಿದೆ.

ಹೀಗಾಗಿ, ಅಭಿವೃದ್ಧಿ ಮತ್ತು ಸಾಕ್ಷರತೆ ಒಂದೇ ನಾಣ್ಯದ ಎರಡು ಮುಖಗಳಾಗಿವೆ. ಈ ಸಂಬಂಧ ಪುಟ್ಟ ಜಪಾನ್ ದೇಶವನ್ನು ಉದಾಹರಣೆಯನ್ನಾಗಿ ತೆಗೆದುಕೊಳ್ಳಬಹುದು. ಇಲ್ಲಿ ಅಕ್ಷರಗಳು ಕೇವಲ ಓದು, ಬರಹ, ಲೆಕ್ಕಾಚಾರಕ್ಕಿಂತ ಮಾನವ ಸಂಪನ್ಮೂಲದ ಸಾಮರ್ಥ್ಯವನ್ನು ಹೆಚ್ಚಿಸಲಾಗಿದೆ. ಇದರಿಂದಾಗಿ ವ್ಯಕ್ತಿಯ ಸಾಮರ್ಥ್ಯಕ್ಕನುಗುಣವಾಗಿ ಉದ್ಯೋಗ ಕಲ್ಪಿಸಲು ಅಲ್ಲಿನ ಸರ್ಕಾರಗಳಿಗೆ ಸಾಧ್ಯವಾಗಿದೆ. ಅವನ ಕುಟುಂಬದ ಜೀವನ ಗುಣಮಟ್ಟದಲ್ಲಿ ಸುಧಾರಣೆ ತರಲು ಸಾಧ್ಯವಾಗಿದೆ. ವ್ಯಕ್ತಿಯಲ್ಲಿ ಶಿಸ್ತು, ಸಮಯ ಪರಿಪಾಲನೆ, ಅಂದಿನ ಕೆಲಸವನ್ನು ಅಂದೇ ಮುಗಿಸುವ ಮನೋಭಾವಗಳನ್ನು ಮೈಗೂಡಿಸಿಕೊಳ್ಳಲು ಸಾಧ್ಯವಾಗಿದೆ. ಹೀಗಾಗಿ ಶಿಕ್ಷಣ ಕ್ಷೇತ್ರ, ಆರೋಗ್ಯ, ಮಹಿಳೆ ಮತ್ತು ಮಕ್ಕಳ ಅಭಿವೃದ್ಧಿ, ಸಾಮಾಜಿಕ ನ್ಯಾಯ, ಬಡತನ ನಿರ್ಮೂಲನೆ, ಮೂಲಭೂತ ಸೌಕರ್ಯಗಳ ಅಭಿವೃದ್ಧಿಯಲ್ಲಿ ಜನರ ಪಾಲ್ಗೊಳ್ಳುವಿಕೆಯ ಮೂಲಕ ದೇಶದ ಅಭಿವೃದ್ಧಿ ಸಾಧ್ಯವೆಂಬುದನ್ನು ಜಪಾನ್



ದೇಶವು ಸಾಬೀತುಮಾಡಿದೆ. ಹೀಗಾಗಿ ಬಹುಸಂಖ್ಯಾತ ಅನಕ್ಷರಸ್ಥರನ್ನು ಹೊಂದಿರುವ ರಾಷ್ಟ್ರವು ತನ್ನ ಜನತೆಗೆ ಉತ್ತಮ ಗುಣಮಟ್ಟದ ಜೀವನ ನೀಡುವುದು ಕನಸಿನ ಮಾತಾಗಿ ಉಳಿಯುತ್ತದೆ.

ಬದಲಾದ ಕಾಲಮಾನದಲ್ಲಿ ನಮ್ಮ ಸಾಮಾಜಿಕ, ಆರ್ಥಿಕ ಪರಿಸ್ಥಿತಿ ಜನಜೀವನದ ಸಂಕಷ್ಟಗಳ ಪರಿಪಾಟಲುಗಳನ್ನು ಅರಿಯಬೇಕು. ಅದಕ್ಕನುಗುಣವಾಗಿ ಸಾಕ್ಷರತಾ ಯೋಜನೆಯ ಅಥವಾ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸುವ ದಿಟ್ಟಕ್ರಮ ತೆಗೆದುಕೊಳ್ಳಬೇಕಾಗುತ್ತದೆ.

**ಅಕ್ಷರದಿಂದಾಚೆಗೆ**

ಅನಕ್ಷರಸ್ಥರಿಗೆ ಅಕ್ಷರ ಕಲಿಸುವುದು ಒಂದು ಸವಾಲಿನ ಕೆಲಸ. ಕಲಿಸುವವರಿಗೆ ಪ್ರತಿ ಬಾರಿಯೂ ಕಲಿಯುವವರು ಕೇಳುವ ಸರಳ ಪ್ರಶ್ನೆಗಳೆಂದರೆ, ಕಲಿಯುವುದರಿಂದ ನಮಗೇನು ಲಾಭ ? ಕಲಿತು ನಾವೇನು ಮಾಡಬೇಕು ? ಈ ಪ್ರಶ್ನೆಗಳಿಗೆ ಕಲಿಯುವವರ ದೃಷ್ಟಿಕೋನದಿಂದ ಉತ್ತರ ಕಂಡುಕೊಳ್ಳುವುದು ಇಂದಿನ ಅನಿವಾರ್ಯ ಪರಿಸ್ಥಿತಿ. ಅಷ್ಟರಮಟ್ಟಿಗೆ ಸಾಕ್ಷರತೆ ಏಕೆ ಬೇಕು ? ಎಂಬ ಪ್ರಶ್ನೆ ಪ್ರಶ್ನೆಯಾಗಿಯೇ ಉಳಿದುಬಿಡುತ್ತದೆ. ಅದರಲ್ಲೂ ಕಂಪ್ಯೂಟರ್ ಯುಗದಲ್ಲಿ ಈ ಪ್ರಶ್ನೆ ಪ್ರಸ್ತುತ.

ಬ್ರೆಜಿಲ್ ದೇಶದ ಶಿಕ್ಷಣತಜ್ಞರಾದ ಪಾಲೋ ಫ್ರೆಯರೆ ಒಂದೆಡೆ, ಅಕ್ಷರವನ್ನು ಓದಿ ಬರೆಯಲು ಕಲಿಯುವುದರೊಟ್ಟಿಗೆ ಪ್ರಪಂಚವನ್ನು ಓದಿ ಬರೆಯಲು ಕಲಿಯುವ ಅಗತ್ಯವನ್ನು ಒತ್ತಿ ಹೇಳುತ್ತಾರೆ. ಕಲಿಕಾರ್ಥಿಗಳು ತಮ್ಮ ಬದುಕನ್ನು ಬರೆದು ವಸ್ತುಸ್ಥಿತಿಯನ್ನು ಓದುವ ಅಗತ್ಯವನ್ನು ಮನಗಾಣಲೇಬೇಕು. ಹಾಗಾದಾಗ ಮಾತ್ರ ನಿಜವಾದ ಸಾಕ್ಷರತೆ ಸಾರ್ಥಕ ಪಡೆಯುತ್ತದೆ.

ಈ ಮಾತುಗಳಲ್ಲಿ ಒಂದು ಅಂಶ ಸ್ಪಷ್ಟವಾಗುತ್ತದೆ. ಯಾವ ಅಕ್ಷರಗಳು ಕಲಿಕಾರ್ಥಿಗಳ ದೈನಂದಿನ ಬದುಕನ್ನು ಅರ್ಥೈಸುತ್ತವೋ ಅವು ಅವನಿಗೆ ಲಾಭವೆನಿಸುತ್ತದೆ. ಅಕ್ಷರಗಳು ಬಡತನದ ಮೂಲವನ್ನು ತಿಳಿಸುವ ಕಾರಣ, ಬದುಕಿನ ಆರೋಗ್ಯ ಹೆಚ್ಚಿಸಲು ಸಾಮಾಜಿಕ ಘನತೆ ಗೌರವ ತಂದು ಕೊಡುವ ಶಕ್ತಿ. ಹೊಟ್ಟೆ ತುಂಬಿಸಿಕೊಳ್ಳಲು, ಕೌಶಲ್ಯದ ಸಾಮರ್ಥ್ಯವನ್ನು ಹೆಚ್ಚಿಸಲು ಅಕ್ಷರಗಳಿಗೆ ಸಾಧ್ಯವಿದೆಯೇ ? ಹೀಗೆ ಸಾಕ್ಷರತೆಯ ಮೂಲಕ ಬದುಕಿನ ಭದ್ರತೆ ಮತ್ತು ಜೀವನ ಗುಣಮಟ್ಟ ಹುಡುಕಾಟದಲ್ಲಿ ಕಲಿಕಾರ್ಥಿಗಳು ಸಾಕ್ಷರತೆಯನ್ನು ಎದುರುನೋಡುತ್ತಿದ್ದಾರೆ ಎಂದು ಪಾಲೋ ಫ್ರೆಯರೆ ಪ್ರತಿಪಾದಿಸುತ್ತಾರೆ. ಹೀಗಾಗಿ ಕಳೆದ ೧೬ ವರ್ಷಗಳಲ್ಲಿ ಓದು, ಬರಹ, ಲೆಕ್ಕಾಚಾರ ಮತ್ತು ಕ್ರಿಯಾತ್ಮಕ ಸಾಕ್ಷರತೆಯನ್ನು ಕಲಿಕಾರ್ಥಿಗಳಿಗೆ ತಿಳಿಸುವ ನಿಜವಾದ ಅರ್ಥದಲ್ಲಿ ನಮ್ಮ ಸಾಕ್ಷರತಾ ಆಂದೋಲನಗಳು ಸಂಪೂರ್ಣವಾಗಿ ನ್ಯಾಯವನ್ನು ಒದಗಿಸಿವೆ ಎಂದು ಆತ್ಮವಿಶ್ವಾಸದಿಂದ ಹೇಳಿಕೊಳ್ಳುವ ಸ್ಥಿತಿಯಲ್ಲಿ ನಾವು ಇದ್ದೇವೆಯೇ ?

ಆ ವಿಶ್ವಾಸ ನಮಗೆ ಇಲ್ಲವಾದಲ್ಲಿ ಇಲ್ಲಿಯವರೆಗೆ ನಡೆದ ಸಾಕ್ಷರತಾ ಆಂದೋಲನ ಹಾಗೂ ಸಾಕ್ಷರೋತ್ತರ ಕಾರ್ಯಕ್ರಮಗಳು ಸಾಧಿಸಿದಿದ್ದಾದರೂ ಏನು ? ಎಂಬ ಪ್ರಶ್ನೆ ಹಾಕಿಕೊಳ್ಳುವುದು ಸೂಕ್ತ. ಅಕ್ಷರ ಕಲಿಸುವ ಕಲಿಕಾ ಪ್ರಕ್ರಿಯೆಗೆ ಪ್ರೇರೇಪಣೆಯಾಗಿ ಸಾಂಸ್ಕೃತಿಕ ಗುಂಪುಗಳು ಈ ನಿಟ್ಟಿನಲ್ಲಿ ಸಾಕಷ್ಟು ಕೆಲಸ ಮಾಡಿವೆ. ಅಕ್ಷರ ಚಳುವಳಿಯ ಭಾಗವಾಗಿ ಸಾಂಸ್ಕೃತಿಕ ಚಳುವಳಿಯು ರೂಪುಗೊಂಡಿತು. ಆ ಮೂಲಕ ಲಕ್ಷಾಂತರ ಮನಸ್ಸುಗಳು ಸಾಕ್ಷರತೆಯೆಡೆಗೆ ಆಕರ್ಷಣೆಗೊಂಡವು. ಅಕ್ಷರ ಕಲಿಸಲು ಮುಂದೆ ಬಂದ ಸ್ವಯಂಸೇವಕರ ಪಡೆ ಸಾಮಾಜಿಕ ಜಾಗೃತ ವ್ಯಕ್ತಿಗಳಾಗಿ ಉತ್ಸಾಹದೊಂದಿಗೆ ಸ್ವಯಂಸೇವಾ ನೆಲೆಯಲ್ಲಿ ಕಾರ್ಯ ನಿರ್ವಹಿಸಿದರು. ಹೀಗಾಗಿ ಸಾಮಾಜಿಕ ಬದ್ಧತೆಯುಳ್ಳ ಸಂಘಟಿತ ಗುಂಪು ನಿಷ್ಠೆಯಿಂದ ಕಾರ್ಯ ನಿರ್ವಹಿಸಿದೆ. ಹಾಗಾಗಿ ಸಾಕ್ಷರತೆಯು ತನ್ನ ದೊಡ್ಡ ಬಳಗವನ್ನೇ ಸೃಷ್ಟಿಸಿದೆ. ಸಾಕ್ಷರತೆಗಾಗಿ ದೊಡ್ಡ ಪ್ರಮಾಣದಲ್ಲಿ ಮಾನವ ಸಂಪನ್ಮೂಲದ ಬಳಕೆ ಮತ್ತು ಸಾಮಾಜಿಕ ಅರಿವನ್ನು ತರಲು ಸಾರ್ಥಕ ಕೆಲಸ ಮಾಡಿದೆ.

ಯಾವುದೇ ಒಂದು ಸಾಂಸ್ಕೃತಿಕ ಚಳುವಳಿ ಮತ್ತು ಸ್ವಯಂಸೇವಾ ನೆಲೆಯಲ್ಲಿ ಕಾರ್ಯ ನಿರ್ವಹಿಸಿದ ಈ ಎರಡು ಪ್ರಯತ್ನಗಳು ಸಾಮಾಜಿಕ ಜಾಗೃತಿಯನ್ನು ಮತ್ತು ಸಾಕ್ಷರತೆಯ ಮಹತ್ವವನ್ನು ಸಾಮಾನ್ಯ ಜನರಲ್ಲಿ ಉಂಟುಮಾಡುವಲ್ಲಿ ಯಶಸ್ವಿಯಾಗಿವೆ. ಮೂರನೇ ಅಂಶವಾದ ಅಕ್ಷರ ಕಲಿಕೆ ಹಾಗೂ ಅದರ ನಿರಂತರತೆಗಳನ್ನು ಕಾಪಾಡುವಲ್ಲಿ ನಿರೀಕ್ಷಿತ ಗುರಿಯನ್ನು ತಲುಪಲು ಸಾಧ್ಯವಾಗಿಲ್ಲ. ಅದಕ್ಕೆ ಮೇಲೆ ಚರ್ಚಿಸಿದ ಅಂಶಗಳು ಕಾರಣವೆನ್ನಬಹುದು.

ಕಳೆದ ಒಂದೂವರೆ ದಶಕದಿಂದಲೂ ಸಾಕ್ಷರತೆಯ ಹರಿಕಾರರ ಕಾರ್ಯ ನಿರ್ವಹಣೆಯಲ್ಲಿ



ವ್ಯಾಪಕ ಪ್ರಗತಿ ಕಂಡುಬಂದಿದೆಯಾದರೂ ಅಲ್ಲಿ ಗಟ್ಟಿತನದ ಬಗ್ಗೆ ಅಳುಕು ಇದ್ದೇ ಇದೆ. ಇದರಿಂದಾಗಿ ಮಾನವ ಸಂಪನ್ಮೂಲ ಸಮರ್ಪಕ ಬಳಕೆ, ಸಮಯವನ್ನು ನಿಜವಾದ ಕಲಿಕೆಗೆ ಇನ್ನು ಮುಂದೆ ಅಷ್ಟು ಪ್ರಮಾಣದಲ್ಲಿ ತೊಡಗಿಸಲು ಕಷ್ಟಸಾಧ್ಯವೆನಿಸುತ್ತದೆ. ಸಾಕ್ಷರತೆಯ ಮೂಲಕ ಇನ್ನೂ ಹತ್ತು ಹಲವು ಸಮಾಜ ಬದಲಾವಣೆಯ ಅಭಿವೃದ್ಧಿ ಕೆಲಸಗಳು ನಡೆಯಬೇಕಾಗಿದೆ. ಈ ನಿಟ್ಟಿನಲ್ಲಿ ನಮ್ಮ ಮುಂದಿರುವ ಸಾಕ್ಷರತಾ ಕಾರ್ಯಕ್ರಮಕ್ಕೆ ಹೊಸತನ, ಹೊಸ ಚಿಂತನೆಗಳು, ಹೊಸ ಪ್ರಯೋಗಗಳು, ವೈವಿಧ್ಯಮಯ ಕಾರ್ಯಕ್ರಮಗಳು ತ್ವರಿತಗತಿಯಲ್ಲಿ ಆಗಬೇಕಿದೆ. ಸಾಕ್ಷರತೆಗೆ ಹಾಗೂ ಕಾರ್ಯಕರ್ತರಿಗೆ ಲವಲವಿಕೆಯನ್ನು ತಂದು ಕೊಡುವ ಮೂಲಕ ವೇಗವಾಗಿ ಕೆಲಸ ಮಾಡಿ ಈ ಕ್ಷೇತ್ರವನ್ನು ಅಭಿವೃದ್ಧಿಯ ತೆಕ್ಕೆಗೆ ಸೇರಿಸಬೇಕಾದ ಸವಾಲು ನಮ್ಮ ಮುಂದಿದೆ.

ಹೀಗಾಗಿ ವಯಸ್ಕರ ಶಿಕ್ಷಣ ಕ್ಷೇತ್ರದ ಅವಕಾಶವನ್ನು ಪಡೆದ ಜನತೆಯೊಳಗೆ ಅಕ್ಷರದಾಚೆಗಿನ ಪರಿಕಲ್ಪನೆ ತೆರೆದುಕೊಳ್ಳುವಂತೆ ಪ್ರೇರೇಪಣೆ ನೀಡುವ ನಿಟ್ಟಿನಲ್ಲಿ ಮಾತುಕತೆ ನಡೆಸಬೇಕಾದ ಅವಶ್ಯಕತೆಯಿದೆ. ಒಂದೆಡೆ ಸಾಕ್ಷರತಾ ಆಂದೋಲನದ ವ್ಯಾಪಕ ಅನುಭವ, ಮತ್ತೊಂದೆಡೆ 'ಬಹುಮುಖಿ ಆಯಾಮಗಳ' ಬೆಳಕಿನಲ್ಲಿ ಹೊಸ ಪ್ರಯತ್ನಗಳ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮದಲ್ಲಿ ಜರುಗಬೇಕಾಗಿದೆ.

**ಸಾಕ್ಷರತಾ ಕಾರ್ಯಕರ್ತರಿಗೆ ವೃತ್ತಿಪರತೆ ಬೇಕು**

ಸಾಕ್ಷರತಾ ಕಾರ್ಯಕ್ರಮವನ್ನು ಕೇವಲ ಭಾವನಾತ್ಮಕ ನೆಲೆಯಲ್ಲಿ ಮಿತಿಗೊಳಿಸದೆ ಬದ್ಧತೆಯ ಮತ್ತು ಆವೇಶದ ಜೊತೆಗೆ ವೈಜ್ಞಾನಿಕ ಮತ್ತು ತಾಂತ್ರಿಕ ಕೌಶಲ್ಯದ ಸಾಕ್ಷರತಾ ಕಾರ್ಯಕ್ರಮವನ್ನು ಜಾರಿಗೊಳಿಸುವ ಅಗತ್ಯವಿದೆ. ಸಾಂಪ್ರದಾಯಿಕ ಅನುಷ್ಠಾನ ವಿಧಾನದಿಂದ ಆಚೆಗೆ ನೋಡುವ ಪ್ರಯತ್ನವನ್ನು ಸಾಕ್ಷರತಾ ಸಮಿತಿಗಳ ಕಾರ್ಯಕರ್ತರು, ಯೋಜನೆಯ ಅನುಷ್ಠಾನಕರು ಯೋಚಿಸಬೇಕಾಗಿದೆ. ಈ ಬಗ್ಗೆ ಸರ್ ಎಂ. ವಿಶ್ವೇಶ್ವರಯ್ಯನವರು ಹೀಗೆ ಹೇಳುತ್ತಾರೆ :

ಅನಕ್ಷರತೆ, ಆಲಸ್ಯ ಮುಂತಾದ ಕೊರತೆಗಳ ಕಾರಣದಿಂದ ಸರಾಸರಿ ಭಾರತೀಯರ ಬದುಕು ಅನಿಶ್ಚಿತತೆಯಿಂದ ಕೂಡಿದೆ. ಅದು ಪರಂಪರಾಗತ ಜಡತೆಯನ್ನು ಮೈಗೂಡಿಸಿಕೊಂಡಿದೆ. ಪ್ರಗತಿಶೀಲ ಬದುಕಿಗೆ ಬೇಕಾದ ಮಾರ್ಗದರ್ಶನ ಅವರಿಗೆ ಸಿಗುತ್ತಿಲ್ಲ. ಭಾರತ ಅನಕ್ಷರತೆಯನ್ನು ಹೊರತುಪಡಿಸಿದರೆ, ಬಹುಸಂಖ್ಯಾತರು ಬಡತನದಲ್ಲಿರುವವರು ಅದಕ್ಕಾರಾಗಿರಲು ಉದ್ಯಮಶೀಲತೆಯಿಲ್ಲದ ಆಲಸ್ಯ ಸ್ವಭಾವವೇ ಇನ್ನೊಂದು ಕಾರಣ. ಇದರಿಂದ ಹೊರಬಂದು ವೈಯಕ್ತಿಕ ಬದುಕಿನ ಪ್ರತಿಫಲಕ್ಕಾಗಿ ಸಮಯ ಹಾಗೂ ಪ್ರತಿಭೆಯನ್ನು ಸಂಪೂರ್ಣ ವ್ಯಯಿಸಬೇಕಾಗಿದೆ.

---

ನಿಜವಾದ 'ಅಭಿವೃದ್ಧಿ' ಕಲ್ಪನೆಗಳಾದ ಹಸಿವು, ಬಡತನ, ಅಸ್ಪೃಶ್ಯತೆ, ತಾರತಮ್ಯ, ನಿರುದ್ಯೋಗ, ಲಿಂಗಭೇದ, ಶೋಷಣೆಯನ್ನು ಹೋಗಲಾಡಿಸಲು 'ಸಾಕ್ಷರತೆ'ಯನ್ನು ಒಂದು ಅಸ್ತ್ರವಾಗಿ ಬಳಸಲು ಸಾಧ್ಯವಾಗುತ್ತಿಲ್ಲ. ಇದಕ್ಕೆ ಇರುವ ದೊಡ್ಡ ಅಡ್ಡಿ ಆಡಳಿತಗಾರರಲ್ಲಿ ಮತ್ತು ಚುನಾಯಿತ ಪ್ರತಿನಿಧಿಗಳಲ್ಲಿರುವ 'ರಾಜಕೀಯ ಇಚ್ಛಾಶಕ್ತಿ'ಯ ಕೊರತೆ. ಹೀಗಾಗಿ ನಮ್ಮ ಸರ್ಕಾರಗಳು ರೂಪಿಸುವ ಸಾಕ್ಷರತಾ ಕಾರ್ಯಕ್ರಮಗಳು ನಿರೀಕ್ಷಿತ ಪ್ರಮಾಣದಲ್ಲಿ ಯಶಸ್ಸು ಕಾಣದಾಗಿದೆ. ಸಾಕ್ಷರತೆ ಎಂದರೆ ಕೇವಲ ಓದು, ಬರಹ, ಲೆಕ್ಕಾಚಾರ ಮಾತ್ರ ಅಲ್ಲ, ಎನ್ನುವುದಾದರೆ ಮತ್ತೇನು ಎನ್ನುವ ಪ್ರಶ್ನೆಗೆ ಅನೇಕ ಹುಡುಕಾಟಗಳು ನಡೆದಿವೆ, ನಡೆಯುತ್ತಲೂ ಇವೆ. ಅಭಿವೃದ್ಧಿಯ ಮಾನದಂಡವಾಗಿ ಸಾಕ್ಷರತೆಯನ್ನು ಪರಿಗಣಿಸಿದಲ್ಲಿ ಅಕ್ಷರವಂಚಿತ ಜನರಿಗೆ ಅಕ್ಷರ ಕಲಿಸಬಹುದಾಗಿದೆ. ಮಾತ್ರವಲ್ಲ, ಅದಕ್ಕೆ ಹೊಸ ವ್ಯಾಖ್ಯಾನವನ್ನು ನೀಡಬಹುದಾಗಿದೆ.

ಇಂದು ವಿಜ್ಞಾನ ತಂತ್ರಜ್ಞಾನ ಅಪಾರವಾಗಿ ಬೆಳೆದಿದೆ. ಇದನ್ನು ಎಷ್ಟರಮಟ್ಟಿಗೆ ನಾವು ನಮ್ಮ ದಿನನಿತ್ಯದ ಸಾಕ್ಷರತಾ ಕಾರ್ಯಕ್ರಮಗಳಲ್ಲಿ ಬಳಸಲು ಸಾಧ್ಯವಾಗಿದೆ ಎಂದು ಪರಿಶೀಲಿಸಬೇಕಿದೆ. ಸರಕಾರ ರೂಪಿಸಿರುವ ಹಲವಾರು ಕಾರ್ಯಕ್ರಮಗಳನ್ನು ಕಟ್ಟಕಡೆಯ ಮನುಷ್ಯನಿಗೂ ಮುಟ್ಟಿಸಲು ನಮ್ಮ ಶಿಕ್ಷಣ ಕೇಂದ್ರಗಳು ಶ್ರಮಿಸಬೇಕಿದೆ. (ಇದಕ್ಕೆ ಬಹುಮುಖ್ಯವಾಗಿ ನಮ್ಮ ಕಾರ್ಯಕರ್ತರಲ್ಲಿ ಸಾಮರ್ಥ್ಯವನ್ನು ಹೆಚ್ಚಿಸಿ, ವೃತ್ತಿಪರತೆಯನ್ನು ಬೆಳೆಸಬೇಕಿದೆ. ಆಗ ಈ ಕಾರ್ಯಕ್ರಮದ ಮೂಲಕ ವೈಜ್ಞಾನಿಕವಾಗಿ ನಿಜವಾದ ಅರ್ಥದಲ್ಲಿ ಸಾಕ್ಷರತೆಯನ್ನು ಸಾಧಿಸಲು ಸಾಧ್ಯವಾಗುತ್ತದೆ.)

ಇಲ್ಲಿಯವರೆಗೆ ನಮ್ಮ ರಾಜ್ಯದಲ್ಲಿನ ಸಾಕ್ಷರತಾ ಪ್ರಯೋಗಗಳು ಎಷ್ಟರಮಟ್ಟಿಗೆ ಯಶಸ್ಸು ಸಾಧಿಸಿವೆ ಎಂಬುದನ್ನು ಗಮನಿಸೋಣ.

**ಸಾಕ್ಷರತೆಗೆ ಹೊಸ ತಿರುವು**

ಭಾರತದಮಟ್ಟಿಗೆ ಹೇಳುವುದಾದರೆ ೧೯೮೮ ರಿಂದ ಸಾಕ್ಷರತಾ ಚಳುವಳಿಯು ಜನಾಂದೋಲನ ಸ್ವರೂಪ ಪಡೆದುಕೊಂಡಿತು. ಇದಕ್ಕೆ ಬಹುಮುಖ್ಯವಾಗಿ ರಾಷ್ಟ್ರೀಯ ಸಾಕ್ಷರತಾ ಆಯೋಗದ ಸ್ಥಾಪಕರಾದ ಡಾ|| ಸ್ಯಾಂ ಪಿಟ್ರೋಡಾ ಅವರು ಇತ್ತಿರುವ ಕೊಡುಗೆ ಅಪಾರ. ರಾಷ್ಟ್ರಮಟ್ಟದಲ್ಲಿ ಹಾಗೂ ರಾಜ್ಯಗಳಲ್ಲಿ ಸಾಕ್ಷರತೆಗಾಗಿ ಸ್ವಯಂಸೇವಾ ನೆಲೆಯಲ್ಲಿ ಕೆಲಸ ಮಾಡುವ ಸಂಸ್ಥೆಗಳನ್ನು ಗುರುತಿಸಿದ ಕೀರ್ತಿ ಅವರಿಗೆ ಸಲ್ಲುತ್ತದೆ. ಜನಪ್ರಿಯ ವಿಜ್ಞಾನ ಚಳುವಳಿಯ ನೇತಾರರು ಸಾಕ್ಷರತೆಗಾಗಿ ದುಡಿಯಲು ಭಾರತ ಜ್ಞಾನ ವಿಜ್ಞಾನ ಸಮಿತಿಯನ್ನು ಅಸ್ತಿತ್ವಕ್ಕೆ ತಂದರು. ಇಂತಹ ಸಂಸ್ಥೆ ಹಾಗೂ ಪ್ರತಿಭಾನ್ವಿತ ವ್ಯಕ್ತಿಗಳನ್ನು ಸೇರಿಸಿ ಸಾಕ್ಷರತಾ ಕಾರ್ಯಕ್ರಮಕ್ಕೆ ಜನಾಂದೋಲನ ಸ್ವರೂಪವನ್ನು ತಂದುಕೊಡಲು ಸಾಧ್ಯವಾಯಿತು. ಇಂತಹ ಜನಾಂದೋಲನದಿಂದಾಗಿಯೇ ಸಾಕ್ಷರತಾ ಕಾರ್ಯಕ್ರಮಕ್ಕೆ ಸ್ವಯಂಸೇವಾ ಸಂಸ್ಥೆಗಳು, ದಕ್ಷ ಅಧಿಕಾರಿಗಳು ಮತ್ತು ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡು ಜಿಲ್ಲಾ ಸಾಕ್ಷರತಾ ಸಮಿತಿಗಳು ರಚನೆಗೊಂಡವು. ಕೇರಳದ ಎರ್ನಾಕುಲಂನಿಂದ ಹಿಡಿದು ರಾಷ್ಟ್ರವ್ಯಾಪಿ ಹಮ್ಮಿಕೊಂಡ ಸಾಕ್ಷರತಾ ಚಳುವಳಿ ಕರ್ನಾಟಕದಲ್ಲಿ೯೦ರ ದಶಕದಲ್ಲಿ ದಕ್ಷಿಣ ಕನ್ನಡ ಮತ್ತು ಬಿಜಾಪುರದಲ್ಲಿ ಆರಂಭಗೊಂಡಿತು.

ಸುಮಾರು ೧೭ ವರ್ಷಗಳ ಸುದೀರ್ಘ ಪ್ರಯಾಣವನ್ನು ಸಾಕ್ಷರತಾ ಕಾರ್ಯಕ್ರಮವು ಕಂಡಿದೆ. ಅದರೊಂದಿಗೆ ಲಕ್ಷ ಲಕ್ಷ ಕಾರ್ಯಕರ್ತರು ಸಾಕ್ಷರತಾ ಕಾರ್ಯಕ್ರಮದಲ್ಲಿ ದುಡಿದಿದ್ದಾರೆ. ಅನೇಕ ಜಿಲ್ಲೆಗಳು ಶೇಕಡಾವಾರು ಸಾಕ್ಷರತಾ ಸಾಧನೆಯನ್ನು ಘೋಷಿಸಿ ಹೆಮ್ಮೆಪಟ್ಟುಕೊಂಡಿವೆ. ಕರ್ನಾಟಕ ರಾಜ್ಯದಲ್ಲಿ ಗ್ರಾಮೀಣ ಕ್ರಿಯಾತ್ಮಕ ಸಾಕ್ಷರತೆ ಯೋಜನೆ, ಅಕ್ಷರ ದೀಪ, ಸಂಪೂರ್ಣ ಸಾಕ್ಷರತಾ ಆಂದೋಲನ, ಸಾಕ್ಷರೋತ್ತರ ಮತ್ತು ಕನ್ನಡ ನಾಡು – ಸಾಕ್ಷರ ನಾಡು ಕಾರ್ಯಕ್ರಮಗಳನ್ನು ಅನುಷ್ಠಾನ ಗೊಳಿಸಲಾಗಿದೆ. ಆದರೂ ರಾಜ್ಯದ ಸಾಕ್ಷರತಾ ಪ್ರಮಾಣ ೧೯೯೧ರಲ್ಲಿ ಶೇಕಡಾ ೫೬.೦೪ರಷ್ಟು ಇದ್ದು ೨೦೦೧ಕ್ಕೆ ೬೭.೦೪ ಅಂದರೆ ಶೇಕಡಾ ೧೧ರಷ್ಟು ಮಾತ್ರ ಏರಿಕೆಯಾಗಿದೆ. ಸಾಕ್ಷರತಾ ಪ್ರಮಾಣದಲ್ಲಿ ದಕ್ಷಿಣ ಭಾರತ ಮತ್ತು ನೆರೆಹೊರೆಯ ೬ ರಾಜ್ಯಗಳಲ್ಲಿ ಕರ್ನಾಟಕವು ೫ನೇ ಸ್ಥಾನ ಮತ್ತು ದೇಶದ ೩೫ ರಾಜ್ಯಗಳಲ್ಲಿ ೨೨ನೇ ಸ್ಥಾನದಲ್ಲಿದೆ. ಕರ್ನಾಟಕದಲ್ಲಿ ನಗರ ಸಾಕ್ಷರತಾ ಪ್ರಮಾಣ ಸಾಕ್ಷರತಾ ಪ್ರಮಾಣದ ಶೇಕಡಾ ೮೧.೦೫ ಮತ್ತು ಗ್ರಾಮೀಣ ಸಾಕ್ಷರತಾ ಪ್ರಮಾಣ ಶೇಕಡಾ ೫೯.೬೮ ಇದ್ದು ನಗರ ಮತ್ತು ಗ್ರಾಮೀಣ ಸಾಕ್ಷರತಾ ಪ್ರಮಾಣದಲ್ಲಿ ಶೇಕಡಾ ೨೧.೩೭ರಷ್ಟು ಅಂತರವಿದೆ.

೨೦೦೧ರ ಜನಗಣತಿಯನ್ವಯ ೧೫ – ೩೫ರ ವಯೋಮಿತಿಯಲ್ಲಿ ಕರ್ನಾಟಕದಲ್ಲಿ ೫೯ ಲಕ್ಷ ಜನ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿಸಲು ಯೋಜನೆ ರೂಪಿಸಲಾಗಿದೆ.

**ಮುಂದುವರಿಕೆ ಶಿಕ್ಷಣ ಕಾರ್ಯಕ್ರಮ**

ಮೂಲತಃ ಸಾಕ್ಷರತೆ ಮತ್ತು ಪ್ರಾಥಮಿಕ ಶಿಕ್ಷಣದ ಚೌಕಟ್ಟಿನಿಂದ ಹೊರಗಿರುವ ಎಲ್ಲಾ ವ್ಯಕ್ತಿಗಳ ಅಗತ್ಯಕ್ಕನುಗುಣವಾಗಿ ಕಲಿಕೆಯ ಮುಕ್ತ ಅವಕಾಶಗಳನ್ನೊಳಗೊಂಡ ಒಂದು ವ್ಯಾಪಕ ಶಿಕ್ಷಣ ಕಾರ್ಯಕ್ರಮವೇ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮ. ಜೀವನ ಪರ್ಯಂತ ಕಲಿಕೆಯ ಮೂಲಕ ಕಲಿಕಾ ಸಮಾಜ ನಿರ್ಮಾಣ ಮಾಡುವುದು ಇದರ ಗುರಿಯಾಗಿದೆ.

೫೯ ಲಕ್ಷ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡಲು ಮುಂದುವರಿಕೆ ಶಿಕ್ಷಣ ಕಾರ್ಯಕ್ರಮದಿಂದ ಮಾತ್ರ ಸಾಧ್ಯವಾಗುವುದಿಲ್ಲ. ಕರ್ನಾಟಕವು ೨೦೦೭ರ ಹೊತ್ತಿಗೆ ಶೇಕಡಾ ೮೫ ಸಾಕ್ಷರತೆಯ ಗುರಿಯನ್ನು ಸಾಧಿಸುವ ಕನಸನ್ನು ಹೊಂದಿದೆ. ಇದಕ್ಕಾಗಿ ಲೋಕ ಶಿಕ್ಷಣ ನಿರ್ದೇಶನಾಲಯವು ವಿನೂತನ ಕಾರ್ಯಕ್ರಮವನ್ನು ಜಾರಿಗೊಳಿಸುತ್ತಿದೆ. ಈ ಗುರಿಯನ್ನು ನಿರ್ದಿಷ್ಟ ಅವಧಿಯೊಳಗೆ ಸಾಧಿಸಬೇಕಾದರೆ ಸೂಕ್ತ ಯೋಜನೆಗಳನ್ನು ಜಾರಿಗೆ ತರಬೇಕಿದೆ. ಕೇವಲ ಮುಂದುವರಿಕೆ ಶಿಕ್ಷಣ ಕಾರ್ಯಕ್ರಮದ ಮೂಲಕ ಇಂತಹ ದೊಡ್ಡ ಸವಾಲು ಎದುರಿಸಲು ಸಾಧ್ಯವಾಗುವುದಿಲ್ಲ. ಹಾಗಾಗಿ ಪರ್ಯಾಯ ಮಾರ್ಗಗಳನ್ನು ವಿವಿಧ ಕಾರ್ಯಕ್ರಮಗಳ ಮೂಲಕ ಜಾರಿಗೊಳಿಸುವ ಉದ್ದೇಶ ಹೊಂದಿದೆ.

ರಾಜ್ಯದ ೨೭ ಜಿಲ್ಲೆಗಳನ್ನು ಮಹಿಳಾ ಸಾಕ್ಷರತಾ ಸ್ಥಾನದ ಮೇಲೆ ಆಧರಿಸಿ ಆದ್ಯತೆಯ ಜಿಲ್ಲೆಗಳು ('ಪಿ' ವರ್ಗ), 'ಎ' ವರ್ಗ, 'ಬಿ' ವರ್ಗ ಹಾಗೂ 'ಸಿ' ವರ್ಗದ ಜಿಲ್ಲೆಗಳಾಗಿ ವರ್ಗೀಕರಣ ಮಾಡಲಾಗಿದೆ.

**. ಬರೆಯದ ಕೈಗಳು ಬರೆಯುತ್ತಿವೆ : ಪುನಶ್ಚೇತನ ಕಾರ್ಯಕ್ರಮ**

ರಾಯಚೂರು, ಗುಲ್ಬರ್ಗಾ, ಚಾಮರಾಜನಗರ, ಕೊಪ್ಪಳ, ಬಿಜಾಪುರ, ಬಾಗಲಕೋಟೆ, ಬಳ್ಳಾರಿ ಮತ್ತು ಬೀದರ್ ಜಿಲ್ಲೆಗಳ ಸಾಕ್ಷರತಾ ಪ್ರಮಾಣವು ರಾಜ್ಯದ ಸಾಕ್ಷರತಾ ಪ್ರಮಾಣಕ್ಕಿಂತ ಕಡಿಮೆ ಇದೆ. ವಿಶೇಷವಾಗಿ ಈ ಜಿಲ್ಲೆಗಳ ಮಹಿಳೆಯರ ಸಾಕ್ಷರತಾ ಪ್ರಮಾಣವು ಶೇ. ೫೦ಕ್ಕಿಂತ ಕಡಿಮೆ ಇದೆ.

ಹೈದರಾಬಾದ್ ಕರ್ನಾಟಕ ಅಭಿವೃದ್ಧಿ ಮಂಡಳಿ ರಚಿಸಿದ್ದರೂ ಈ ಜಿಲ್ಲೆಗಳು ಸ್ವಾತಂತ್ರ್ಯ ಪೂರ್ವದಿಂದಲೂ ಅತ್ಯಂತ ಹಿಂದುಳಿದಿವೆ. ಡಾ|| ನಂಜುಂಡಪ್ಪ ವರದಿಯಲ್ಲಿ ಈ ಬಗ್ಗೆ ಮಾನವ ಅಭಿವೃದ್ಧಿ ಅಂಶಗಳ ಮೇಲೆ ಒತ್ತುಕೊಟ್ಟು ಮೂಲಭೂತ ಸೌಕರ್ಯಗಳನ್ನು ಒದಗಿಸಲು ಆದ್ಯತೆಯ ಮೇರೆಗೆ ಸರ್ಕಾರವು ಕೈಗೆತ್ತಿಕೊಳ್ಳಬೇಕೆಂದು ಆಗ್ರಹಪಡಿಸಲಾಗಿದೆ. ಕರ್ನಾಟಕವು ಏಕೀಕರಣ ಗೊಂಡು ೨೦೦೬ಕ್ಕೆ ೫೦ ವರ್ಷಗಳಾಗುತ್ತವೆ. ಈ ಜಿಲ್ಲೆಗಳಲ್ಲಿ ಅಭಿವೃದ್ಧಿಯು ನಿರೀಕ್ಷಿತ ಪ್ರಮಾಣದಲ್ಲಿ ಆಗಿಲ್ಲ. ಅದಕ್ಕೆ ಮುಖ್ಯ ಕಾರಣ ಅಲ್ಲಿಯ ಅನಕ್ಷರತೆ ಮತ್ತು ಬಡತನವೆಂಬುದನ್ನು ಡಾ|| ನಂಜುಂಡಪ್ಪ ವರದಿ ಎತ್ತಿತೋರಿಸಿದೆ.

ಹೀಗಾಗಿ ಲೋಕ ಶಿಕ್ಷಣ ನಿರ್ದೇಶನಾಲಯವು ಈ ಜಿಲ್ಲೆಗಳಲ್ಲಿ ೨೦೦೭ರ ಸಮಯಕ್ಕೆ ಶೇ. ೮೫ ಸಾಕ್ಷರತೆಯನ್ನು ಸಾಧಿಸುವ ಗುರಿ ಹೊಂದಿದೆ. ಅದರಲ್ಲೂ ಮಹಿಳೆಯರಿಗೆ, ವಿಶೇಷವಾಗಿ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡಗಳ ಮಹಿಳೆಯರಿಗೆ, ಸಾಕ್ಷರತೆ ಒದಗಿಸುವುದು ಪುನಶ್ಚೇತನ ಕಾರ್ಯಕ್ರಮದ ಮುಖ್ಯ ಆಶಯವಾಗಿದೆ. ಈ ಕಾರ್ಯಕ್ರಮದ ಮೂಲಕ ೨೦೦೬–೨೦೦೭ರ ಸಾಲಿನಲ್ಲಿ ಒಟ್ಟು ೧,೦೦,೦೦೦ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿ ಇದೆ. ಇದಕ್ಕಾಗಿ ೧೦ ಸಾವಿರ ಸ್ವಯಂಸೇವಕರು ಕಾರ್ಯ ನಿರ್ವಹಿಸುತ್ತಿದ್ದಾರೆ.

ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲು ಗ್ರಾಮೀಣ ಮಟ್ಟದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಸ್ವಯಂಸೇವಾ ಸಂಸ್ಥೆಗಳನ್ನು ಗುರುತಿಸಿ ಪೂರ್ಣ ಸಾಕ್ಷರತೆ ಸಾಧಿಸಲು ಅವರಿಗೆ ಜವಾಬ್ದಾರಿ ನೀಡಲಾಗಿದೆ. ಸಾಕ್ಷರತಾ ಸಮಿತಿ ಹಾಗೂ ಕಾರ್ಯಕರ್ತರು ಇವರ ಉಸ್ತುವಾರಿ ಮೇಲ್ವಿಚಾರಣೆ ಮಾಡುವ ಹೊಣೆಯನ್ನು ಹೊತ್ತುಕೊಂಡಿದ್ದಾರೆ. ಸಾಕ್ಷರತಾ ಸಮಿತಿ ಹಾಗೂ ಸ್ವಯಂ ಸೇವಾ ಸಂಸ್ಥೆಗಳ ಜಂಟಿ ಸಹಯೋಗದೊಂದಿಗೆ ಇದು ಅನುಷ್ಠಾನಗೊಳ್ಳುತ್ತಿದೆ.

**ಕಲಿಕೆ – ಗಳಿಕೆ**

ವಿಶ್ವದ ಅನಕ್ಷರಸ್ಥರಲ್ಲಿ ಎರಡನೆಯ ಒಂದು ಭಾಗದಷ್ಟು ಮಹಿಳೆಯರೇ ಇದ್ದಾರೆ. ಮಹಿಳಾ ಸಾಕ್ಷರತೆ ಹೆಚ್ಚಿಸುವುದರಿಂದ ಮಕ್ಕಳ ಮರಣದ ಪ್ರಮಾಣ ದಲ್ಲಿನ ಇಳಿತ ಹಾಗೂ ಆರೋಗ್ಯವಂತ ಮಕ್ಕಳ ಪಾಲನೆ, ಶಾಲೆಯಲ್ಲಿ ಮಕ್ಕಳ

**ಕಳೆದ ಹತ್ತು ವರ್ಷಗಳಲ್ಲಿ ಸಾಕ್ಷರತಾ ಪ್ರಮಾಣದ ಏರಿಕೆ (ಶೇಕಡಾವಾರು)**

| ಕ್ರ.ಸ. | ರಾಜ್ಯಗಳು | ಸಾಕ್ಷರತಾ ಪ್ರಮಾಣ ೧೯೯೧ರ ಜನಗಣತಿ | | | ಸಾಕ್ಷರತಾ ಪ್ರಮಾಣ ೨೦೦೧ರ ಜನಗಣತಿ | | | ದಶಕದ ಏರಿಕೆ | | |
|---|---|---|---|---|---|---|---|---|---|---|
| | | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ | ಒಟ್ಟು | ಪುರುಷ | ಮಹಿಳೆ |
| ೧ | ಆಂಧ್ರಪ್ರದೇಶ | ೪೪.೦೯ | ೫೫.೧೩ | ೩೨.೭೨ | ೬೧.೧೧ | ೭೦.೮೫ | ೫೧.೧೭ | ೧೭.೦೨ | ೧೫.೭೨ | ೧೮.೪೫ |
| ೨ | ಮಧ್ಯಪ್ರದೇಶ | ೪೪.೨೦ | ೫೮.೪೨ | ೨೮.೮೫ | ೬೪.೧೧ | ೭೬.೮೦ | ೫೦.೨೮ | ೧೯.೯೧ | ೧೮.೩೮ | ೨೧.೪೩ |
| ೩ | ರಾಜಸ್ಥಾನ | ೩೮.೫೫ | ೫೪.೯೯ | ೨೦.೪೪ | ೬೧.೦೩ | ೭೬.೪೬ | ೪೪.೩೪ | ೨೨.೪೮ | ೨೧.೪೭ | ೨೩.೯೦ |
| ೪ | ಕರ್ನಾಟಕ | ೫೬.೦೪ | ೬೭.೨೬ | ೪೪.೩೪ | ೬೭.೦೪ | ೭೬.೨೯ | ೫೭.೪೫ | ೧೧.೦೦ | ೯.೦೩ | ೧೩.೧೧ |

ದಾಖಲಾತಿಯ ಹೆಚ್ಚಳ, ಜನಸಂಖ್ಯೆ ಏರಿಕೆಯಲ್ಲಿ ಇಳಿಮುಖ ಮತ್ತು ಉನ್ನತ ಮಟ್ಟದ ಉಳಿತಾಯ ಇಂತಹ ಅಂಶಗಳೊಂದಿಗೆ ಇಂದು ಮಹಿಳಾ ಸಾಕ್ಷರತೆಯನ್ನು ಹೋಲಿಸಿ ನೋಡಲಾಗುತ್ತಿದೆ. ಹೀಗಾಗಿ ಮಹಿಳಾ ಸಾಕ್ಷರತೆಗೆ ಹೆಚ್ಚಿನ ಒತ್ತು ಇತ್ತೀಚಿನ ದಿನಗಳಲ್ಲಿ ನೀಡಲಾಗುತ್ತಿದೆ. ಅದರ ಫಲವೇ ಕಲಿಕೆ - ಗಳಿಕೆ ಕಾರ್ಯಕ್ರಮ. ಕರ್ನಾಟಕದಮಟ್ಟಿಗೆ ಹೇಳುವುದಾದರೆ, ೧,೨೫,೦೦೦ಕ್ಕೂ ಹೆಚ್ಚು ಸ್ವ-ಸಹಾಯ ಸಂಘಗಳು ರಚನೆಗೊಂಡಿವೆ. ಇದರಲ್ಲಿ ೮ ಲಕ್ಷ ಅನಕ್ಷರಸ್ಥ ಮಹಿಳಾ ಸದಸ್ಯರು ಇದ್ದಾರೆ.

ಈ ಹಿನ್ನೆಲೆಯಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯ ಸಹಯೋಗದೊಂದಿಗೆ ಸ್ವ-ಸಹಾಯ ಸಂಘದ ಅನಕ್ಷರಸ್ಥ ಮಹಿಳೆಯರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿಯನ್ನಿಟ್ಟುಕೊಂಡು 'ಕಲಿಕೆ - ಗಳಿಕೆ' ಜೊತೆಗೆ ತಮ್ಮ ಸಂಘದ ಲೆಕ್ಕಪತ್ರ ಹಾಗೂ ವ್ಯಾವಹಾರಿಕ ಜ್ಞಾನವನ್ನು ಅಭಿವೃದ್ಧಿಪಡಿಸಲು ಈ ಕಾರ್ಯಕ್ರಮವನ್ನು ಯಶಸ್ವಿಯಾಗಿ ಅನುಷ್ಠಾನಗೊಳಿಸುತ್ತಿದೆ. ಕಲಿಕೆ -ಗಳಿಕೆ ಕಾರ್ಯಕ್ರಮದಲ್ಲಿ ಒಟ್ಟು ೮ ಲಕ್ಷ ಅನಕ್ಷರಸ್ಥರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿ ಇದೆ.

ಈ ಯೋಜನೆಯಡಿಯಲ್ಲಿ ಮಹಿಳಾ ಮತ್ತು ಮಕ್ಕಳ ಕಲ್ಯಾಣ ಇಲಾಖೆಯು ರಚಿಸಿರುವ ಸಂಘಗಳಲ್ಲಿರುವ ಅಕ್ಷರಸ್ಥ ಮಹಿಳೆಯರು ಅದೇ ಸಂಘದ ಅನಕ್ಷರಸ್ಥರಿಗೆ ಅಕ್ಷರ ಕಲಿಸುತ್ತಾರೆ. ಒಂದು ವೇಳೆ ಆ ಸಂಘದಲ್ಲಿ ಅಕ್ಷರಸ್ಥ ಮಹಿಳೆಯರು ಇಲ್ಲದಿದ್ದಲ್ಲಿ ಅಂಗನವಾಡಿ ಕಾರ್ಯಕರ್ತರು ಅಥವಾ ಸ್ವಯಂ ಸೇವಕರು ಕಲಿಸುವ ವ್ಯವಸ್ಥೆ ಮಾಡಲಾಗಿದೆ. ಸಾಕ್ಷರತೆ, ಎಸ್‌ಜಿಎಸ್‌ಆರ್‌ವೈ ಮತ್ತು ಸ್ವಯಂಸೇವಾ ಸಂಸ್ಥೆಗಳು ಮಾಡಿರುವ ಸ್ವ - ಸಹಾಯ ಸಂಘಗಳ ಅಡಿಯಲ್ಲಿ ಬರುವ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕ್ರಮ ಇದೆ.

**ಕಿರು ಯೋಜನೆ**

ರಾಜ್ಯದಲ್ಲಿ ಅಭಿವೃದ್ಧಿಯಿಂದ ವಂಚಿತವಾದ ಇನ್ನೂ ಕೆಲವು ಗ್ರಾಮಗಳು ಇವೆ. ಪ್ರಗತಿಯ ಪಥದಲ್ಲಿ ಹಿಂದೆಬಿದ್ದಿರುವ ಗ್ರಾಮಗಳಿಗೆ ವಿಶೇಷ ಒತ್ತು ಕೊಡುವುದು ಈ ಯೋಜನೆಯ ವಿಶೇಷ. ಒಂದು ಗ್ರಾಮ ಪಂಚಾಯಿತಿಯ ೫ ಹಳ್ಳಿಗಳನ್ನು ಆಯ್ಕೆಗೊಳಿಸಿ, ಸಮೀಕ್ಷೆ ನಡೆಸುವುದು. ಅದಕ್ಕೆ ೫ ತಿಂಗಳ ಕಲಿಕೆಯ ಕ್ರಿಯಾಯೋಜನೆ ರೂಪಿಸಿ ಜಾರಿಗೊಳಿಸುವುದು. ಈ ಜವಾಬ್ದಾರಿಯನ್ನು ಸ್ವಯಂ ಸೇವಾ ಸಂಸ್ಥೆಗಳನ್ನು ಗುರುತಿಸಿ ಅವರಿಗೆ ವಹಿಸಲಾಗಿದೆ. ಸಂಪರ್ಕ ವ್ಯಕ್ತಿಗಳು ಮೇಲ್ವಿಚಾರಣೆ ನಡೆಸಿ ಸ್ವಯಂಸೇವಕರು ಅಕ್ಷರ ಕಲಿಸುವುದು ಜೆಎಸ್‌ಎಸ್ – ಎನ್‌ಜಿಒ ಮೇಲ್ವಿಚಾರಣೆ ನಡೆಸುವುದು. ಪ್ರತಿ ಜಿಲ್ಲೆಯ ೫ ಹಳ್ಳಿಗಳು ಒಟ್ಟು ಅನಕ್ಷರಸ್ಥರ ಗುರಿ ೨೫೦೦ರಂತೆ ಒಟ್ಟು ೨೩ ಜಿಲ್ಲೆಗಳಿಂದ ೫೭,೫೦೦ ಜನರನ್ನು ಅಕ್ಷರಸ್ಥರನ್ನಾಗಿ ಮಾಡುವ ಗುರಿಯನ್ನು ಹೊಂದಿದೆ.

**ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ**

ಒಬ್ಬ ವಿದ್ಯಾರ್ಥಿ ಇಬ್ಬರು ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಕಾರ್ಯಕ್ರಮವನ್ನು 'ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ' ಎಂದು ಕರೆಯಲಾಗುತ್ತಿದೆ. ಈ ಕಾರ್ಯಕ್ರಮದಲ್ಲಿ ೯ನೇ ತರಗತಿ ಹಾಗೂ ಮೊದಲ ಪಿ.ಯು.ಸಿ. (ಕಲೆ ಮತ್ತು ವಾಣಿಜ್ಯ) ವಿದ್ಯಾರ್ಥಿಗಳನ್ನು ಮಾತ್ರ ಬಳಸಿಕೊಳ್ಳಲಾಗುತ್ತಿದೆ. ಈ ವಿದ್ಯಾರ್ಥಿಗಳಿಗೂ ತಮ್ಮ ವಿದ್ಯಾಭ್ಯಾಸಕ್ಕೆ ತೊಂದರೆಯಾಗದ ರೀತಿಯಲ್ಲಿ ತೊಡಗುವ ವಿದ್ಯಾರ್ಥಿಗೆ ತಾನು ವ್ಯಾಸಂಗ ಮಾಡುತ್ತಿರುವ ಲಲಿತ ಕಲೆ ಮತ್ತು ಯೋಜನೆಯಲ್ಲಿ ತಲಾ ೧೦ ಅಂಕಗಳು ಅಂದರೆ ಒಟ್ಟು ೨೦ ಅಂಕಗಳನ್ನು ವಿದ್ಯಾರ್ಥಿ ಪಡೆದುಕೊಳ್ಳುತ್ತಿದ್ದಾನೆ. ಈ ಕಾರ್ಯಕ್ರಮದಲ್ಲಿ ಈಗಾಗಲೇ ಒಟ್ಟು ರಾಜ್ಯದಲ್ಲಿ ೨.೫ ಲಕ್ಷ ವಿದ್ಯಾರ್ಥಿಗಳು ಪಾಲ್ಗೊಂಡು ೫ ಲಕ್ಷ ಅನಕ್ಷರಸ್ಥರಿಗೆ ಅಕ್ಷರ ಕಲಿಸುವ ಮಹತ್ವದ ಕಾರ್ಯದಲ್ಲಿ ತೊಡಗಿಕೊಂಡಿದ್ದಾರೆ. ಸಾರ್ವಜನಿಕರು ಮತ್ತು ಶಿಕ್ಷಣ ಇಲಾಖೆಯ ಸಹಯೋಗದೊಂದಿಗೆ ಈ ಕಾರ್ಯಕ್ರಮವನ್ನು ಅನುಷ್ಠಾನಗೊಳಿಸಲಾಗುತ್ತಿದೆ.

ಇಂತಹ ಪ್ರಯತ್ನಗಳು ಕ್ಯೂಬಾದಲ್ಲಿ ಜರುಗಿದ್ದವು. ೧೯೬೮ರಲ್ಲಿ ಫಿಡೆಲ್ ಕ್ಯಾಸ್ಟ್ರೋರವರು, ಎಲ್ಲಾ ಶಾಲಾ - ಕಾಲೇಜುಗಳನ್ನು ಒಂದು ವರ್ಷ ಕಾಲ ಮುಚ್ಚಿ ಅಧ್ಯಾಪಕರು – ವಿದ್ಯಾರ್ಥಿಗಳು ಹಳ್ಳಿಗೆ ಮತ್ತು ಕಾರ್ಖಾನೆಗಳಿಗೆ ತೆರಳಿ ಅನಕ್ಷರಸ್ಥರಿಗೆ ಅಕ್ಷರ ಕಲಿಸಿ, ನಂತರ ಬನ್ನಿ ಎನ್ನುವ ಕರೆಯನ್ನು ನೀಡಿದ್ದರು.

ಇದೇ ಮಾತನ್ನು ಇಂದು ಭಾರತದ ರಾಷ್ಟ್ರಪತಿ ಅಬ್ದುಲ್ ಕಲಾಂರವರು ವಿದ್ಯಾರ್ಥಿಗಳು ರಾಷ್ಟ್ರ ಕಟ್ಟುವ ಕೆಲಸದಲ್ಲಿ ತೊಡಗಬೇಕು ಎಂದು ವಿದ್ಯಾರ್ಥಿ ಸಮೂಹಕ್ಕೆ ಕರೆಕೊಟ್ಟಿದ್ದಾರೆ. ಹೀಗಾಗಿ ವಿದ್ಯಾರ್ಥಿಗಳ ಮೂಲಕ ಸಾಕ್ಷರತೆ



ಕಾರ್ಯಕ್ರಮ ಕೈಗೆತ್ತಿಕೊಳ್ಳಲಾಗಿದೆ. ಸಾಕ್ಷರತಾ ಸಮಿತಿಗಳು ಗುರುತಿಸಲಾರದ ಅನಕ್ಷರಸ್ಥರನ್ನು ವಿದ್ಯಾರ್ಥಿಗಳೇ ಗುರುತಿಸಿ ಅಕ್ಷರ ಕಲಿಸುತ್ತಿರುವುದಕ್ಕೆ ವಿದ್ಯಾರ್ಥಿಗಳನ್ನು ಅಭಿನಂದಿಸಲೇಬೇಕು.

**ಮಹಿಳಾ ಕಲಿಕೆ – ಜೀವನ – ಕೌಶಲ್ಯ**

ಹೊಟ್ಟೆಪಾಡಿಗಾಗಿ ಬೀದಿ ಬದಿಯಲ್ಲಿ ಕೂತು ಸೊಪ್ಪು, ತರಕಾರಿ, ಹೂ ಮಾರುವ ಮೂಲಕ ತುತ್ತಿನ ಚೀಲ ತುಂಬುವ ಮಹಿಳೆಯರು ಒಂದೆಡೆ. 'ಸ್ಲಂ' ಜನರು ನಗರದ ಜನರ ಸೇವೆ ಮಾಡುತ್ತ ಮನೆ ಕೆಲಸದಲ್ಲಿ ತೊಡಗಿರುವ ಮಹಿಳೆಯರು ಮತ್ತೊಂದೆಡೆ. ಚಾರ್ಲಿ ಚಾಪ್ಲಿನ್‌ನ ಸಿನಿಮಾ 'ದಿ ಗ್ರೇಟ್ ಡಿಕ್ಟೇಟರ್' ನೋಡಿದ್ದರೆ ನಿಮಗೆ ನೆನಪಾಗಬಹುದು 'ಕುರಿಗಳ ದೃಶ್ಯ ತೋರಿಸುತ್ತಿದ್ದಂತೆ ತಕ್ಷಣ ಕಾರ್ಮಿಕರ ದೃಶ್ಯ' ತೋರಿಸುತ್ತಾನೆ. ಕಾರ್ಮಿಕರು ಕುರಿಗಳ ಹಾಗೇ ಕೆಲಸ ಮಾಡುತ್ತಿರುವುದನ್ನು ಸಾಂಕೇತಿಕವಾಗಿ ದುಡಿಯುವ ವರ್ಗದ ಬದುಕನ್ನು ಚಿತ್ರಿಸುತ್ತದೆ. ಹಾಗೆಯೇ ಇಂದು ಮೈಸೂರು ರಸ್ತೆ, ಪೀಣ್ಯ ಕಡೆಗಳಲ್ಲಿ ಗಾರ್ಮೆಂಟ್ ಫ್ಯಾಕ್ಟರಿಗಳಿಗೆ ಹೋಗುವ ಸಾವಿರಾರು ಮಹಿಳೆಯರು ಸಂಜೆ ೬ ಗಂಟೆಯಾದರೆ ಫ್ಯಾಕ್ಟರಿಯಿಂದ ಗುಂಪು ಗುಂಪಾಗಿ ಹೊರಬರುವುದನ್ನು ಕಾಣುತ್ತೇವೆ.

ಇಂತಹ ಮಹಿಳೆಯರು ಒಂದಲ್ಲ ಒಂದು ಕಾರಣಕ್ಕೆ ಅಕ್ಷರದಿಂದ ವಂಚಿತರಾಗಿದ್ದಾರೆ. ಹಳ್ಳಿಯಿಂದ ಪಟ್ಟಣಕ್ಕೆ ವಲಸೆ ಬರುವ ಮಹಿಳೆ ಅನಕ್ಷರತೆಯಿಂದ ಆಗುವ ಅವಮಾನವನ್ನು ನಗರ/ಪಟ್ಟಣಗಳಲ್ಲಿ ಸಹಿಸಲಾಗುತ್ತಿಲ್ಲ. ಅಂತಹ ಒಬ್ಬ ಮಹಿಳೆ ಕಲಿಕೆ – ಜೀವನ – ಕೌಶಲ್ಯ ಶಿಬಿರದಲ್ಲಿ ಕಲಿತು ಆತ್ಮಾಭಿಮಾನದಿಂದ 'ಅವಮಾನ ಅಕ್ಷರ ಕಲಿಸಿತು' ಎಂಬ ಮಾತುಗಳನ್ನು ಆಡಿದಾಗ 'ನೀಡ್ ಬೇಸ್ಡ್ ಲಿಟರಸಿ' ಅಥವಾ 'ಡಿಮ್ಯಾಂಡ್ ಬೇಸ್ಡ್ ಲಿಟರಸಿ' ಎಂಬ ಯೋಜನೆಗೆ ಹೊಸ ಆಯಾಮ ದೊರಕಿತು. ಇಂದು ಈ ಕಾರ್ಯಕ್ರಮಕ್ಕೆ ನಿರೀಕ್ಷೆಗಿಂತ ಹೆಚ್ಚು ಕಲಿಕಾರ್ಥಿಗಳಿಂದ ಬೆಂಬಲ, ಉತ್ಸಾಹ ಮತ್ತು ಸ್ವೀಕಾರ ಮನೋಭಾವವನ್ನು ಕಾಣಲು ಸಾಧ್ಯವಾಗಿದೆ. ಜೊತೆಗೆ, ಲಿಟರಸಿ ಮತ್ತು ಲೈವ್ಲಿಹುಡ್ ಎಂಬ ಯೋಜನೆಗಳೂ ಇವೆ.

ರಾತ್ರಿ ಶಾಲೆ ಎಂದರೆ ವಯಸ್ಕರ ಶಿಕ್ಷಣ ಎಂಬ ಕಾರ್ಯಕ್ರಮ ಜಾರಿಯಲ್ಲಿದೆ. ಆದರೆ ಸಾಕ್ಷರತೆಯ ವ್ಯಾಖ್ಯಾನ ಮತ್ತು ಕಲಿಕಾ ಸಮಯ ಬದಲಾದ ಕಾಲಮಾನಕ್ಕೆ ತಕ್ಕಂತೆ ಬದಲಾಗಿದೆ. ಇಂತಹ ಯೋಜನೆಗಳು ಅಕ್ಷರ ಕಲಿಸಲು ಸಮಯ ಕೂಡುವುದಿಲ್ಲ ಎಂಬ ಮಾತನ್ನು ಸುಳ್ಳಾಗಿಸಿವೆ. ಅಕ್ಷರ ಕಲಿಯಲೇಬೇಕೆಂಬ ದೃಢಮನೋಭಾವದ ಮಹಿಳೆಯರು ಇಂದು ಹಗಲು ಹೊತ್ತಿನಲ್ಲೂ ಅಕ್ಷರ ಕಲಿಯುತ್ತಿರುವುದು ಈ ಕಾರ್ಯಕ್ರಮದ ವಿಶೇಷ. ಇವೇ ಅಲ್ಲದೆ ಕಡಿಮೆ ಸಾಕ್ಷರತೆ ಇರುವ ಹಳ್ಳಿಗಳತ್ತ ಹೆಚ್ಚು ಗಮನ ನೀಡುವ, ಅನಕ್ಷರಸ್ಥ ಗ್ರಾಮ ಪಂಚಾಯಿತಿ ಸದಸ್ಯರನ್ನು ಸಾಕ್ಷರರನ್ನಾಗಿ ಪರಿವರ್ತಿಸುವ, ಹೆಚ್ಚು ಹೆಚ್ಚು ಸ್ವಯಂಸೇವಕರನ್ನು ಈ ಯೋಜನೆಗಳಲ್ಲಿ ತೊಡಗಿಸುವ ಮತ್ತು ಕಲಿಕಾರ್ಥಿಗಳ ಮೌಲ್ಯ ಮಾಪನ ಮಾಡುವ ದಿಶೆಯಲ್ಲಿ ದಿಟ್ಟ ಹೆಜ್ಜೆ ಇಡಲಾಗುತ್ತಿದೆ. ಇಲ್ಲಿ ಕಲಿಕೆ ವೇಗವಾಗಿ, ಕೇಂದ್ರೀಕೃತವಾಗಿ ಆಸಕ್ತಿದಾಯಕವಾಗಿ – ವೃತ್ತಿಕೌಶಲ್ಯದ ಆಕರ್ಷಣೆಯಿಂದ ಯಶಸ್ವಿ ಕಲಿಕಾ ಪ್ರಯೋಗವಾಗಿದೆ.

ಅಕ್ಷರ ಪ್ರೇಮಿಗಳು ಕೈಜೋಡಿಸಿ ಅಕ್ಷರದ ತೇರನ್ನು ಎಳೆಯಲು ಒಗ್ಗಟ್ಟಿನಿಂದ, ದೃಢತೆಯಿಂದ ಮುಂದೆ ಬರಬೇಕಾಗಿದೆ. ಆಗ ನಿಜವಾಗಲೂ ಶೇಕಡಾ ೮೫ ಸಾಕ್ಷರತೆಯನ್ನು ಕರ್ನಾಟಕ ಸಾಧಿಸಲು ಸಾಧ್ಯವಾಗುತ್ತದೆ.

ಎಂ. ಹೆಚ್. ಶ್ರೀಧರಮೂರ್ತಿ
ಕಾರ್ಯದರ್ಶಿ, ಬೆಂಗಳೂರು ಸಿಟಿ ಸಾಕ್ಷರತಾ ಸಮಿತಿ, ಬೆ.ಮ.ಪಾ. ಜೂನಿಯರ್ ಕಾಲೇಜ್ ಆವರಣ, ಶಿವಾಜಿನಗರ ಬಸ್‌ನಿಲ್ದಾಣದ ಹಿಂಭಾಗ, ಟಾಸ್ಕರ್ ಟೌನ್, ಶಿವಾಜಿನಗರ, ಬೆಂಗಳೂರು - ೫೬೦ ೦೫೧

# ರಾಷ್ಟ್ರ ನಿರ್ಮಾಣದಲ್ಲಿ ಯುವಕರ ಪಾತ್ರ

**ಯಾ**ವುದೇ ಒಂದು ದೇಶದ ಅಭಿವೃದ್ಧಿಯಲ್ಲಿ ಅಲ್ಲಿಯ ಯುವಶಕ್ತಿಯ ಕೊಡುಗೆ ನಿರ್ಣಾಯಕವಾದುದು. ಇದು ಅಲ್ಲಿಯ ಯುವಶಕ್ತಿಯನ್ನು ಸರಿಯಾದ ರೀತಿಯಲ್ಲಿ ಬಳಸಿದಾಗ ಮಾತ್ರ ಸಾಧ್ಯ. ಇಂದು ಅಭಿವೃದ್ಧಿಶೀಲ ರಾಷ್ಟ್ರಗಳಷ್ಟೇ ಅಲ್ಲದೆ, ಮುಂದುವರಿದ ದೇಶಗಳೂ ಕೂಡ ಈ ಯುವ ಶಕ್ತಿಯನ್ನು ಒಂದು ಸಂಪತ್ತೆಂದು ಪರಿಗಣಿಸಿವೆ. ದೇಶದ ಯುವಶಕ್ತಿಯನ್ನು ಗಮನದಲ್ಲಿರಿಸಿಕೊಂಡು ಎಲ್ಲೆಡೆಯೂ ದೃಷ್ಟಿ ಹಾಯಿಸಿದರೆ ಪ್ರತಿಯೊಂದು ಕ್ಷೇತ್ರದ ಅದ್ಭುತ ಪ್ರಗತಿಯ ಹಿಂದೆಯೂ ಯುವಜನರ ಸಾಧನೆ ಎದ್ದು ಕಾಣುತ್ತದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಸೆಟೆದು ನಿಂತು, ದೇಶವನ್ನು ದಾಸ್ಯದಿಂದ ಮುಕ್ತಗೊಳಿಸಿದ ನಮ್ಮ ಸಹೋದರರನ್ನು ಮರೆಯಲಾದೀತೆ ? ಆದರೆ ದೇಶದ ಭವಿಷ್ಯವನ್ನು ನಿರ್ಧಾರ ಮಾಡುವ ರಾಜಕೀಯ ಕ್ಷೇತ್ರದಲ್ಲಿ ಸಮರ್ಥ ಯುವಶಕ್ತಿಯ ಬಳಕೆ ಇನ್ನೂ ಆಗಬೇಕಾದ ಅನಿವಾರ್ಯತೆ ಇದೆ. ಹಳೆ ಬೇರು, ಹೊಸ ಚಿಗುರು ಸೇರಿ ಅಭಿವೃದ್ಧಿಯ ಅಭಿಯಾನ ಆರಂಭವಾಗಬೇಕು. ವರ್ತಮಾನದಲ್ಲಿ ನಿಂತು ಇತಿಹಾಸದ ಪುಟಗಳನ್ನು ಅವಲೋಕಿಸಿದರೆ ಅಲ್ಲಿಯೂ ಯುವಜನಾಂಗದ ಸಾಧನೆಯೇನೂ ಕಡಿಮೆ ಇಲ್ಲ. ಪ್ರಪಂಚದಲ್ಲಾದ ಕ್ರಾಂತಿಗಳು, ವೈಜ್ಞಾನಿಕ ಸಂಶೋಧನೆಗಳು, ಅನ್ವೇಷಣೆ, ಆವಿಷ್ಕಾರಗಳು, ಹೊಸತನದ ಹುಡುಕಾಟಗಳು... ಹೀಗೆ ಎಲ್ಲ ರಂಗಗಳಲ್ಲೂ ಇವರ ಉತ್ಸಾಹ, ಪ್ರಾಮಾಣಿಕತೆ ಹಾಗೂ ಸಾಹಸಗಳೇ ದೇಶದ ಬಂಡವಾಳವಾಗಿವೆ. ಯುವಕರೇ ದೇಶದ ಶಕ್ತಿ. ಇವರು ತಮ್ಮ ಇಚ್ಛಾಶಕ್ತಿ, ಸಂಕಲ್ಪಶಕ್ತಿ, ಕ್ರಿಯಾಶಕ್ತಿಗಳನ್ನೂ ಉಪಯೋಗಿಸಿಕೊಂಡು, ಸೃಜನಶೀಲತೆಯಿಂದ ಮುಂದುವರಿದರೆ ಈ ದೇಶದ ಸಂಪತ್ತಾಗುವರು. ಯುವಕರು ಇಡುವ ಪ್ರತಿಯೊಂದು ಹೆಜ್ಜೆಯಲ್ಲೂ ದೇಶದ ಭವಿಷ್ಯ ಅಡಗಿದೆ ಎಂಬ ಮಾತು ಸತ್ಯ ಹಾಗೂ ನಿತ್ಯ ನೂತನ. ಶಕ್ತಿಶಾಲಿ, ಉತ್ಸಾಹಿ, ಚೈತನ್ಯಯುಕ್ತ ಯುವ ಜನರಿಂದಲೇ ನಾಡು ಕಟ್ಟುವ ಕಾರ್ಯವಾಗಬೇಕು.

ಯುವಜನತೆ ಇಂದು ವರ್ಷಕಾಲದಲ್ಲಿ ಹರಿವ ಹೊಳೆಯಂತಿದ್ದಾರೆ. ಧೈರ್ಯ, ಸಾಹಸ, ಸಹವಾಸ, ಅಭ್ಯಾಸ, ಆತ್ಮವಿಶ್ವಾಸ, ಸ್ವಾತಂತ್ರ್ಯಗಳ ಒಟ್ಟು ಮೊತ್ತ ಯುವಶಕ್ತಿ ಎಂದು ಹೇಳಬಹುದು. ಎಳೆತನದ ಮುಗ್ಧತೆಯನ್ನು ದಾಟಿ, ಹಿರಿತನದ ಹೊಸ್ತಿಲಿನತ್ತ ನಡೆಯುವ ಬೆಳೆ ಬಾಳುವ ಸಮಯ ಇದಾಗಿದೆ. ಇದು ಕಂಡು ಕೇಳಿದ್ದನ್ನೆಲ್ಲಾ ಪ್ರಶ್ನಿಸುವ ಮತ್ತು ಪರೀಕ್ಷಿಸುವ ಕಾಲ. ಇದು ಅತ್ಯಂತ ಸೂಕ್ಷ್ಮ ಅವಧಿಯೂ ಹೌದು. ಅನ್ಯಾಯ, ಅಸಮತೆಗಳ ವಿರುದ್ಧ ಹೋರಾಡಬಯಸುವ ವಯಸ್ಸು. ಒಮ್ಮೊಮ್ಮೆ ಭಾವೋದ್ವೇಗದ ಭರದಲ್ಲಿ ಹಳಿತಪ್ಪಿ ತಾನೇ ಅಂತಹ ಅನ್ಯಾಯ, ಅನಾಹುತಗಳಿಗೆ ಕಾರಣವಾಗಲೂಬಹುದು. ಇದಕ್ಕೊಂದು ಉತ್ತಮ ಉದಾಹರಣೆ ನಕ್ಸಲ್ ಚಳುವಳಿ. ಯುವಕರು ಹಾಗಾಗಲು ಬಿಡದಿರುವುದೇ ನಮ್ಮ ಮುಂದಿರುವ ಸವಾಲು ಕೂಡ.

ಯೌವನದ ಶಕ್ತಿ ಸಾಹಸಗಳು, ಆಸೆ ಆಕಾಂಕ್ಷೆಗಳು ಒಂದು ಪ್ರವಾಹವಿದ್ದಂತೆ. ಯೋಗ್ಯ ಅಣೆಕಟ್ಟು ನಿರ್ಮಿಸಿ ಸೂಕ್ತ ನಾಲೆಗಳಲ್ಲಿ ಹರಿಸದಿದ್ದರೆ ಈ ಪ್ರವಾಹ ಹುಚ್ಚೆದ್ದು ಹರಿಯುತ್ತದೆ. ತನ್ನ ಹಾದಿಯಲ್ಲಿ ಸಿಕ್ಕಿದ್ದನ್ನೆಲ್ಲಾ ಕೊಚ್ಚಿಕೊಂಡುಹೋಗುತ್ತದೆ.

ಇಷ್ಟೆಲ್ಲಾ ಅಂಶಗಳನ್ನೂ ಮೈಗೂಡಿಸಿಕೊಂಡ ಯುವಜನತೆ ಎಲ್ಲೋ ಒಂದೆಡೆ ಸೊರಗಿದಂತೆನಿಸುತ್ತದೆ. ಪ್ರಸಕ್ತ ಪ್ರಪಂಚದ ವ್ಯವಸ್ಥೆಗಳ ಕುರಿತ ಅತೃಪ್ತಿ ಅವರ ನಡವಳಿಕೆಗಳಲ್ಲಿ ಎದ್ದುಕಾಣುತ್ತಿದೆ. ಅವರಿಗೆ ಸಮಾಜದ ಹಿತಕ್ಕಿಂತಲೂ ಸ್ವಸುಖವೇ ಪ್ರಮುಖವಾಗಿದೆ. ಎಲ್ಲ ಆದರ್ಶಗಳೂ ಹೊಗೆಯ ಮೋಡಗಳಾಗಿವೆ. ಅವರ ಆದರ್ಶಗಳು ಯಾವುದೋ ಬಾವಿಯಲ್ಲಿ ಹೂತಿಟ್ಟ ಕಲ್ಲುಗಳಾಗಿವೆ. ಗುರಿಯ ನಿರ್ಧಾರ ಹಾಗೂ ಸವಾಲುಗಳನ್ನು ಎದುರಿಸುವ ಛಲ ಇವೆರಡರಲ್ಲೂ ಯುವಜನಾಂಗ ಸೋಲುತ್ತಿದೆ. ಇವೆಲ್ಲದರ ಮೂಲ ಕಾರಣವನ್ನು ಹುಡುಕಿದರೆ ಥಟ್ಟನೆ ಗೋಚರಿಸುವುದು ಮಾರ್ಗದರ್ಶನದ ಕೊರತೆ.

ಸಾವಿಲ್ಲದ ಮನೆಯಿಲ್ಲದಂತೆ ಸಮಸ್ಯೆಗಳಿಲ್ಲದ ವ್ಯಕ್ತಿಯೂ ಸಿಗಲಾರ. ಸಮಸ್ಯೆಗಳನ್ನೂ ಸವಾಲೆಂಬಂತೆ ಸ್ವೀಕರಿಸಿ ಮುಂದೆ ನಡೆದರೆ ಉತ್ತರ ಸುಲಭ. ಸಾಧಾರಣವಾಗಿ ನಾವೆಲ್ಲರೂ ಮಾರ್ಗದರ್ಶನದ ಕೊರತೆ ಎಂಬ ಹಣೆಪಟ್ಟಿಯನ್ನು ಎಲ್ಲೆಡೆಯೂ ಅಂಟಿಸಿಬಿಡುತ್ತೇವೆ. ಕಣ್ತೆರೆದು ನೋಡಿದರೆ ನಮ್ಮ ಸುತ್ತಮುತ್ತಲ ಪರಿಸರವೇ ನಮಗೆ ಮಾರ್ಗದರ್ಶಿಯಾಗಬಹುದು, ನೆರೆಮನೆಯ ಕರ್ಮಜೀವಿಯು ನಮಗೆ ಮಾರ್ಗದರ್ಶಕನಾಗುತ್ತಾನೆ.

ಯುವಜನತೆ ನಿಷೇಧಾತ್ಮಕ ಚಿಂತನೆಗಳಿಂದ ಹೊರಬರಬೇಕು. ಸ್ವಾವಲಂಬನೆಯ ಕನಸುಗಳನ್ನು ಕಾಣಬೇಕು. ಎಲ್ಲ ಕಳೆದುಹೋದರೂ ಇನ್ನೂ ''ನಾನು'' ಇದ್ದೇನೆ ಎನ್ನುವ ಅದಮ್ಯ ಉತ್ಸಾಹ, ನಂಬಿಕೆಯೇ ಬದುಕಿನ ಮೂಲದ್ರವ್ಯ. ಯಾವುದೇ ಕೆಲಸ ಅಥವಾ ಆಲೋಚನೆ ಮಾಡುವಾಗ ಬದಲಾಗುತ್ತೇನೆಂಬ ದೃಢವಿಶ್ವಾಸದಿಂದ ಮುನ್ನುಗ್ಗಿದರೆ ಯಶಸ್ಸು ಕಾಣಲು ಸಾಧ್ಯವಾಗುತ್ತದೆ.

ನಾವು ನಮ್ಮ ಭೂತವನ್ನು ಬದಲಿಸಲು ಸಾಧ್ಯವಿಲ್ಲ. ಭೂತದ ಕತೆ ಹೇಳುತ್ತಾ ವರ್ತಮಾನವನ್ನೂ ಕಡೆಗಣಿಸಿದರೆ ನಾವು ನಿಂತ ನೀರಾಗುತ್ತೇವೆ. ದೇಶ ಕಟ್ಟುವಲ್ಲಿ ನಮ್ಮ ಪಾತ್ರವನ್ನರಿತು ಮುನ್ನಡೆಯಬೇಕು. ಹೌದು, ಹಳ್ಳಿಹಳ್ಳಿಗಳೂ ಇಂದು ಸೇವಾಸಕ್ತರನ್ನೂ ಕಾಯುತ್ತಿವೆ. ಬದಲಾವಣೆ ಕಾಣಬಯಸುತ್ತಿವೆ. ಈ ಬದಲಾವಣೆಯ ನೇತಾರರು ಇನ್ನಾರೋ ಆಗಿರಲು ಸಾಧ್ಯವಿಲ್ಲ. ನಮ್ಮ ಹಳ್ಳಿಗಳ ಏಳ್ಗೆಗೆ ನಾವೇ ಶ್ರಮಿಸಬೇಕು. ಆ ಮೂಲಕ ದೇಶಕಟ್ಟುವ

●

ಬಿ. ಟಿ. ಪೋಷಿಣಿ



ಕೆಲಸದಲ್ಲಿ ತೊಡಗಬೇಕು. ಪ್ರತಿಯೊಬ್ಬ ವ್ಯಕ್ತಿಯಲ್ಲಿಯೂ ದಿವ್ಯತೆ ಇದೆ. ಅದನ್ನು ಪ್ರಕಟಪಡಿಸಲು ಒಂದು ವೇದಿಕೆ ಈ ಸೇವಾಕ್ಷೇತ್ರ. ನಮ್ಮ ಹಳ್ಳಿಗಳ ಶಾಲೆ ಹಾಗೂ ಶೈಕ್ಷಣಿಕ ಸುಧಾರಣೆ, ಊರಿನ ನೈರ್ಮಲ್ಯ, ಊರಿನ ನೆಮ್ಮದಿಗೆ ಭಂಗ ತರುವ ಸಾರಾಯಿ, ನೀರಾಗಳಂತಹ ಚಟುವಟಿಕೆಗಳ ನಿಷೇಧ, ಚಿಕ್ಕ ವಯಸ್ಸಿನ ವಿವಾಹ, ಬಾಲಕಾರ್ಮಿಕ ಪದ್ಧತಿಯ ನಿರ್ಮೂಲನೆ, ಹೆಣ್ಣುಮಕ್ಕಳ ಶಿಕ್ಷಣದ ಕೊರತೆಯಂತಹ ಸಮಸ್ಯೆಗಳನ್ನು ನಿವಾರಿಸಲು ಅಲ್ಲಿಯ ಯುವಕರಿಂದಲೇ ಸಾಧ್ಯ. ಬಿಂದುವಿನಿಂದಲೇ ಸಿಂಧು. ಕಟ್ಟಡ ಎಷ್ಟೇ ದೊಡ್ಡದಾದರೂ ಕಟ್ಟಡ ನಿರ್ಮಾಣ ಪ್ರಾರಂಭವಾಗುವುದು ಮೊದಲ ಇಟ್ಟಿಗೆಯಿಂದಲೇ. ಇಂತಹ ಚಟುವಟಿಕೆಗಳಲ್ಲಿ ಯುವಕರು ಸಕ್ರಿಯವಾಗಿ ತೊಡಗಿಸಿಕೊಂಡರೆ ಮುಂದಿನ ದಾರಿ ಸುಗಮ.

ತ್ಯಾಗ ಮತ್ತು ಸೇವೆ ಸ್ವಾಮಿ ವಿವೇಕಾನಂದರು ನಮಗೆ ತೋರಿಸಿದ ಎರಡು ದಾರಿಗಳು. ಸಾರ್ವಜನಿಕರ ಬೆವರಿನಿಂದ ಶಿಕ್ಷಣ ಪಡೆದ ನಾವು ಅದನ್ನು ಸಾರ್ವಜನಿಕ ಹಿತಾಸಕ್ತಿಗೆ ಬಳಸಿದಾಗ ಮಾತ್ರ ಅದರ ಮೌಲ್ಯ ವರ್ಧನೆ ಯಾಗುತ್ತದೆ. 'ನಾವು ಇರುವುದೇ ನಮ್ಮ ಹಳ್ಳಿಯ ಏಳ್ಗೆಗಾಗಿ, ನಮ್ಮವರ ಬದುಕಿನ ಉನ್ನತಿಗಾಗಿ, ಎಂಬ ಉದಾತ್ತ ಭಾವನೆ ಹೊಂದಿ ಕಾರ್ಯ ನಿರ್ವಹಿಸಿದಾಗ ಇತರರ ಒಳಿತಿನೊಂದಿಗೆ ತನ್ನ ಶ್ರೇಯಸ್ಸೂ ಅಡಗಿದೆ ಎಂಬುದನ್ನು ಅರಿತುಕೊಳ್ಳಬೇಕು. ಒಬ್ಬ ಬರಿಗೈ ಫಕೀರ ಅಣ್ಣಾ ಹಜಾರೆಯಂತಹ ವ್ಯಕ್ತಿಯ ಸೇವಾ ಮನೋಭಾವದಿಂದ, ನಿರಂತರ ಪರಿಶ್ರಮದಿಂದ ರಾಲೆಗಾಂವ್ ಸಿದ್ಧಿಯಂತಹ ಹಳ್ಳಿ ಇಂದು ಭಾರತದ ಭೂಪಟದಲ್ಲಿ ತನ್ನ ಸ್ಥಾನ ಸ್ಥಾಪಿಸಿಕೊಳ್ಳಲು, ಜನರನ್ನು ತನ್ನತ್ತ ಆಕರ್ಷಿಸಲು ಸಾಧ್ಯವಾಗಿದೆಯೆಂದರೆ, ಎಲ್ಲರ ಪರಿಶ್ರಮ ಒಂದೆಡೆ ಸೇರಿದರೆ ಹಳ್ಳಿಗಳ ಚಿತ್ರಣ ಹೇಗಿರಬಹುದು? ಎಲ್ಲಿಯೋ ಯಾರದೋ ಸಾಧನೆಗಳನ್ನು ಓದಿ, ಪ್ರಶಂಸಿಸುವುದರ ಜೊತೆಗೆ 'ನನಗೆ ಸಿಕ್ಕಿರುವ ಅವಕಾಶದಲ್ಲಿ ನಾನೇನು ಒಳಿತನ್ನು ಮಾಡಬಲ್ಲೆ'ನೆಂಬ ನಿರಂತರ ಚಿಂತನೆ ಇಂದಿನ ಯುವ ಪೀಳಿಗೆಗೆ ಅಗತ್ಯ.

ಅಭಿವೃದ್ಧಿ ಚಟುವಟಿಕೆಗಳಲ್ಲಿ ಪಾಲ್ಗೊಳ್ಳುವ ವ್ಯಕ್ತಿ ತನ್ನ ಸಾಮರ್ಥ್ಯದಲ್ಲಿ ಶ್ರದ್ಧೆಯಿಟ್ಟು ಕಾರ್ಯ ನಿರ್ವಹಿಸದಿದ್ದರೆ ಅದರ ಪ್ರಯೋಜನ ಆಗಲಾರದು. ನಮ್ಮ ದೇಶದ ಪ್ರಗತಿಗೆ ನಾವೇ ಕಾರಣರಲ್ಲದೆ ಇತರರಲ್ಲ. "ಪ್ರಪಂಚದ ಎಲ್ಲಾ ಸಂಪನ್ಮೂಲಗಳನ್ನು ಕ್ರೋಢೀಕರಿಸಿದರೂ ಭಾರತದ ಒಂದು ಸಣ್ಣ ಗ್ರಾಮವನ್ನೂ ಸರಿಪಡಿಸಲಾಗದು. ಆ ಸಮುದಾಯ ಸ್ವಾವಲಂಬಿಯಾಗಿ ತನ್ನ ಹಳ್ಳಿಯ ಏಳ್ಗೆಯಲ್ಲಿ ಪಾಲ್ಗೊಳ್ಳುವಂತಾದಾಗ ಮಾತ್ರ ಆ ಹಳ್ಳಿಯ ಅಭಿವೃದ್ಧಿ ಸಾಧ್ಯ" ಎಂಬುದನ್ನು ಸ್ವಾಮೀಜಿ ಸಮಾಜಕ್ಕೆ ಅಂದೇ ಅರಿವು ಮೂಡಿಸಿದ್ದಾರೆ. ಹೀಗೆ ಆಗಬೇಕಾದರೆ ಸಮುದಾಯಕ್ಕೆ ಆತ್ಮವಿಶ್ವಾಸ ತುಂಬುವ ಕೆಲಸ ಮೊದಲಾಗಬೇಕು. ಬದಲಾವಣೆಗೆ ತಮ್ಮನ್ನು ತೆರೆದುಕೊಳ್ಳಲು ಆಸಕ್ತವಾದ, ದೂಳು ತುಂಬಿದ ಕನ್ನಡಿಯಂತಿರುವ ಸಮುದಾಯದ ದೂಳೊರೆಸುವ ಕಾರ್ಯ ನಮ್ಮದಾಗ ಬೇಕು. ಇದಕ್ಕೆ ವಿದ್ಯಾರ್ಹತೆಗಿಂತ, ಇತರರ ನೋವಿನಲ್ಲಿ ಸ್ಪಂದಿಸಬಹುದಾದ ಮನೋ ಭಾವವೇ ಬಹು ಮುಖ್ಯವಾಗುತ್ತದೆ. ಆ ಮೂಲಕ ಅವರ ಪ್ರಗತಿಯಲ್ಲಿ ನೆರವಾಗಬೇಕು.

'ಸೇವೆ ಮತ್ತು ತ್ಯಾಗ' ಎಂದಾಕ್ಷಣ ಎಲ್ಲವನ್ನೂ ತೊರೆದು ಹೊಸ ಅವಕಾಶಗಳ ಹೊಸತನದ ಹುಡುಕಾಟ ಎಂದು ಅರ್ಥೈಸಿದರೆ ಸೇವಾ ಧರ್ಮವನ್ನು ತಪ್ಪಾಗಿ ಅರ್ಥೈಸಿ ದಂತಾಗುವುದು. ಇದರೊಂದಿಗೆ ನಾವು ಮಾಡುವ ಕೆಲಸವನ್ನೇ ಸರಿಯಾದ ಭಾವದಲ್ಲಿ ಹಲವರಿಗೆ ಪ್ರಯೋಜನಕಾರಿಯಾಗುವಂತೆ ಮಾಡುವುದು ಈ ಎಲ್ಲದರ ಮೂಲ. ಅದು ಸರ್ಕಾರಿ ಕೆಲಸವಿರಲಿ, ಸೇವಾ ಚಟುವಟಿಕೆಗಳಿರಲಿ ಅವನ್ನು ನಿಷ್ಠೆ ಹಾಗೂ ಪ್ರಾಮಾಣಿಕತೆಯಿಂದ ಮಾಡಿ, ಜನರ ಒಳಿತಿಗೆ ಕಾರಣರಾಗಬೇಕು. ಯುವಜನರು ತ್ಯಾಗ, ಪರಿಶ್ರಮ, ಶ್ರದ್ಧೆ ಮತ್ತು ಶಕ್ತಿಯ ಸಂಕೇತವಾಗಬೇಕು. "ಸಾಮಾಜಿಕ ಮೌಲ್ಯಗಳ ಮರುಹುಟ್ಟು ನಮ್ಮಿಂದಲೇ ಸಾಧ್ಯ" ಎಂದು ಚಿಂತಿಸಿ ಮುನ್ನಡೆಯಬೇಕು.

> ಯಾವುದೇ ಒಂದು ದೇಶದ ಅಭಿವೃದ್ಧಿಯಲ್ಲಿ ಅಲ್ಲಿಯ ಯುವಶಕ್ತಿಯ ಕೊಡುಗೆ ನಿರ್ಣಾಯಕವಾದುದು. ಇದು ಅಲ್ಲಿಯ ಯುವಶಕ್ತಿಯನ್ನು ಸರಿಯಾದ ರೀತಿಯಲ್ಲಿ ಬಳಸಿದಾಗ ಮಾತ್ರ ಸಾಧ್ಯ. ಇಂದು ಅಭಿವೃದ್ಧಿಶೀಲ ರಾಷ್ಟ್ರಗಳಷ್ಟೇ ಅಲ್ಲದೆ, ಮುಂದುವರಿದ ದೇಶಗಳೂ ಕೂಡ ಈ ಯುವಶಕ್ತಿಯನ್ನು ಒಂದು ಸಂಪತ್ತೆಂದು ಪರಿಗಣಿಸಿವೆ. ದೇಶದ ಯುವ ಶಕ್ತಿಯನ್ನು ಗಮನದಲ್ಲಿರಿಸಿಕೊಂಡು ಎಲ್ಲೆಡೆಯೂ ದೃಷ್ಟಿ ಹಾಯಿಸಿದರೆ ಪ್ರತಿಯೊಂದು ಕ್ಷೇತ್ರದ ಅದ್ಭುತ ಪ್ರಗತಿಯ ಹಿಂದೆಯೂ ಯುವ ಜನರ ಸಾಧನೆ ಎದ್ದುಕಾಣುತ್ತದೆ. ಸ್ವಾತಂತ್ರ್ಯ ಸಂಗ್ರಾಮದಲ್ಲಿ ಬ್ರಿಟಿಷರ ವಿರುದ್ಧ ಸೆಟೆದು ನಿಂತು, ದೇಶವನ್ನು ದಾಸ್ಯದಿಂದ ಮುಕ್ತ ಗೊಳಿಸಿದ ನಮ್ಮ ಸಹೋದರರನ್ನು ಮರೆಯಲಾದೀತೆ?

ಅವರು ಮಾಡುವ ಪ್ರತಿಯೊಂದು ಕೆಲಸದ ಬಗ್ಗೆಯೂ ಒಂದು ಹೊಸ ಭಾವನೆಯನ್ನು ಬೆಳೆಸಿಕೊಳ್ಳಬೇಕು. ಯಾವುದೇ ಒಂದು ಆದರ್ಶವನ್ನು ತೆಗೆದುಕೊಂಡು ಅದನ್ನು ಸಾಧಿಸಲು ಒಳ್ಳೆಯ ಪ್ರಯತ್ನ ಮಾಡಬೇಕು.

ಸ್ವಾಮಿ ವಿವೇಕಾನಂದರು ಯುವಜನರಿಗೆ ಅವರು ಯಶಸ್ಸನ್ನು ಪಡೆಯುವ ಹಾಗೂ ದಾರಿಯೆಡೆಗೆ ನೀಡ ಬೇಕಾದ ಗಮನವನ್ನು ಹೀಗೆ ಹೇಳಿದ್ದಾರೆ: "ಸಹೋದರರೆ, ಒಂದು ಭಾವನೆಯನ್ನು ತೆಗೆದುಕೊಳ್ಳಿ. ಅದನ್ನು ನಿಮ್ಮ ಜೀವನದಲ್ಲಿ ಅಭ್ಯಾಸ ಮಾಡಿ, ಅದನ್ನೇ ಆಲೋಚನೆ ಮಾಡಿ, ಅದನ್ನೇ ಕನಸು ಕಾಣಿ. ಆ ಒಂದು ಭಾವನೆಗಾಗಿ ನಿಮ್ಮ ಬಾಳನ್ನೆಲ್ಲಾ ಸವೆಸಿ. ಮಿದುಳು, ಮಾಂಸ ಖಂಡಗಳು, ನರಗಳು ಮತ್ತು ನಿಮ್ಮ ದೇಹದ ಪ್ರತಿಯೊಂದು ಭಾಗವೂ ಕೂಡ ಈ ಭಾವನೆಯಿಂದ ತುಂಬಿ ತುಳುಕಾಡಲಿ. ಉಳಿದ ಆಲೋಚನೆಗಳನ್ನೆಲ್ಲ ಅವುಗಳ ಪಾಡಿಗೆ ಬಿಡಿ. ಜಯ ಪಡೆಯುವುದಕ್ಕೆ ಇದೊಂದೇ ದಾರಿ..." ಈ ನುಡಿಗಳನ್ನು ಅರ್ಥೈಸಿ ಅಕ್ಷರಶಃ ಪಾಲಿಸುವಂತಾದರೆ ನಮ್ಮ ಯಶಸ್ಸಿಗಾಗಿ ಇತರರೆಡೆಗೆ ಎಡತಾಕುವುದರ ಅವಶ್ಯಕತೆ ನಮಗಿರುವುದಿಲ್ಲ.

ಇಂದು ಯುವಜನರು ಶ್ರದ್ಧಾಪೂರ್ಣ ಅಧ್ಯಯನ, ಉತ್ಸಾಹಪೂರ್ಣ ಆಲೋಚನೆಗಳು ಅಷ್ಟೇ ಮುಖ್ಯವಾದ ಸತ್ಸಹವಾಸಗಳ ಮೂಲಕ ಅನನ್ಯ ಶಕ್ತಿ ಸಾಮರ್ಥ್ಯಗಳನ್ನು ಮೈಗೂಡಿಸಿಕೊಳ್ಳಬೇಕು. ಈ ಶಕ್ತಿ ಸಾಮರ್ಥ್ಯಗಳು ಸುತ್ತಣ ಸಮಾಜದ ಕ್ಷೇಮಾಭ್ಯುದಯಕ್ಕೆ ವಿನಿಯೋಗವಾಗ ಬೇಕು. ಯುವಜನಾಂಗ ತಮಗೆ ದೊರೆತಿರುವ ಅವಕಾಶಗಳನ್ನು ಸದುಪಯೋಗಪಡಿಸಿಕೊಳ್ಳಬೇಕು. ಯಾವ ಕೆಲಸವೂ ಕೀಳಲ್ಲ, ಎಲ್ಲ ಕೆಲಸವೂ ಒಂದು ಪೂಜೆ, ಪ್ರಾರ್ಥನೆ ಎಂಬ ಅಂಶವನ್ನು ಮೈಗೂಡಿಸಿಕೊಳ್ಳಬೇಕು. ಹಿರಿಯರ ಅನುಭವ ಹಾಗೂ ಮಾರ್ಗದರ್ಶನವನ್ನು ಪಡೆದುಕೊಂಡು ತಮ್ಮ ಗುರಿ ಹಾಗೂ ದಾರಿಯನ್ನು ಸ್ಪಷ್ಟಪಡಿಸಿಕೊಳ್ಳಬೇಕು. ಯುವಶಕ್ತಿ ಎನ್ನುವುದು ನಮ್ಮ ಬಾಳಿನಲ್ಲಿ ಒಮ್ಮೆ ದಾಟಿದರೆ ಮತ್ತೆ ಬಾರದ ಅವಧಿ. ಈ ಅವಧಿ ಎಲ್ಲರ ಬದುಕನ್ನು ಕಟ್ಟಲು ವಿನಿಯೋಗವಾಗಬೇಕು. ಈ ಅವಧಿಯನ್ನು ಗುರಿ ಆದರ್ಶಗಳೇ ಇಲ್ಲದೆ ದುರ್ವ್ಯಯ ಮಾಡಿ ನಂತರ ಪಶ್ಚಾತ್ತಾಪಪಟ್ಟರೆ ಪ್ರಯೋಜನವಿಲ್ಲ. ಹೀಗೆ ಮಾಡಿದರೆ ದೇಶದ ಸಂಪತ್ತಾಗಬೇಕಾದ ಯುವಜನತೆ ದೇಶಕ್ಕೆ ಹೊರೆಯಾಗಿ ಪರಿಣಮಿಸುತ್ತಾರೆ. ಇಂದು ರಾಜಕೀಯ ಘಗಡೆಯಾಟದ ದಾಳಗಳಾಗಿ, ಅನುತ್ಪಾದಕ ಚಟುವಟಿಕೆಗಳ ಸಾಧನಗಳಾಗಿ, ತಾತ್ವಿಕ ಸಿದ್ಧಾಂತಗಳಿಲ್ಲದ ಮುಷ್ಕರ ನಿರತರಾಗಿ ಯುವಜನತೆ ತಮ್ಮನ್ನು ತೋರಿಸಿಕೊಳ್ಳು ತ್ತಿದ್ದಾರೆ. ಇದು ಒಳ್ಳೆಯ ಲಕ್ಷಣವಂತೂ ಅಲ್ಲ. ದೇಶದ ಹಾಗೂ ತಮ್ಮ ಬದುಕಿನ ಮಹತ್ವದ ತೀರ್ಮಾನದ ಘಟ್ಟ ಈ ವಯಸ್ಸು. ಮೊದಲೇ ತಿಳಿಸಿದಂತೆ ಯುವಜನತೆ ಇಡುವ ಪ್ರತಿಯೊಂದು ಹೆಜ್ಜೆಯಲ್ಲೂ ದೇಶದ ಭವಿಷ್ಯ ಅಡಗಿದೆ. ಈ ಜವಾಬ್ದಾರಿ ಹಾಗೂ ಹೊಣೆಯನ್ನರಿತು ಯುವಜನತೆ ಮುಂದಡಿಯಿಡಬೇಕು. ಎಳೆತನದ ಸೊಗಸನ್ನು ದಾಟಿ, ಹಿರಿತನದ ಹೊಸ್ತಿಲಲ್ಲಿರುವ ಈ ಅವಧಿಯ ಒಂದೊಂದು ನಿಮಿಷವೂ ಮಹತ್ವದ್ದು. ಮೇಲಾಗಿ ಈ ಅವಧಿಯೇನು ದೀರ್ಘವಲ್ಲ. ಶಕ್ತಿ ಸಾಮರ್ಥ್ಯಗಳು ನಮ್ಮಲ್ಲಿ ತುಂಬಿಕೊಂಡಿರುವಾಗಲೇ ಅದರ ಸಂಪೂರ್ಣ ವಿನಿಯೋಗವಾಗಬೇಕು. ಮಾನಸಿಕ, ದೈಹಿಕ ಹಾಗೂ ಬೌದ್ಧಿಕ ಶಕ್ತಿಗಳೆಲ್ಲವೂ ನಿಸ್ವಾರ್ಥ ಸೇವೆಗೆ ಮುಡಿಪಾಗಿ ಹಲವರ ಒಳಿತಿಗೆ ಕಾರಣವಾಗುವುದಾದರೆ ನಾವಿರುವ ತಾಣವನ್ನೇ ಸ್ವರ್ಗವಾಗಿಸಬಹುದು. ಯುವಜನತೆ ಇದಕ್ಕೆ ದೃಢನಿಶ್ಚಯ ಹಾಗೂ ಸಂಕಲ್ಪದಿಂದ ಮುಂದುವರಿದರೆ ದೇಶವನ್ನು ವಿಶ್ವಮಾನ್ಯತೆ ಯೆಡೆಗೆ ಕೊಂಡೊಯ್ಯುವ ದಿನವನ್ನು ಹತ್ತಿರಕ್ಕೆ ತರಬಹುದು.

ಬಿ. ಟಿ. ಪೋಷಿಣಿ
ಸ್ವಾಮಿ ವಿವೇಕಾನಂದ ಯೂತ್ ಮೂವ್‌ಮೆಂಟ್, ಸರಗೂರು,
ಹಂಚೀಪುರ ರಸ್ತೆ, ಹೆಗ್ಗಡದೇವನ ಕೋಟೆ, ಮೈಸೂರು ಜಿಲ್ಲೆ - ೫೭೧ ೧೨೧



# ಲೋಕದ ಡೊಂಕು

ವಸುಮತಿ ಉಡುಪ

ಹಬೆಯಾಡುತ್ತಿದ್ದ ಅಕ್ಕಿತರಿ ಉಪ್ಪಿಟ್ಟನ್ನು ಒತ್ತಿ ಒತ್ತಿ ತುಂಬಿಸಿದ್ದ ಟಿಫನ್ ಬಾಕ್ಸನ್ನು ವೈರಿನ ಕೈಚೀಲದೊಳಗೆ ಇಟ್ಟುಕೊಟ್ಟಳು ಮಹಾಲಕ್ಷ್ಮಿ. ಅನಂತನಿಗೆ 'ಆಗಲೇ ಹೊತ್ತಾಗಿಬಿಟ್ಟಿತು' ಎನ್ನುವ ಅವಸರ. 'ಉಪ್ಪಿಟ್ಟು ಮಾಡೋಕೆ ಒಂದು ಒಪ್ಪೊತ್ತು ಬೇಕಾ ? ನಾನಾಗಿದ್ದಿದ್ರೆ...' ಎನ್ನುತ್ತಾ ಅಡುಗೆಮನೆಯಲ್ಲಿ ಸ್ಥಾಪನೆಯಾಗಿಬಿಟ್ಟಿದ್ದ.

'ಬಾಯಲ್ಲಿ ಹೇಳೋಕೇನಂತೆ ? ಎಲ್ಲೂ ಹದ ಹೇಳೋರೇ. ಕೆಲ್ಸ ಮಾಡೋರಿಗೆ ಅದರ ಕಷ್ಟ ಸುಖ ಗೊತ್ತಿರುತ್ತೆ' ಎನ್ನುತ್ತಾ ಆದಷ್ಟು ಕೆಲಸವನ್ನು ಅವನ ಕೈಯಿಂದಲೇ ಮಾಡಿಸಿದ್ದಳು ಮಹಾಲಕ್ಷ್ಮಿ. ಮೆಣಸಿನ ಕಾಯಿ ಹೆಚ್ಚಿ, ಕಾಯಿ ತುರಿದು, ಲಿಂಬೆ ರಸ ಉಪ್ಪಿಟ್ಟಿಗೆ ಹಿಂಡಿ, ಕೊನೆಯಲ್ಲಿ ಬಾಳೆಲೆ ಸಿಗುಳಿಗೆ ಚೂರು ಉಪ್ಪಿಟ್ಟು ಹಾಕಿಕೊಂಡು ರುಚಿ ನೋಡಿ', 'ಪರ್ವಾಗಿಲ್ಲ ಕಣೇ, ತಿನ್ನೋ ಹಾಗಿದೆ' ಎಂದು ಶಿಫಾರಸು ಮಾಡಿದ್ದ ಅನಂತ.

'ನೀವೂ ತಿಂದ್ಕೊಂಡೇ ಹೋಗ್ಬಿಡಿ ಮಾರಾಯ್ರೇ, ಅಷ್ಟರಲ್ಲಿ ಲೋಕ ಮುಳುಗಿಹೋಗಲ್ಲ. ಇನ್ನೂ ಏಳೂವರೆ ಘಂಟೆ...' ಹೆಂಡತಿ ಒತ್ತಾಯಿಸಿದರೆ ಅವನಿಗೆ ಪುರುಸೊತ್ತಿಲ್ಲ.

'ಆಮೇಲೆ... ಆಮೇಲೆ...' ಎನ್ನುತ್ತಾ ಅಂಗಳ ಇಳಿದ ಗಂಡನನ್ನು ನೋಡಿ ಮಹಾಲಕ್ಷ್ಮಿಯ ಮೂತಿ ಸೊಟ್ಟಗಾಯ್ತು. ಇಡೀ ಒಂದು ವಾರದಿಂದ ಇದೇ ಹಣೇಬರ. ಬೆಳಿಗ್ಗೆ ಐದೂವರೆಗೆ ಅಲುಗಾಡಿಸಿ, ಅಲುಗಾಡಿಸಿ ಎಬ್ಬಿಸಿಬಿಡುತ್ತಾನೆ. ತಿಂಡಿ ಮಾಡಿ, ಡಬ್ಬಿಗೆ ತುಂಬಿ, ಮೊದಲು ಹಿರಿಯಪ್ಪನ ಮನೆಯಲ್ಲಿ ನೈವೇದ್ಯ ಆಗಿಬಿಡಬೇಕು. ಒಂದು ಗುಟುಕು ಕಾಫಿ ಕುಡಿದು ಹೋಗುವುದಕ್ಕೂ ಪುರುಸೊತ್ತಿಲ್ಲ ಅನ್ನುವ ಥರ ಗಡಿಬಿಡಿ. ಯಾರಿಗೂ ಬರದ ಜ್ವರ ಇವರ ಹಿರಿಯಮ್ಮನಿಗೆ ಬಂದುಬಿಟ್ಟಿತ್ತಾ? ಮನೆಕೆಲಸ ಪೂರ್ತಿ ಮರೆತು ಅಲ್ಲೇ ಬಿಡಾರ ಹೂಡಿಬಿಟ್ಟಿದ್ದರಲ್ಲ, ಅತೀ ಅತೀ ಎಂದು ಯಾರಿಗಾದರೂ ಅನಿಸದೇ ಇರುತ್ತಾ? ಮಾವ ಇದ್ದಾಗ ಆ ಮನೆಗೂ, ಈ ಮನೆಗೂ ಎಣ್ಣೆಸೀಗೆಯ ಸಂಬಂಧ. ಒಬ್ಬರ ಮಕ ಕಂಡರೆ ಮತ್ತೊಬ್ಬರಿಗಾಗುತ್ತಿರಲಿಲ್ಲ. ಮಾಲಕ್ಷ್ಮಿ ಈ ಮನೆಗೆ ಸೊಸೆಯಾಗಿ ಬರುವುದಕ್ಕೆ ಮುಂಚೆ ಹೊಡೆದಾಟ, ಬಡಿದಾಟ, ಕೋರ್ಟು, ಕಛೇರಿ ಎಲ್ಲಾ ಆಗಿತ್ತಂತೆ. ಮಾಮನಿಗೆ ವಯಸ್ಸಾಗುತ್ತಾ ಬಂದ ಹಾಗೆ ಬಿಸಿ ತಣ್ಣಗಾಗುತ್ತಾ ಬಂತು. ಅವರ ಸಮರೋತ್ಸಾಹ ಮಗ ಅನಂತನಲ್ಲೂ ರಕ್ತಗತವಾಗಿ ಹರಿದು ಬರದೆ ಇದ್ದದ್ದು ಮಾವನಿಗೆ ದೊಡ್ಡ ಅಸಮಾಧಾನ. 'ಇದೊಂದು ಯಾತ್ಯಾತಕ್ಕೂ ಪ್ರಯೋಜನವಿಲ್ಲದ್ದು. ಗಂಡಸಾಗಿ ಹುಟ್ಟಿದ್ದು ದಂಡಕ್ಕೆ...' ಎನ್ನುವ ಮುನಿಸು. ಅನಂತನ ತಲೆ ಓಡುತ್ತಿದ್ದ ದಿಕ್ಕೇ ಬೇರೆ. ವರ್ಷದ ಉತ್ಪತ್ತಿಯಲ್ಲಿ ಒಂದು ಪಾಲನ್ನು ಹರಕೆಯ ಹಾಗೆ ಈ ಅಪ್ಪ ಲಾಯರುಗಳ ಬಾಯಿಗೆ ಸುರಿಯುತ್ತಾ ಬರದಿದ್ದಿದ್ದರೆ ಇಷ್ಟು ಹೊತ್ತಿಗೆ ವರಲೆ ಹಿಡಿದು ಕುಂಬಾಗಿರುವ ಹಳೆಮನೆಯನ್ನು ರಿಪೇರಿ ಮಾಡಿಸುವುದಲ್ಲ, ಆ ದುಡ್ಡಲ್ಲಿ ಹೊಸ ಮನೆಯನ್ನೇ ಎಬ್ಬಿಸಿಬಿಡಬಹುದಿತ್ತು ಎನ್ನುವ ಲೆಕ್ಕಾಚಾರದಿಂದ ಅವನ ಹೊಟ್ಟೆ ಉಬ್ಬರಿಸುತ್ತಿತ್ತು. ಜೊತೆಗೆ ಮೂರು ಮೂರು ಹೆಣ್ಣುಮಕ್ಕಳ ಮದುವೆ ಹುಡಿಹಾರಿಸಿದ್ದರು ಅಪ್ಪ. ಬುಡ ಅಲುಗಾಡುತ್ತಿದ್ದರೂ ಡೌಲಿಗೆ ಕಮ್ಮಿ ಆಗುವಂತಿಲ್ಲ. ಎಲ್ಲಾ ಧಾಂ ಧೂಂ. ಅಡಿಕೆ ಮಂಡಿಯಲ್ಲಿ ಮಾತ್ರವಲ್ಲ, ಎಲ್ಲೆಲ್ಲಿ ಸಿಕ್ಕುತ್ತದೆಯೋ ಅಲ್ಲೆಲ್ಲಾ ಸಾಲ. ಅನಂತ ಪಟ್ಟಕ್ಕೆ ಬರುವ ಹೊತ್ತಿಗೆ ಅವನ ಕೈಗೆ ಕೋಲು, ಕರಟ ಎರಡನ್ನು ಕೊಟ್ಟಿರಲಿಲ್ಲ ಅನ್ನುವುದನ್ನು ಬಿಟ್ಟರೆ ಅವನ ಅಪ್ಪ ಮತ್ತೆಲ್ಲಾ ರೀತಿಯಲ್ಲೂ ಅವನಿಗೆ ಚೌರ ಮಾಡಿಬಿಟ್ಟಿದ್ದರು. 'ಹಾಲು, ತುಪ್ಪದಲ್ಲಿ ಊಟ ಮಾಡಿಸಿ ಉಚ್ಚೇಲಿ ಕೈ ತೊಳಿಸಿದರಂತೆ' ಎನ್ನುವ ಗಾದೆಯನ್ನು ಪದೇ ಪದೇ ನೆನಪು ಮಾಡಿಕೊಳ್ಳುತ್ತಿದ್ದ ಅನಂತ.

ಅವನ ಮದುವೆಯಾಯ್ತು. ಇಬ್ಬರು ಮಕ್ಕಳು ಹುಟ್ಟಿದರು. ಹಬ್ಬ ಹುಣ್ಣಿಮೆಗೆ ಮನೆಗೆ ಕರೆದು ಉಪಚರಿಸಿ ಕಳಿಸಬೇಕಾದ ಅಕ್ಕತಂಗಿಯರು, ಅಪ್ಪ ಅಮ್ಮನ ಕಾಯಿಲೆ ಕಸಾಲೆ, ಹುಡುಗರ ಓದು, ಖರ್ಚು ಹನುಮಂತನ ಬಾಲದ ಹಾಗೆ ಬೆಳೆಯುತ್ತಿತ್ತೇ ವಿನಾ ಆದಾಯ ಏರಲಿಲ್ಲ. ಇಂತಾ ಪರಿಸ್ಥಿತಿಯಲ್ಲಿ ಯಾರ್ಯಾರೊಂದಿಗೋ ಹಗೆತನ ಕಟ್ಟಿಕೊಂಡು, ದ್ವೇಷ ಸಾಧಿಸಿ, ಅದಕ್ಕಾಗಿ ದುಡ್ಡು ಪೋಲು ಮಾಡುವುದು ತಲೆ ಸರಿ ಇದ್ದವರು ಮಾಡುವ ಕೆಲಸ ಅಲ್ಲ ಅನಿಸಿತು ಅನಂತನಿಗೆ. ಸ್ವಭಾವದಲ್ಲಿ ಅಪ್ಪ, ಮಗ ತದ್ವಿರುದ್ಧ. ಪರಿಣಾಮ ಆಗೀಗ ವಾಗ್ಯುದ್ಧದಿಂದ ಕಾವೇರುತ್ತಿದ್ದ ಮನೆಯ ವಾತಾವರಣ.

ಕೊನೆ ಕೊನೆಗೆ ಅನಂತ ಅಪ್ಪನ ಜೊತೆ ಮಾತಾಡುವುದನ್ನೇ ನಿಲ್ಲಿಸಿಬಿಟ್ಟ. ಒಂದೇ ಮನೆಯಲ್ಲಿದ್ದರೂ ಅವರಷ್ಟಕ್ಕೆ ಅವರು, ಇವನಷ್ಟಕ್ಕೆ ಇವನು. ಅಮ್ಮ ರಾಜಿ ಪಂಚಾತಿಕೆ ಮಾಡಿಸಲು ಬಹಳ ಒದ್ದಾಡಿದಳು.

'ನಿಂಗೊತ್ತಿಲ್ಲ ಕಣೋ, ನಾಲಿಗೆ ಬೆಲ್ಲ ಸವರಿಸಿಕೊಂಡು ಮಾತಾಡೋರೆಲ್ಲಾ ಒಳ್ಳೆಯವರು ಅಂದ್ಕೊಂಬಿಟ್ಟಿದ್ದಿ. ನಿನ್ನ ಹಿರಿಯಪ್ಪ ಮಾಡಿದ ಮೋಸ ಒಂದೊಂದು ಅಂದ್ಕಡಿದೀಯಾ ? ಪಾಲಿನ ನಾಟಕ ಮಾಡಿ ನಗನಾಣ್ಯ ಎಲ್ಲಾ ಮುಚ್ಚಿಟ್ಟು ದೊಡ್ಡ ಗಂಟು ಮಾಡ್ಕಂಡಿದ್ದು ನಿಂಗೆಲ್ಲಿ ಗೊತ್ತುಂಟು ? ಒಳ್ಳೊಳ್ಳೆ ಜಮೀನು ತಾವು ಒಳಗೆ ಹಾಕ್ಕಂಡು ಮೂಗಿಗೆ ತುಪ್ಪ ಹಚ್ಚಿ ಕೂರಿಸಿದ್ರು. ನಿಮ್ಮನ್ನೆಲ್ಲಾ ಒಂದು ಸ್ಥಿತಿಗೆ ತರ್ಬೇಕಾದ್ರೆ ಅಪ್ಪ ಎಷ್ಟು ಕಷ್ಟಪಟ್ಟಿದ್ದಾರೆ ಅಂತ ಗೊತ್ತಿದ್ದಿದ್ರೆ ನೀನು ಹೀಗೆಲ್ಲಾ ಮಾಡ್ತಿರ್ಲಿಲ್ಲ. ಒಂದಂತೂ ತಿಳ್ಕಾ ಅನಂತ, ನಾವು ಪಾಪದೋರಾಗಿದ್ರೆ ಎಲ್ರೂ ನಮ್ಮ ತಲೇ ಮೇಲೆ ಮೆಣಸು ಅರೀತಾರೆ. ಸೈಸಿ ಸೈಸಿ ಕೊನೆಗೆ ನಿನ್ನ ತಮ್ಮನ್ನ ಅವ್ರು ಕೊಂದ್ಕಂಡು ತಿಂದ ಮೇಲಲ್ವಾ ಅಪ್ಪ ಪರುಶುರಾಮ ಆಗಿದ್ದು? ಆಮೇಲೂ ಸಹಿಸ್ಕಂಡಿರ್ಬೇಕಿತ್ತು ಅಂತೀಯಾ ? ಈಗ ನಮ್ಮ ವೈರಿಗಳೇ ನಿಂಗೆ ಒಳ್ಳೋರಾಗಿ ಕಾಣ್ತಾರೆ. ನಮ್ಮನ್ನ ಹಚಹಚ ಅಂತಿದ್ದಿ. ಆಗ್ಲಿ ಅದೇನಾಗುತ್ತೊ ಆಗ್ಲಿ, ಕಲಿಯುಗ ಅಂತ ಸುಮ್ನೆ ಹೇಳ್ತಾರಾ ?' ಇಂತಾ ಮಾತುಗಳನ್ನು ತಿರುಗಾಮುರುಗಾ ಬೇಕಾದಷ್ಟು ಸಲ ಕಿವಿ ತುಂಬಿಸಿದ್ದಾಳೆ ಅಮ್ಮ. ಕೇಳಿ ಕೇಳಿ ಅನಂತ ಜಡ್ಡುಗಟ್ಟಿದ್ದಾನೆ. ಏನೋ ಆಯ್ತು ಹೋಯ್ತು. ಹಗ್ಗ ಜಗ್ಗಿದ ಹಾಗೆ ಅದನ್ನೇ ಎಷ್ಟು ಕಾಲ ಜಗ್ಗಾಡುತ್ತಾ ಹೋಗಬೇಕು, ಇಷ್ಟಕ್ಕೂ ಸತ್ಯ ಏನು ಅನ್ನುವುದು ಯಾರಿಗೆ ಗೊತ್ತುಂಟು, ಎಲ್ಲಾ ಒಂದು ಅಂದಾಜು ಅಷ್ಟೇ ಎನ್ನುವುದು ಅನಂತನ ಯೋಚನೆ. ಅಪ್ಪ, ಅಮ್ಮನಿಗೆ ಯಾವುದು ಬೆಸ ಆಗಿ ಕಾಣಿಸುತ್ತಿತ್ತೋ ಅದು ಅನಂತನ ಕಣ್ಣಿಗೆ ಸರಿ ಅನ್ನಿಸುತ್ತಿತ್ತು. ಅವರಿಗೆ ಬೇಡವಾದವರು ಇಷ್ಟವಾಗುತ್ತಾ, ಇಷ್ಟವಾದರೂ ದೂರ ಆಗುತ್ತಾ,'ನಮ್ಮ ವೈರಿಗಳೇ ಅವನಿಗೆ ಬೇಕಾದವರಾಗಿಬಿಟ್ರು, ಕುಲಕ್ಕೆ ಮೂಲ ಕೊಡಲಿ ಕಾವು' ಎಂದು ಅಪ್ಪ ಹೊಟ್ಟೆ ಬೇನೆ ಹಚ್ಚಿಕೊಂಡಿದ್ದರೆ, 'ಅವನಿಗೆ ಮಾಟ ಮಾಡ್ಸಿದಾರೆ' ಎಂದು ಅವನ ಅಮ್ಮ ಬಲವಾಗಿ ನಂಬಿಬಿಟ್ಟಿದ್ದರು. 'ಯಾರು ಯಾರಿಗೆ ಮಾಟ ಮಾಡ್ಸಿದ್ದು ಅನ್ನೋದು ಇವರಿಗೇನು ಗೊತ್ತುಂಟು, ಗೂರಟು ?' ಹೆಂಡತಿಯ ಹತ್ತಿರ ಹೇಳಿಕೊಂಡು ನೆಗಾಡುತ್ತಿದ್ದ ಅನಂತ.

ಇವೆಲ್ಲಾ ಹತ್ತೆಂಟು ವರ್ಷಗಳ ಹಿಂದಿನ ಕತೆ. ಈಗ ಅಪ್ಪ ಪೆಟ್ಟಿಗೆ ಕಟ್ಟಿಯಾಗಿದೆ. ಅಮ್ಮ ನೆಲ ಕಚ್ಚಿದ್ದಾಳೆ. ಅನಂತನ ಮಕ್ಕಳು ಕಾಲೇಜು ಓದುತ್ತಿದ್ದಾರೆ. ಮನೆಯಲ್ಲಿ ಅನಂತನ ಆಡಳಿತ. ಮಹಾಲಕ್ಷ್ಮಿಯ ಮಂತ್ರಿಗಿರಿ. ಸಾಲಸೋಲ ತೀರಿಸಿಕೊಂಡು ನೆಮ್ಮದಿಯಾಗಿದ್ದಾನೆ ಅನಂತ. ರಾಜ್ಯಭಾರ ಸುಸೂತ್ರವಾಗಿ ಸಾಗುತ್ತಿದೆ.

* * *

ಅಡಿಕೆಮರಗಳ ನಡುವಿನ ಕಾಲುಹಾದಿಯಲ್ಲಿ ನಡೆದು, ತಮ್ಮ ತೋಟವನ್ನು ಹಿರಿಯಪ್ಪನ ತೋಟದಿಂದ ವಿಂಗಡಿಸಿದ್ದ ಹಳ್ಳದ ಬಳಿ ಬಂದಾಗ ಅನಂತನಿಗೆ ತಪ್ಪದೆ ವಿಶ್ವನ ನೆನಪಾಗುತ್ತದೆ. ತೋಟದ ತಂಪಿಗೆ ತಣ್ಣಗೆ ಕೊರೆಯುತ್ತಾ ಹರಿಯುತ್ತಿರುವ ನೀರು ತಳದ ಉರುಟುರುಟು ಕಲ್ಲುಗಳು ಕಣ್ಣಿಗೆ ಕಾಣುವಷ್ಟು ಶುಭ್ರ, ಸ್ವಚ್ಛ. ದಡದಲ್ಲಿ ಅಲ್ಲಲ್ಲಿ ಬೆಳೆದ ವಾಟೆ ಹಿಂಡಿಲು. ಹೆಪ್ಪುಗಟ್ಟಿದಂತೆನಿಸುವ ಮೌನವನ್ನು ಆಗೀಗ ಕಲಕುವ ಯಾವುದೋ ಹಕ್ಕಿಯ ಕೂರಳುಲಿ. ಇಲ್ಲೊಂದು ನರಬಲಿ ನಿಜಕ್ಕೂ ನಡೆದದ್ದು ಹೌದೇ, ಅಥವಾ ಆಕಸ್ಮಿಕವೇ ? ಉತ್ತರ ಪರಮಾತ್ಮ ಎನ್ನುವವನು ಒಬ್ಬನಿದ್ದಿದ್ದೇ ಆದರೆ ಅವನಿಗಷ್ಟೇ ಗೊತ್ತು. ವಿಶ್ವ ಅನಂತನ ತಮ್ಮ, ಅಪ್ಪ, ಅಮ್ಮನ ಕೊನೆಯ ಸಂತಾನ. ಅನಂತನಿಗಿಂತ ಹತ್ತು ವರ್ಷಗಳಷ್ಟು ಕಿರಿಯ. ನಡು ಮಳೆಗಾಲದ ಒಂದು ದಿನ ಇಸ್ಕೂಲಿಗೆ ಹೋದವನು ಮತ್ತೆ ಮನೆಗೆ ಜೀವಸಹಿತ ವಾಪಸಾಗಲಿಲ್ಲ. ಜೊತೆಗೆ ಅದೇ ಸ್ಕೂಲಿನಲ್ಲಿ ಓದುತ್ತಿದ್ದ ಅವನ ಅಕ್ಕ ಇದ್ದಳು. ಆದರೆ ಇವನಿಗೆ ಮನೆ ಸೇರಲು ಅವಸರ. 'ನಿಲ್ಲೋ...' ಅಂದರೂ ಕೇಳಿಸಿಕೊಳ್ಳದೆ ಮುಂದಕ್ಕೆ ಓಡಿದ್ದ. ಅವಳಿಗೆ ಅವಳ ಸ್ನೇಹಿತಗಿತ್ತಿಯರಿದ್ದರು. ಅವರ ಜೊತೆ ಹರಟಿಕೊಂಡು ನಿಧಾನಕ್ಕೆ ಅವಳು ಮನೆ ಸೇರಿದರೆ ಇನ್ನೂ ತಮ್ಮನ ಪತ್ತೆ ಇಲ್ಲ. ಅಮ್ಮನಿಗೆ ಸಹಜವಾಗಿ ಗಾಬರಿ. 'ಎಲ್ಲೇ ತಮ್ಮ ? ಒಟ್ಟಿಗೆ ಬರ್ಬೇಕು ಅಂತ ಸಾವಿರ ಸತಿ ಹೇಳಿಲ್ವಾ ? ಎಲ್ಲಿ ಬಿಟ್ಟು ಬಂದಿ ?' ಅವಳದಲ್ಲದ ತಪ್ಪಿಗೆ ಬೆನ್ನಿಗೆ ಎರಡು ಕಡುಬು ಬಿದ್ದಿತ್ತು. 'ಬೇಡಾಂದ್ರೂ ಕೇಳ್ಲಿಲ್ಲ, ಮುಂಚೇನೇ ಓಡ್ಬಂದ. ನಂಗೆಂತಕ್ಕೆ ಹೊಡೀತಿ ?' ಅವಳು ಬಿಕ್ಕುತ್ತಿದ್ದಳು. ಹೊರಗೆ ಮಳೆಯ ಆರ್ಭಟ ಜೋರುಜೋರಾಗುತ್ತಿದೆ. 'ಸುಂಯ್ಯೋ' ಎಂದು ಊಳಿಡುತ್ತಿದೆ ಗಾಳಿ. ಕೊಡೆ ಹಿಡಿದು ನಡೆಯುವಂತಿಲ್ಲ. ಮೇಲಿನ ಬಟ್ಟೆ ತಿರುಗಾಮುರುಗಾ ಆಗಿ ಕೈಲಿ ಉಳಿಯುತ್ತದೆ ಕಬ್ಬಿಣದ ಕಡ್ಡಿಗಳ ಅಸ್ಥಿಪಂಜರ. ಕಾಲಿಗೆ ಮೆಟ್ಟು ಹಾಕುವಂತಿಲ್ಲ. ಕೆಸರಿಲ್ಲದೆ ಪಾಚಿಗಟ್ಟಿದಲ್ಲಿ ಜೀಳಿಸಿ ಹಲ್ಲು ಮುರಿಸುತ್ತದೆ ಜಾರಿಕೆ. ಇಂತಾ ದಾರಿಯಲ್ಲಿ ಮುಂದೋಡಿ ಬರುವುದಕ್ಕೆ ಹುಡುಗುತನದ ಉಮೇದು, ಜೊತೆಗೆ ಅಭ್ಯಾಸಬಲ, ಎರಡೂ ಬೇಕು. ಇಲ್ಲದಿದ್ದರೆ ಅಕ್ಷರಶಃ ಹೆಜ್ಜೆ ಮೇಲೆ ಹೆಜ್ಜೆ.

ತಲೆಗೆ ಕಂಬಳಿ ಕೊಪ್ಪೆ ಕವುಚಿಕೊಂಡು ಅಪ್ಪ, ಮಗ ಸ್ಕೂಲಿನ ದಾರಿ ಹಿಡಿದಿದ್ದರು. ತೋಟ ಇಳಿದು, ಗಾಳಿಯ ರಭಸಕ್ಕೆ ಇನ್ನೇನು ಲಟಲಟಕ್ಕನೆ ಮುರಿದುಕೊಂಡು ಧರೆಗುರುಳುತ್ತವೆಯೆನ್ನುವಂತಿದ್ದ ಅಡಿಕೆಮರಗಳ ನಡುವೆ ಹಾದು, ಸೊಕ್ಕು ಬಂದಂತೆ ಉಕ್ಕುಕ್ಕಿ ಹರಿಯುತ್ತಿದ್ದ ಕೆನ್ನೀರಿನ ಹಳ್ಳದ ಬಳಿ ಬಂದಾಗ ಅಪ್ಪನ ಹೆಜ್ಜೆಗಳು ತಡೆದಿದ್ದುವು. ಓಡಾಡುವವರ ಕಾಲುಗಳ ಕೆಮ್ಮಣ್ಣಿನ ಲೇಪನದಿಂದ ಜಾರುವಂತಿದ್ದ ಅಡಿಕೆದಬ್ಬೆಗಳ ಸಾರದ ಮೇಲೆ ಒಬ್ಬರ ಹಿಂದೊಬ್ಬರಂತೆ ನಡೆದು ಇಬ್ಬರೂ ಹಳ್ಳ ದಾಟಿದ್ದರು. 'ಯಾಕೋ ಹೆದರಿಕೆಯಾಗ್ತಿದೆ' ಅಂದಿದ್ದ ಅಪ್ಪ. ಮುನ್ಸೂಚನೆ ಆಗಲೇ ದಕ್ಕಿತ್ತೇ ?

'ದಿನಾ ಇದೇ ಹಾದೀಲಿ ಬರ್ತಿರ್ಲಿಲ್ವಾ ? ಇವತ್ತೇನು ಹೊಸ್ತಾ ? ಹೆದ್ರಿಕೆ ಎಂತಕ್ಕೆ ?' ಅನಂತನ ಮಾತು ಮುಗಿಯುವುದರೊಳಗೆ ಯಾರನ್ನೋ ಗಮನಿಸಿ ಅಪ್ಪ, 'ಯಾರದು?' ಎಂದು ಜೋರು ದನಿಯಲ್ಲಿ ಕೇಳಿದ್ದ. ಕಾಲು ಹಾದಿಯ ಎಡಕ್ಕೆ ಅಷ್ಟು ದೂರದಲ್ಲಿ ಪನ್ನೇರಲು ಮರದ ಬುಡದಲ್ಲಿ ಕಂಡವನು ಹಿರಿಯಪ್ಪ. ಅವನು ಕಳ್ಳಕಳ್ಳಗೆ ಅಡಗಿ ನಿಂತಿದ್ದ ಎನ್ನುವುದು ನಂತರದ ದಿನಗಳಲ್ಲಿ ಅಪ್ಪನ ದೂರು. ಎರಡು ಲಿಂಬೆಹಣ್ಣಿಗೆ ರಾಚುವ ಗಾಳಿ, ಮಳೆಯಲ್ಲಿ ತೋಟಕ್ಕೆ ಬಂದಿದ್ದನಂತೆ ಹಿರಿಯಪ್ಪ. ಸಣ್ಣಪುಟ್ಟ ವೈಮನಸ್ಯ, ಕಿತ್ತಾಟ, ಕಿತಾಪತಿ ಇದ್ದರೂ ಪರಸ್ಪರ ಮಾತು ನಿಲ್ಲುವ ಹಂತಕ್ಕೆ ಆಗಿನ್ನೂ ತಲುಪಿರಲಿಲ್ಲ.

'ನಮ್ಮ ಹುಡುಗನ್ನ ನೋಡಿದ್ಯಾ ? ಇಸ್ಕೂಲಿಂದ ಹೊರಟಿದಾನಂತೆ, ಮನೆಗೆ ಬಂದಿಲ್ಲ...' ಅಣ್ಣನ ಹತ್ತಿರ ಕೇಳಿದ್ದ ಅಪ್ಪ.

'ಯಾರು ವಿಶ್ವನಾ ? ನಂಗೆ ಕಾಣಿಸ್ಲಿಲ್ಲಪ್ಪಾ. ನಾ ಬಂದಿದ್ದೇ ಇವಾಗ...' ಹಿರಿಯಪ್ಪ ಉತ್ತರಿಸಿದ್ದ. ಮರುದಿನ ವಾಟೆಮೆಳೆಗೆ ಸಿಕ್ಕಿಕೊಂಡ ನಿರ್ಜೀವ ದೇಹ ಸಿಕ್ಕಿತ್ತು. ಮನೆಯವರ ಆಕ್ರಂದನ ಮುಗಿಲು ಮುಟ್ಟಿತ್ತು. ಸಾರ ದಾಟುವಾಗ ಹೇಗೋ ಜಾರಿ ಬಿದ್ದಿದ್ದಾನೆ ಎಂದು ತರ್ಕಿಸಬಹುದಾಗಿದ್ದರೂ ಅಪ್ಪ, ಅಮ್ಮನ ಅಂತರಾತ್ಮ ಹೇಳಿದ್ದೇ ಬೇರೆ. ಒಳಗಿಂದೊಳಗೆ ಕುದಿಕುದಿಯುತ್ತಿದ್ದ ಅಸಹನೆ ಹೊರಹೊಮ್ಮಲು ಈ ಅಸಹಜ ಸಾವು ಒಂದು ನೆಪವಾಗಿತ್ತು ಮತ್ತು ಅವರು ಇದಕ್ಕೆ ಹಿರಿಯಪ್ಪನನ್ನು ನೇರವಾಗಿ ಹೊಣೆ ಯಾಗಿಸಿದ್ದರು. ಕೊಲೆ ಹಿರಿಯಪ್ಪನಿಗೆ ಹೊಸದೇನಲ್ಲವಂತೆ. ಘಟ್ಟದ ತಗ್ಗಿನಿಂದ ಬಂದಿದ್ದ ಆಳುಮಗನೊಬ್ಬನಿಗೆ ಬಾಳೆಗೊನೆ ಕದ್ದ ಎನ್ನುವ ಕಾರಣಕ್ಕೆ ಕಪಾಳಕ್ಕೆ ಹೊಡೆದು ಅವನು 'ಹರಾ ಹರಾ...' ಎಂದಾದಾಗ ಸೌದೆ ಒಟ್ಟಿ ಸುಟ್ಟು ಹಾಕಿದ್ದನಂತೆ ಈ ನರರಾಕ್ಷಸ. 'ನಾವೇನು ಅವನ ಗಂಟು ಕದ್ದಿದೀವಿ ? ಸುಕಾಸುಮ್ನೆ ಅವನ್ಯಾಕೆ ನಮ್ಮ ಹುಡುಗನ್ನ ಕೊಲ್ತಾನೆ ?' ಎನ್ನುವ ಸಂದೇಹ ಅನಂತನಿಗಿದ್ದರೂ ಅಪ್ಪ ಅದಕ್ಕೆ ತನ್ನದೇ ಆದ ಸಕಾರಣ ಕೊಟ್ಟಿದ್ದ,

'ದಾಯಾದಿತನ ತೋರಿಸೋಕೆ ಕಾರಣ ಎಂತಕ್ಕೆ ಬೇಕು ? ಒಟ್ನಲ್ಲಿ ನಾವು ಸುಖವಾಗಿರ್ಬಾರ್ದಪ್ಪಾ. ನಾಕು ಜನರ ಥರ ಬದುಕು ಮಾಡ್ಬಾರ್ದಪ್ಪ. ಕೊರಗಿ ಕೊರಗಿ ನಾಶನವಾಗಿ ಹೋಗ್ಬೇಕಪ್ಪಾ...' ತಾನು ಹೊರಳುವ ದಿಕ್ಕಿನಲ್ಲಿ ಅದಕ್ಕೆ ಬೇಕಾದ ನಂಬಿಕೆಗಳನ್ನು ಸೃಷ್ಟಿಸಿಕೊಳ್ಳುತ್ತಾ ಹೋಗುವ ಮನಸ್ಸು ಕೊನೆಗೆ ಅದು ನಿಜವೆಂದೇ ಭ್ರಮಿಸುವ ಹಂತಕ್ಕೆ ತಲುಪಿಬಿಡುತ್ತದೆ.

ಅಲ್ಲಿಂದಾಚೆಗೆ ಶುರುವಾಗಿದ್ದು ಕೋರ್ಟು, ಕಛೇರಿಗಳ ನಿತ್ಯ ಸಹವಾಸ. ಸಣ್ಣಪುಟ್ಟದಕ್ಕೂ ಜಗಳ, ಕದನ. ಸಾಕಾಗಿಹೋಗಿತ್ತು ಅನಂತನಿಗೆ. ಇದೊಂದು ಕೊನೆಯೇ ಕಾಣದ ಆಟದ ಕಮರಿ ಅನ್ನಿಸಿಬಿಟ್ಟಿತ್ತು. ಹಳೆಗಾಲದವರ ಹಾಗೆ ದ್ವೇಷ ಸಾಧಿಸುವುದನ್ನೇ ಜೀವನದ ಏಕೈಕ ಗುರಿ ಎನ್ನುವ ಹಾಗೆ ಪಟ್ಟು ಹಿಡಿದು ನಡೆಸಿಕೊಂಡು ಬರಲು ತನ್ನಿಂದ ಸಾಧ್ಯವಿಲ್ಲ. ತನಗೆ ಶಾಂತಿ ಬೇಕು, ನೆಮ್ಮದಿಯ ಜೀವನ ಬೇಕು. ತಪ್ಪು ಅಪ್ಪನದೇ ಆಗಿರಲಿ, ಹಿರಿಯಪ್ಪನದೇ ಆಗಿರಲಿ, ಆಗಿದ್ದು ಆಗಿಹೋಗಿದೆ. ಎಲ್ಲದಕ್ಕೂ ಒಂದು ಅಂತಿಮ ತೆರೆ ಎಳೆದುಬಿಡಬೇಕು ಎನ್ನುವ ಯೋಚನೆಯೊಂದಿಗೆ, ಭವಿಷ್ಯದ ಯೋಜನೆಯೊಂದಿಗೆ, ನಿಧಾನವಾಗಿ ಕಾರ್ಯರಂಗಕ್ಕಿಳಿದಿದ್ದ ಅನಂತ.

* * *

ದಿನದಿನವೂ ಎನ್ನುವಂತೆ ತೋಟದಲ್ಲಿ, ಗದ್ದೆಯಲ್ಲಿ, ಕಣ್ಣಿಗೆ ಬೀಳುತ್ತಿರುತ್ತಿದ್ದ ಹಿರಿಯಪ್ಪ. ಪರಸ್ಪರ ಮಾತು ನಿಂತು ಯಾವ ರಾಯನ ಕಾಲವೋ ಆಗಿಹೋದಂತೆ ಅನಿಸುತ್ತಿತ್ತು. ಮೊದಲು ಸ್ವಲ್ಪ ಮುಜುಗರ, ಸ್ವಲ್ಪ ಹಿಂಜರಿಕೆ, ಸ್ವಲ್ಪ ಅಧೈರ್ಯ. ಸೂಕ್ತ ಸಂದರ್ಭಕ್ಕೆ ಹೊಂಚು. ಒಮ್ಮೆ ತೋಟಕ್ಕೆ ಬಿಟ್ಟಿದ್ದ ಹಿರಿಯಪ್ಪನ ಮನೆಯ ಎಳೆ ಕರು

ಯಾವುದೋ ಬೇಲಿ ಕಿಂಡಿಯಲ್ಲಿ ನುಗ್ಗಿ ಈಚೆ ಕಡೆಗೆ ಬಂದಿತ್ತು. ಮೊದಲಿನ ಕಾಲವಾಗಿದ್ದರೆ ಕದನದ ಕಹಳೆ ಯೂದಲು ಇಷ್ಟು ಕಾರಣ ಸಾಕು. ಅಪ್ಪ ಒಂದು ಸಲ ಹೀಗೆ ತಮ್ಮ ತೋಟಕ್ಕೆ ನುಗ್ಗಿದ ಕರುವನ್ನು ಸಾಯಬೀಳ ಹೊಡೆದು ಮನೆಯಲ್ಲಿ ಎರಡು ದಿನ ಉಪಾಸ ಕಟ್ಟಿ ಹಾಕಿದ್ದ. ಯಾರ ಮೇಲಿನದೋ ಸಿಟ್ಟಿಗೆ ಮೂಕಪ್ರಾಣಿಗೆ ಶಿಕ್ಷೆ. ತಮ್ಮ ತೋಟದಲ್ಲಿದ್ದ ಹಿರಿಯಪ್ಪನನ್ನು ಕರೆದು ಅನಂತ ಹೇಳಿದ್ದ,

'ಇಲ್ನೋಡು ಹಿರಿಯಪ್ಪ, ನಿಮ್ಮನೆ ಕರು ಇಲ್ಲಿಗೆ ಬಂದಿದೆ. ಎಲ್ಲೋ ಕಿಂಡಿ ಬಿದ್ದಿದೇಂತ ಕಾಣುತ್ತೆ.'

'ಅದು ಹ್ಯಾಗೆ ಹುಡುಕ್ಕೊಂಡು ನುಸೀತಾವೋ ಮಾರಾಯಾ, ಆಶ್ಚರ್ಯ ಆಗುತ್ತೆ...'

ಸಲೀಸಾಗಿ ಮಾತಾಡಿದ್ದ ಹಿರಿಯಪ್ಪ. ಕಳೆದ ಹತ್ತಾರು ವರ್ಷಗಳಿಂದ ಯಾವ ಜಟಾಪಟಿ ನಡೆದೇ ಇಲ್ಲವೇನೋ, ತಾವು ದಿನದಿನವೂ ಮಾತಾಡಿ ಕೊಂಡಿದ್ದೇವೇನೋ, ಎನ್ನುವಂತಾ ಸಹಜ ನಡವಳಿಕೆ. ಅವನಿಗೂ ಸಾಕಾಗಿಹೋಗಿತ್ತಾ? ಅವನೂ ಹಣ್ಣಾಗಿ ಹೋಗಿದ್ದನಾ ? ಹಾಗಿದ್ದರೆ ಅಪ್ಪ ಯಾಕೆ ಮಾಗಲಿಲ್ಲ? ಅದು ಅವನ ಮನೋಧರ್ಮವೇ ?

ಹೀಗೆ ನಿಧನಿಧಾನವಾಗಿ ಕಡಿದ ಕೊಂಡಿಗೆ ಬೆಸುಗೆ ಬಿದ್ದು, ಒಣಗಿತೆಂದುಕೊಂಡಿದ್ದ ಸಂಬಂಧ ಚಿಗಿತು, ಒಮ್ಮೆ ದೂರಾಗಿ ಮತ್ತೆ, ಜೋಡಣೆಗೊಂಡ ಬಾಂಧವ್ಯ ಮತ್ತಷ್ಟು ಬಿಗಿಯಾಗುತ್ತದೆಯೇ? ಕಚ್ಚಿಕೊಳ್ಳುತ್ತದೆಯೇ ? ಗೊತ್ತಿಲ್ಲ ಅನಂತನಿಗೆ. ಆದರೆ ಹಾಗಾಗಿದ್ದು ಸತ್ಯ. ಹಿರಿಯಪ್ಪನ ಹೆಣ್ಣುಮಕ್ಕಳಿಗೆ ಮದುವೆಯಾಗಿ, ಮಗ ಉದ್ಯೋಗದ ಬೆನ್ನು ಬಿದ್ದು ಬೆಂಗಳೂರಿಗೆ ರವಾನೆಯಾಗಿ, ಮುದಿತನದ ಹೊಸ್ತಿಲವರೆಗೆ ಬಂದವರಿಗೆ ಒಂದು ಆಧಾರ ಬೇಕಾಗಿತ್ತು. ಅನಂತ ಆಸರೆಯಾಗಲು ಕಾದುನಿಂತಿದ್ದ. ಹಿರಿಯಪ್ಪ, ಮಗನಲ್ಲಿ ಏನೆಂತಾ ಅನ್ಯೋನ್ಯತೆ ಬೆಳೆದುಬಿಟ್ಟಿತು ಅಂದರೆ ಈ ದಾಯಾದಿ ಮತ್ಸರದ ಕತೆಗಳನ್ನು ಚಪ್ಪರಿಸಿದವರು ಅಚ್ಚರಿಯಿಂದ ಬೆಟ್ಟು ಕಚ್ಚಿಸಿಕೊಳ್ಳುವಷ್ಟು ಒಡನಾಟ ನಿಕಟವಾಯಿತು. ಹಿರಿಯಪ್ಪನ ಸಕಲ ಸೇವೆಗೆ ಟೊಂಕ ಕಟ್ಟಿಕೊಂಡು ಕಾದು ನಿಂತವನಂತೆ ಅನಂತ ಅವರಿಗೆ ಎಲ್ಲಾ ರೀತಿಯಲ್ಲೂ ಸಹಾಯಹಸ್ತ ಚಾಚತೊಡಗಿದ. ಮನೆಗೆ ಬೇಕಾದ ಸಾಮಾನುಗಳನ್ನು ಪೇಟೆಯಿಂದ ತಂದುಕೊಡುವುದಿರಲಿ, ಜಮೀನಿನ ಕೆಲಸ ಮಾಡಿಸುವುದಿರಲಿ, ಹುಷಾರು ತಪ್ಪಿದಾಗ ನೋಡಿಕೊಳ್ಳುವುದಿರಲಿ, ಎಲ್ಲಕ್ಕೂ ಅನಂತ ಹಾಜರು. ಕೆಲವು ಸಲ ಮನೆ ಕೆಲಸ ತಪ್ಪಿಸಿಯೂ ಅಲ್ಲಿನ ಕೆಲಸಕ್ಕೆ ಸಿದ್ಧ. ಅನಂತನ ಅಪ್ಪನಿಗೆ ಇದನ್ನು ಜೀರ್ಣಿಸಿಕೊಳ್ಳಲಾಗದೆ ಎದೆ ಉರಿ, ಅಮ್ಮನಿಗೆ ದಿಗ್ಭ್ರಾಂತಿ. ಕಾಲ ಕಳೆದಂತೆ ಈ ಬದಲಾವಣೆಗೆ ಎಲ್ಲರೂ ಒಗ್ಗಿಕೊಂಡರು, ಅನಂತ ಹೆತ್ತವರನ್ನು ಹೊರತುಪಡಿಸಿ. ಅಪರೂಪಕ್ಕೆ ತೌರಿಗೆ ಬರುವ ಹಿರಿಯಪ್ಪನ ಹೆಣ್ಣುಮಕ್ಕಳನ್ನು 'ಅಕ್ಕಾ...' ಎಂದು ಬಾಯ್ತುಂಬಾ ಕರೆಯುತ್ತಿದ್ದ ಅನಂತ ಅವರಿಗೆ ಪ್ರೀತಿಯ ತಮ್ಮನಾದ. ಅವರ ಮಕ್ಕಳಿಗೆ ಮಾವನಾದ. ಹಿರಿಯಪ್ಪನ ಮಗನಿಗೆ ದೊಡ್ಡ ಹೊರೆ ಇಳಿಸಿಕೊಂಡ ಸಮಾಧಾನ. 'ನಾನು ಅಲ್ಲಿದ್ರೂ ನನ್ನ ಮನಸ್ಸೆಲ್ಲಾ ಇಲ್ಲೇ ಇರ್ತಿತ್ತು ಅನಂತಣ್ಣ. ಯಾವಾಗ ಏನು ರಗಳೆ ಶುರುವಾಗುತ್ತೋ ಅಂತ ಹೆದರಿ ಸಾಯ್ತಿದ್ದೆ. ಇನ್ನು ನಿಶ್ಚಿಂತೆ...' ಎಂದಿದ್ದ ರಮಾಕಾಂತ. ಪರಸ್ಪರ ಕತ್ತಿ ಮಸೆಯುತ್ತಿದ್ದ ಎರಡು ಕುಟುಂಬಗಳಲ್ಲಿ ಇಷ್ಟೆಲ್ಲಾ ಪರಿವರ್ತನೆ ದಿಢೀರನೆ ನಡೆದಿರಲಿಲ್ಲ. ಕಾಲ ತನ್ನ ಪಾಲನ್ನು ವಸೂಲಿ ಮಾಡಿತ್ತು. ವರ್ಷಾನುಗಟ್ಟಲೆಯ ಹೊಕ್ಕುಬಳಕೆಯಿಂದ ಒಬ್ಬರಿಗೊಬ್ಬರಲ್ಲಿದ್ದ ಅಪನಂಬಿಕೆಯ ತೆರೆ ಸರಿದಿತ್ತು. ಇದನ್ನು ಆಗಮಾಡಿಸುವಲ್ಲಿ ಅನಂತ ಪ್ರಾಮಾಣಿಕವಾಗಿ ವಹಿಸಿದ್ದ ಶ್ರಮ ಸಾರ್ಥಕವಾಗಿತ್ತು. ಅವನ ಅಪ್ಪ ಇದೇ ಹೊಟ್ಟೆಬೇನೆ ಹಚ್ಚಿಕ್ಕೊಂಡು ತೀರಿಹೋದದ್ದು ಎಂದು ಅಮ್ಮ ಹೇಳುತ್ತಾಳೆ. 'ಋಣ ತೀರಿದ್ರೆ ಯಾರೇನು ಮಾಡೋಕಾಗುತ್ತೆ?' ಅನ್ನುತ್ತಾನೆ ಅನಂತ. ಇವನು ದಿನಬೆಳಗಾದರೆ ಹಿರಿಯಪ್ಪನ ಮನೆಗೆ ಓಡುತ್ತಿದ್ದರೂ ಅಲ್ಲಿನವರು ಹೆಚ್ಚಿಗೆ ಬರುತ್ತಿರಲಿಲ್ಲ. 'ನಿನ್ನ ಅಮ್ಮಂಗೆ ಪಥ್ಯ ಆಗಲ್ಲ ಮಾರಾಯ್ನೇ, ಒಂಥರಾ ಆಗುತ್ತೆ...' ಅಂದಿದ್ದಳು ಹಿರಿಯಮ್ಮ. ಎರಡು ಮನೆಗಳ ವ್ಯವಹಾರದ ಹೊಣೆ ಮೆಲ್ಲಮೆಲ್ಲಗೆ ಅನಂತನ ಹೆಗಲೇರಿತು. ಅವನು ಸಂತೋಷದಿಂದ ಈ ನೊಗಕ್ಕೆ ಹೆಗಲೊಡ್ಡಿದ. ಅಡಿಕೆ ಕೊಯ್ಲಿನ ಹೊತ್ತಿಗೆ ಹಿರಿಯಪ್ಪನ ತೋಟದ ಬೆಳೆಯನ್ನು ನಾಕು ಜನ ಒಪ್ಪತಕ್ಕಂತಹಾ ಗುತ್ತಿಗೆಗೆ ಹಿಡಿದು ತಾನೇ ಎಲ್ಲವನ್ನೂ ನಿಭಾಯಿಸಿ ಹಿರಿಯಪ್ಪನ ತಲೆಬಿಸಿ ಕಮ್ಮಿ ಮಾಡುವುದರೊಂದಿಗೆ ಅನಂತನ ಆರ್ಥಿಕ ಸ್ಥಿತಿ ಸುಧಾರಣೆಯ ಮೆಟ್ಟಿಲೇರತೊಡಗಿತು. ಅಡಿಕೆ ಕೊಯ್ಲಿನ ಪದ್ಧತಿ ಗದ್ದೆಕೊಯ್ಲಿಗೂ ವಿಸ್ತರಿಸಿತು. ಸ್ವತಃ ದೇಖರೇಖಿ ನೋಡಿಕೊಳ್ಳುವ ಹಂಗಿಲ್ಲದೆ ಹಿರಿಯಪ್ಪನ ಪಣತದಲ್ಲಿ ಭತ್ತ ತುಂಬತೊಡಗಿತು. ಮಳೆಗಾಲ ಹಿಡಿಯುವ ಮುಂಚೆ ಮೂಟೆಗಟ್ಟಲೆ ಅಕ್ಕಿ ಮಾಡಿಸಿ ತಂದು ಹಾಕುವವನೂ ಅನಂತ. ಪೇಟೆಯಿಂದ ವರ್ಷಾವಧಿ ಸಾಮಾನು ಮನೆ ಬಾಗಿಲಿಗೆ ತಂದಿಳಿಸುವವನೂ ಅನಂತ. ಎಲ್ಲಕ್ಕೂ ಹಿರಿಯಪ್ಪ, ಹಿರಿಯಮ್ಮನ ಬಾಯಲ್ಲಿ ಅನಂತ, ಅನಂತ.

'ಸತ್ಯಕ್ಕಾರೂ ಹಿಂದಿನ ಜನ್ಮದಲ್ಲಿ ನೀನು ನನ್ನ ಹೊಟ್ಟೇಲಿ ಹುಟ್ಟಿದ್ದಿ ಕಣೋ. ಏನೋ ಪಾಪಶೇಷ ಇದ್ದಿದ್ದಕ್ಕೆ ಈ ಜನ್ಮದಲ್ಲಿ ಕೆಲವು ವರ್ಷ ದೂರ ಆಗಿದ್ದಿ...' ಎಂದು ಹಿರಿಯಮ್ಮ ಹೇಳಿದ ಮೇಲೆ ದೂಸರಾ ಮಾತೇನಿದೆ ?



* * *

ಖಾಲಿ ಟಿಫನ್ ಕ್ಯಾರಿಯರ್ ಹಿಡಿದು ಅನಂತ ಮನೆಗೆ ಬರುವ ಹೊತ್ತಿಗೆ ಘಂಟೆ ಒಂಭತ್ತು ದಾಟಿತ್ತು. ಬಿಸಿಲು ನಿಧಾನಕ್ಕೆ ಚುರುಕಾಗತೊಡಗಿತ್ತು. ಮೆಟ್ಟಿಲ ಮೇಲೆ ಅನಂತ ಟಪಟಪ ಎಕ್ಕಡ ಕುಟ್ಟಿ ಕಾಲಿನ ಮಣ್ಣು ಝಾಡಿಸಿದ ಸದ್ದಿಗೆ ಸುಳು ಹಿಡಿದು ಒಳಗಿನಿಂದ ಬಂದಳು ಮಾಲಕ್ಷ್ಮಿ, 'ಮಾರಾಯ್ರೇ ಹೋದೋರು ಅಲ್ಲೇ ಹೋಗ್ಬಿಡೋದಾ ? ನಿಮ್ಮಮ್ಮಂಗೆ ಕಾಫಿಗೀಫಿ ಕುಡಿಸ್ಬೇಕೂಂತ ನೆನಪಿಗೆ ಬರ್ಲಿಲ್ಲವಾ ? ಹಾಸಿಗೇಲಿ ಉಚ್ಚೆ ಹುಯ್ಕಂಡು ಗಬ್ಬೆಬ್ಬಿದಾರೆ ನೋಡಿ, ನಂಗೊತ್ತಿಲ್ಲ, ನೀವುಂಟು ನಿಮ್ಮಮ್ಮ ಉಂಟು...'

ಒಂದೇ ಉಸಿರಿಗೆ ವರದಿ ಒಪ್ಪಿಸಿದವಳನ್ನು ನೋಡುತ್ತಾ ಅನಂತ ಮುಖ ಸಿಂಡರಿಸಿಕೊಂಡು ಗೊಣಗಿದ,

'ಯಾಕಾರೂ ಅರೆಜೀವ ಆಗಿ ಹೀಗೆ ಬದುಕಿರ್ತಾರೋ, ಸಾಕಾಗ್ಹೋಯ್ತಪ್ಪಾ ನಂಗೆ...'

ವಸುಮತಿ ಉಡುಪ
'ಅಮೂಲ್ಯ', ಗ್ರೌಂಡ್ ಫ್ಲೋರ್, ಮನೆ ನಂ. ೧೨೦, ೩ನೇ ಕ್ರಾಸ್
ವಿಜಯನಗರ ರೈಲ್ವೆ ಬಡಾವಣೆ, ಮೈಸೂರು

ಕನ್ನಡ ಹಸ್ತಪ್ರತಿಯಂತಹ ತೀರ ಪ್ರಾಚೀನ ಮತ್ತು ಸಾಂಪ್ರದಾಯಿಕವಾದ ಕ್ಷೇತ್ರದಲ್ಲಿ ಕಂಪ್ಯೂಟರ್ ಬಳಕೆ ಇಂದು ಸಾಂಪ್ರದಾಯಿಕ ಮನಸ್ಸುಗಳ ಮೂಗುಮುರಿಯುವಿಕೆಯ ಮಧ್ಯೆಯೂ ಸಾಧ್ಯವಾಗುತ್ತಿರುವುದು ಸಂತಸದ ವಿಷಯ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ೧೯೯೯ ರಿಂದಲೂ (ಈ ಕ್ಷೇತ್ರದಲ್ಲಿ ಮೊಟ್ಟಮೊದಲ ಬಾರಿಗೆ) ಕಂಪ್ಯೂಟರ್‌ನ್ನು ಬಳಸಿ ಹಸ್ತಪ್ರತಿಗಳನ್ನು ಸಂರಕ್ಷಿಸುವ, ಸಂಗ್ರಹಿಸಿಡುವ, ಅಧ್ಯಯನ ಮಾಡುವ ಕೆಲಸವನ್ನು ಮಾಡುತ್ತಿದೆ. ಭೂತಗನ್ನಡಿ ಹಿಡಿದು ಕೆಲವರು ಮಾತ್ರ ಓದಲು ಸಾಧ್ಯವಾಗುತ್ತಿದ್ದ ಹಸ್ತಪ್ರತಿಗಳನ್ನು ಇಂದು ಗಣಕೀಕರಣಕ್ಕೆ ಅಳವಡಿಸುವ ಮೂಲಕ ಅದನ್ನು ಸಾರ್ವತ್ರಿಕ ಓದಿಗೆ ಒಳಪಡಿಸಲಾಗುತ್ತಿದೆ.

# ಕನ್ನಡ ಹಸ್ತಪ್ರತಿಗಳು ಮತ್ತು ಆಧುನಿಕ ತಂತ್ರಜ್ಞಾನ

—— ಡಾ॥ ವೀರೇಶ ಬಡಿಗೇರ ——

ಅಕ್ಷರವು ಅ - ಕ್ಷರ (ಅವಿನಾಶಿ) ಎನ್ನುವ ಮಾತು ಇಂದಿನ ಕಂಪ್ಯೂಟರ್ ಕ್ರಾಂತಿಯಿಂದ ಹುಸಿಯಾಗಿ ಕಾಣುತ್ತಿದೆ. ಲಿಪಿ ಅಥವಾ ಬರವಣಿಗೆ ಪವಿತ್ರ ಶಾಶ್ವತ ಮತ್ತು ಅಧಿಕೃತ ಎಂದು ನಂಬಿಕೊಂಡು ಬಂದ ಪರಂಪರೆಯಲ್ಲಿ ಅಕ್ಷರ ಅಮೂಲ್ಯವಾದದ್ದಾಗಿತ್ತು. ಅದಕ್ಕೊಂದು ಸೊಗಸೂ ಇತ್ತು. (ಬಿಂದುವಿನೊಂದು ಶೋಭೆ...) ಇಂಥ ಸೊಗಸುಗಾರ ಲಿಪಿ ಲಿಪಿಕಾರರ ಪರಂಪರೆಯೇ ಕನ್ನಡದಲ್ಲಿತ್ತು. ಲಿಪಿ ಮಾಡುವುದು ಒಂದು ಸೃಜನಾತ್ಮಕ ಕಾಯಕವೂ ಆಗಿತ್ತು. ಇಂಥ ಪರಂಪರೆಯೊಂದರಲ್ಲಿ ಇಂದು ಕಂಪ್ಯೂಟರಿನ ಕೀಲಿಮಣಿಯೊಂದಿಗೆ ಬೆಸೆದುಕೊಂಡು ಮೂಡಿ ಮಾಯವಾಗುವ ಅಕ್ಷರಗಳ ಭ್ರಮಾತ್ಮಕ ಮತ್ತು ಅಮೂರ್ತ ಜಗತ್ತೇ ತೆರೆದುಕೊಳ್ಳುತ್ತಿದೆ. ಲಿಖಿತ ರೂಪವೊಂದರಲ್ಲಿ ಮೈತಳೆಯುವ ಮೊದಲೇ ಅಕ್ಷರಗಳು ಕಂಪ್ಯೂಟರ್‌ನಲ್ಲಿ ಮೂಡುತ್ತಿವೆ. ಕನ್ನಡದ ವೃತ್ತಿಪರ ಪತ್ರಿಕೋದ್ಯೋಗಿಗಳು ದಿನವೂ ತಮ್ಮ ಪತ್ರಿಕಾ ಬರಹಗಳನ್ನು ಕಂಪ್ಯೂಟರ್‌ನಲ್ಲಿಯೇ ಮೂಡಿಸುತ್ತಿದ್ದಾರೆ. ಅಂತರ್ಜಾಲದಲ್ಲಿ ಇ-ಮೇಲ್ ಕಳಿಸುವವರು ಕೂಡ ನೇರವಾಗಿ ಕಂಪ್ಯೂಟರ್ ಮೇಲೆ ಬರೆಯುತ್ತಿದ್ದಾರೆ. ಇನ್ನು ಮುಂದುವರಿದು ಹೇಳುವುದಾದರೆ ಇಂದು ಧ್ವನಿ ಸಹಾಯದಿಂದಲೇ ನೇರವಾಗಿ ಕಂಪ್ಯೂಟರ್ ಮೇಲೆ ಲೇಖನ ಮಾಡುವ ದಾರಿಗಳು ತೆರೆದುಕೊಂಡಿವೆ ಎಂಬುದು ಗಮನಾರ್ಹ. ಪೆನ್ನು, ಪೇಪರ್ ರಹಿತ ಸಾಮಾಜಿಕ ಆವರಣ ಅನಾವರಣಗೊಳ್ಳುತ್ತಿದೆ. ಬರವಣಿಗೆಯ ಕ್ರಮಕ್ಕೂ ಕೀಲಿ ಮಣಿಯ ಕಸರತ್ತಿಗೂ ಅಗಾಧವಾದ ವ್ಯತ್ಯಾಸ ಕಾಣುತ್ತಿದೆ. ಒಂದು ರೀತಿಯಲ್ಲಿ ಇದನ್ನು ಕನ್ನಡ ಬರವಣಿಗೆಯ ಪಲ್ಲಟವೆಂದರೂ ನಡೆದೀತು. ಉದಾಹರಣೆಗೆ, 'ತಂತ್ರಜ್ಞಾನ' ಎಂದು ಬರೆಯುವಲ್ಲಿ 'ಜ್ಞಾ' ಬರೆಯಬೇಕೆಂದರೆ ಸಾಮಾನ್ಯವಾಗಿ 'ಜಾ' ಬರೆದು 'ಞ' ಒತ್ತನ್ನು ಕೊಡುವುದು ವಾಡಿಕೆ. ಆದರೆ ಕಂಪ್ಯೂಟರ್ ಕೀಬೋರ್ಡಿನಲ್ಲಿ 'ಜ' ಬರೆದು (ಆಂಗ್ಲ ಜೆ) 'ಞ' ಒತ್ತು ನೀಡಿ ಆಮೇಲೆ 'ಆ' ಸ್ವರ ಸೇರಿಸಿ 'ಜಾ' ಮಾಡಿ ''ಜ್ಞಾ' ಅಕ್ಷರವನ್ನು ಸಿದ್ಧಪಡಿಸಿಕೊಳ್ಳುವ ಸೌಲಭ್ಯಗಳು ನಿಹಿತವಾಗಿವೆ. ಇಂದು ವಿವಿಧ ಕಂಪನಿಗಳು ವಿವಿಧ ಸಾಫ್ಟ್‌ವೇರ್‌ಗಳು ವಿವಿಧ ರೀತಿಯ ಅಕ್ಷರ ಸಂಯೋಜನೆಯನ್ನು ಹೊಂದಿದ್ದು ಕಾಣುತ್ತದೆ. ಹೀಗೆ ತಂತ್ರಜ್ಞಾನ ನಮ್ಮ ಭಾಷಾ ಬರವಣಿಗೆಯ ಕೌಶಲವೊಂದನ್ನು ಆಮೂಲಾಗ್ರವಾಗಿ ಬದಲಾಯಿಸಲು ಸನ್ನದ್ಧವಾಗಿದೆ. ಯೋಚಿಸುತ್ತಾ ತಾಳೆಗರಿ ಅಥವಾ ಹಾಳೆಯ ಮೇಲೆ ಬರೆಯುವ ಕ್ರಮಕ್ಕೂ ಕಂಪ್ಯೂಟರ್ ತೆರೆಯ ಮೇಲೆ ನೇರವಾಗಿ ಮೈ ತಳೆಯುವ ಭಾಷಾ ಸ್ವರೂಪಕ್ಕೂ ಅಗಾಧ ವ್ಯತ್ಯಾಸವಿದೆ.

ಹಾಗೆ ನೋಡಿದರೆ ಕನ್ನಡ ಬರವಣಿಗೆಯ ಸ್ವರೂಪವೇ ಮುದ್ರಣಯಂತ್ರದಲ್ಲಿ ಕನ್ನಡದ ಮೊದಲ ಗ್ರಂಥ ಪ್ರಕಟವಾದಾಗಿನಿಂದಲೂ ಬದಲಾಗಿದೆ. ಮುದ್ರಣ ಯಂತ್ರ, ಬೆರಳಚ್ಚು ಯಂತ್ರ, ಮೈಕ್ರೋಫಿಲ್ಮ್‌ಗಳ ಆವಿಷ್ಕಾರಗಳು ಅಕ್ಷರ ಸಂಯೋಜನೆಗೆ ಮತ್ತು ಅದನ್ನು ಗ್ರಹಿಸುವ ವಿಧಾನದಲ್ಲಿಯೇ ಬದಲಾವಣೆ ತಂದವು. ಬರವಣಿಗೆಯ ಮಾಧ್ಯಮದ ಬದಲಾವಣೆಯೂ ಇಂಥ ಸ್ವರೂಪ ವ್ಯತ್ಯಾಸಕ್ಕೆ ಕಾರಣವಾಗಿವೆ. ಹಸ್ತಪ್ರತಿಗಳಂತಹ ಕೈಬರಹಗಳು ಪರಿಣತ ಓದುಗರನ್ನು ಬಯಸುತ್ತವೆ. ಆದರೆ ಮುದ್ರಣ, ಬೆರಳಚ್ಚು, ಕಂಪ್ಯೂಟರ್ ಯಂತ್ರಗಳಂತಹ ತಂತ್ರಜ್ಞಾನದ ಪ್ರಭಾವಗಳು ಬರಹದ ವಿನ್ಯಾಸವನ್ನು ಪ್ರಮಾಣೀಕರಿಸಿದ ಕಾರಣವಾಗಿ ಇಂದು ಓದುವುದು ಎಂದರೆ ಅಂತಹ ವಿಶೇಷ ತಜ್ಞತೆಯ ಕೆಲಸವಾಗಿ ಉಳಿದಿಲ್ಲ. ಪ್ರಮಾಣಬದ್ಧವಾದ ಈ ಅಕ್ಷರ ವಿನ್ಯಾಸದ ಆವಿಷ್ಕಾರಗಳು ಓದುವ ಕ್ರಿಯೆಯನ್ನು ಹೆಚ್ಚು ಶ್ರಮವಿಲ್ಲದೆ ವೇಗವಾಗಿ ಓದುವ, ಹೆಚ್ಚು ತಿಳಿಯುವ, ಸಾರ್ವತ್ರಿಕ ಸಾಮರ್ಥ್ಯವನ್ನು ಒದಗಿಸಿವೆ ಎಂಬುದು ಗಮನಾರ್ಹ.

ಹೀಗೆ ಕನ್ನಡ ಹಸ್ತಪ್ರತಿಯಂತಹ ತೀರ ಪ್ರಾಚೀನ ಮತ್ತು ಸಾಂಪ್ರದಾಯಿಕವಾದ ಕ್ಷೇತ್ರದಲ್ಲಿ ಕಂಪ್ಯೂಟರ್ ಬಳಕೆ ಇಂದು ಸಾಂಪ್ರದಾಯಿಕ ಮನಸ್ಸುಗಳ ಮೂಗು ಮುರಿಯುವಿಕೆಯ ಮಧ್ಯೆಯೂ ಸಾಧ್ಯವಾಗುತ್ತಿರುವುದು ಸಂತಸದ ವಿಷಯ. ಕನ್ನಡ ವಿಶ್ವವಿದ್ಯಾಲಯದ ಹಸ್ತಪ್ರತಿಶಾಸ್ತ್ರ ವಿಭಾಗವು ೧೯೯೯ ರಿಂದಲೂ (ಈ ಕ್ಷೇತ್ರದಲ್ಲಿ ಮೊಟ್ಟಮೊದಲ ಬಾರಿಗೆ) ಕಂಪ್ಯೂಟರ್‌ನ್ನು ಬಳಸಿ ಹಸ್ತಪ್ರತಿಗಳನ್ನು ಸಂರಕ್ಷಿಸುವ, ಸಂಗ್ರಹಿಸಿಡುವ, ಅಧ್ಯಯನ ಮಾಡುವ ಕೆಲಸವನ್ನು ಮಾಡುತ್ತಿದೆ. ಭೂತಗನ್ನಡಿ ಹಿಡಿದು ಕೆಲವರು ಮಾತ್ರ ಓದಲು ಸಾಧ್ಯವಾಗುತ್ತಿದ್ದ ಹಸ್ತಪ್ರತಿಗಳನ್ನು ಇಂದು ಗಣಕೀಕರಣಕ್ಕೆ ಅಳವಡಿಸುವ ಮೂಲಕ ಅದನ್ನು ಸಾರ್ವತ್ರಿಕ ಓದಿಗೆ ಒಳಪಡಿಸಲಾಗುತ್ತಿದೆ. ಹಸ್ತಪ್ರತಿಯೊಂದನ್ನು ಸ್ಕ್ಯಾನ್‌ಮಾಡುವ ಮೂಲಕ ಗಣಕ ಪರದೆಯ ಮೇಲೆ ತಂದು ಗ್ರಾಫಿಕ್ ಸಾಫ್ಟ್‌ವೇರ್‌ನ (ಫೋಟೋಶಾಪ್ - ಫೋಟೋಫಿನಿಷ್) ಸಹಾಯದಿಂದ ಇಮೇಜ್ ರೂಪದಲ್ಲಿರುವ ಹಸ್ತಪ್ರತಿಯಲ್ಲಿನ ಕೊಳೆಯನ್ನು ಸ್ವಚ್ಛ ಮಾಡುವ ಮತ್ತು ಕಣ್ಣಿಗೆ ಹಿತವಾಗುವಂತೆ ವಿವಿಧ ಆಕಾರ ಮತ್ತು ಬಣ್ಣಗಳಲ್ಲಿ ಹಿಗ್ಗಿಸುವ - ಕುಗ್ಗಿಸುವ ಕೆಲಸಮಾಡಬಹುದಾಗಿದೆ. ಹಸ್ತಪ್ರತಿಯಲ್ಲಿ ಅಸ್ಪಷ್ಟವಾಗಿ ಕಾಣುವ ಅಕ್ಷರವನ್ನು ಮತ್ತಷ್ಟು ಆಳವಾಗಿ ಮತ್ತು ಸೂಕ್ಷ್ಮವಾಗಿ ಇಲ್ಲಿ ಗಮನಿಸಬಹುದಾಗಿದೆ. ಹಾಗೆ ತುಟಿತಗೊಂಡ ಹಸ್ತಪ್ರತಿಯನ್ನು ರಿಪೇರಿ ಮಾಡುವ, ಲುಪ್ತಗೊಂಡ ಮತ್ತು ಅಕ್ಷರಗಳಿಲ್ಲದ ಭಾಗಗಳನ್ನು ಪುನಾರಚಿಸುವ ಸಾಧನಗಳು

ಕಂಪ್ಯೂಟರಿನಿಂದ ಪ್ರಾಪ್ತವಾಗಿವೆ. ಹೀಗೆ ಇಲ್ಲವಾದ ಅಕ್ಷರಗಳನ್ನು ಗಣಕೀಕೃತ ಪಠ್ಯದಲ್ಲಿಯೇ ಹುಡುಕಿ ತೆಗೆಯುವುದು ಒಂದು ರೀತಿಯಾದರೆ, ಸ್ಟೈಲೆಸ್ ಎನ್ನುವ ಪೆನ್ನಿನಂತಹ ಉಪಕರಣದಿಂದ ಬರೆದು ಸೇರಿಸುವುದು ಮತ್ತೊಂದು ರೀತಿಯ ಸಾಧ್ಯತೆಯಾಗಿದೆ. ಗಣಕ ಪರದೆಯ ಮೇಲೆ ಊನಗೊಂಡ ಹಸ್ತಪ್ರತಿಯನ್ನು ಹೀಗೆ ಹಲವು ಉಪಾಯಗಳಿಂದ ಪುನಾರಚಿಸಿಕೊಳ್ಳಬಹುದಾಗಿದೆ.

ಗಣಕ ಪರದೆಯ ಮೇಲೆ ಹೀಗೆ ಊನಗೊಂಡ ಹಸ್ತಪ್ರತಿಯೊಂದನ್ನು ಪುನಾರಚಿಸಲು ಮತ್ತು ಪರಿಷ್ಕರಿಸಲು ಬಹುಮುಖ್ಯವಾಗಿ ಬೇಕಾಗಿದ್ದು ಕಾರ್ಪಸ್. ಹಸ್ತಪ್ರತಿಗಳಂತಹ ಭಾಷಾ ಸಾಮಗ್ರಿಗಳ ಸಂಸ್ಕರಣೆಯ ಎಲ್ಲಾ ಕಾರ್ಯಗಳಿಗೆ ಆಧಾರವಾಗಿರುವುದೇ ಈ ಕಾರ್ಪಸ್. ಕಾರ್ಪಸ್ ಎಂದರೆ ಸೂಕ್ಷ್ಮವಾಗಿ ಎಚ್ಚರಿಕೆಯಿಂದ ಆಯ್ದ ಪ್ರಾತಿನಿಧಿಕ ಪಠ್ಯಗಳ ಎಲೆಕ್ಟ್ರಾನಿಕ್ ರೂಪದ ಸಂಗ್ರಹ. ಹಸ್ತಪ್ರತಿಗಳು ಪ್ರಧಾನವಾದ ಕಾರ್ಪಸ್‌ನ್ನು ಮೂರು ರೀತಿಯಲ್ಲಿ ಸೃಷ್ಟಿಸಬಹುದಾಗಿದೆ. ಅಂದರೆ ಹಸ್ತಪ್ರತಿಯೊಂದನ್ನು ಗಣಕೀಕರಣಕ್ಕೆ ಅಳವಡಿಸಲು ಮೂರು ರೀತಿಯ ವಿಧಾನಗಳನ್ನು ಬಳಸಬಹುದು.

೧. ಡಿ.ಟಿ.ಪಿ. ಸಾಫ್ಟ್‌ವೇರ್ ಅಥವಾ ಪದಸಂಸ್ಕರಣ ಅಥವಾ ಸಂಕಲನ ಬಳಸಿಕೊಂಡು ಕೀಬೋರ್ಡ್ ಸಹಾಯದಿಂದ ಕಂಪ್ಯೂಟರ್‌ಗೆ ಅಳವಡಿಸುವುದು. ಇದನ್ನು ಕೀ ಇನ್ ಮಾಡುವುದು ಎಂದು ಹೇಳಬಹುದು.

೨. ಸ್ಕ್ಯಾನರ್ ಯಂತ್ರದ ಮೂಲಕ ಸ್ಕ್ಯಾನ್ ಮಾಡುವುದು ಅಥವಾ ಡಿಜಿಟಲ್ ಕ್ಯಾಮರಾ ಮೂಲಕ ಸೆರೆ ಹಿಡಿಯುವುದು.

೩. ಮೈಕ್ರೋಫೋನ್ ಮುಖಾಂತರ ಓದಿ ರೇಕಾರ್ಡ್ ಮಾಡುವುದು.

ಮೊದಲನೆಯ ವಿಧಾನವು ಹಸ್ತಪ್ರತಿಯಲ್ಲಿರುವ ಪಠ್ಯವನ್ನು ಕಂಪ್ಯೂಟರ್ ಕೀಬೋರ್ಡ್



ಸ್ಕ್ಯಾನರ್

ಮೂಲಕ ಟೈಪ್ ಮಾಡುವುದು. ಹಳಗನ್ನಡದಲ್ಲಿರುವ ಇಂಥ ಪಠ್ಯವನ್ನು ಟೈಪ್ ಮಾಡಲು ತಜ್ಞತೆ ಬೇಕು. ಇಲ್ಲವೆ ತಜ್ಞರಿದ್ದವರು ಬರೆದುಕೊಡಬೇಕು. ಇದು ಶ್ರಮ ಮತ್ತು ಹೆಚ್ಚು ಸಮಯವನ್ನು ಬೇಡುವಂಥದ್ದು. ಹಸ್ತಪ್ರತಿಯ ಮೂಲರೂಪ ನಮಗಿಲ್ಲಿ ದೊರಕದು.

ಎರಡನೆಯ ವಿಧಾನವೂ ಹಸ್ತಪ್ರತಿಯ ಮೂಲರೂಪವನ್ನು ಯಥಾವತ್ತಾಗಿ ಹಿಡಿದಿಟ್ಟುಕೊಳ್ಳಲು ಸಹಾಯಕವಾಗುವಂಥದ್ದು. ಇದಕ್ಕೆ ಸ್ಕ್ಯಾನರ್ ಜೊತೆಗೆ ಡಿಜಿಟಲ್ ಕ್ಯಾಮರಾವನ್ನು ಬಳಸಿಕೊಳ್ಳಬಹುದಾಗಿದೆ. ಹಸ್ತಪ್ರತಿಗಳ ಸ್ಥಿರ ಚಿತ್ರಣ ಪಡೆಯುವಲ್ಲಿ ಮತ್ತು ಅದನ್ನು ವಿವಿಧ ರೀತಿಯಲ್ಲಿ ಪರಿಷ್ಕರಿಸುವ ಮತ್ತು ಪುನಾರಚಿಸುವ ನಿಟ್ಟಿನಲ್ಲಿ ಈ ವಿಧಾನ ತುಂಬಾ ಉಪಯುಕ್ತವಾಗಿದೆ. ಹೀಗೆ ಸ್ಥಿರ ರೂಪದಲ್ಲಿ ಮತ್ತು ಸ್ವಸ್ಥಿತಿಯಲ್ಲಿ ಇಮೇಜ್ ರೂಪದಲ್ಲಿ ಸಿಗುವ ಹಸ್ತಪ್ರತಿಯಲ್ಲಿ ICR (Intelligent Character Recognition) ಮತ್ತು OCR (Optical Character Recogniser)ಗಳ ಸಹಾಯದಿಂದ ಟೈಪಿನ ಅಗತ್ಯವಿಲ್ಲದೆ ನೇರವಾಗಿ ನಮಗೆ ಬೇಕಾದ ಭಾಷೆಗೆ ಪರಿವರ್ತಿಸಿಕೊಳ್ಳಬಹುದಾಗಿದೆ. ಹಸ್ತಪ್ರತಿಯೊಳಗಡೆ ನಮಗೆ ಬೇಕಾದಲ್ಲಿ ಪ್ಯಾರಾ ಮಾಡುವ, ತೆರಪನ್ನು ಸೂಚಿಸುವ, ಅಕ್ಷರಗಳನ್ನು ಬೋಲ್ಡ್ ಮಾಡುವ, ಬೇಡವಾದದ್ದನ್ನು ತೆಗೆದುಹಾಕುವ, ಬೇಕಾದ್ದನ್ನು ಸೇರಿಸುವ ಸಾಧ್ಯತೆಗಳು ಮೈಚಾಚಿವೆ. ಇಂಥ ಕೈಬರಹವನ್ನು ಅರ್ಥಮಾಡಿಕೊಳ್ಳುವಲ್ಲಿ ಕಂಪ್ಯೂಟರ್‌ನಲ್ಲಿ ಎರಡು ವಿಧಗಳಿವೆ : ೧. ಆಫ್‌ಲೈನ್ ಹ್ಯಾಂಡ್‌ರೈಟಿಂಗ್ ರಿಕಗ್ನಿಷನ್ (Offline Handwriting Recognition). ೨. ಆನ್‌ಲೈನ್ ರಿಕಗ್ನಿಷನ್ (On - line Recognition). ಮೊದಲನೆಯದು ಹಾಳೆಯ ಮೇಲಿರುವ ಅಕ್ಷರಗಳನ್ನು ಗುರುತಿಸಲು ಮತ್ತು ಅರ್ಥೈಸಲು ಸಹಾಯಕವಾದರೆ, ಎರಡನೆಯದು ಎಲ್‌ಸಿಡಿ ಮಾನಿಟರ್‌ನಲ್ಲಿ ಪೆನ್ನಿನಂತಹ ಒಂದು ವಸ್ತುವಿನ ಚಲನೆಯನ್ನಾಧರಿಸಿ ಅಕ್ಷರ ಗುರುತಿಸುತ್ತದೆ. ಅಂದರೆ ಗಣಕ ಪರದೆಯ ಮೇಲೆ ಪೆನ್ನಿನಂತಹ ಉಪಕರಣದಿಂದ ನಾವು ಬರೆದಾಗ ಕಂಪ್ಯೂಟರ್ ವಿಶಿಷ್ಟ ಲೇಖನಿಯ ಚಲನೆಯ ಗತಿಯನ್ನು ಆಧರಿಸಿ ಕೈಬರಹಗಳನ್ನು ಅರ್ಥೈಸುತ್ತದೆ.

ಮೂರನೆಯ ವಿಧಾನವು ಹಸ್ತಪ್ರತಿಗಳ ಸ್ಥಿರಚಿತ್ರಗಳ ಬದಲಾಗಿ ಆ ಪಠ್ಯದ ಧ್ವನಿ ರೂಪವನ್ನು ನಮಗೆ ಕೊಡುತ್ತದೆ. Speech to Text (ಮಾತಿನಿಂದ ಬರಹಕ್ಕೆ) ಸಾಫ್ಟ್‌ವೇರ್‌ನ ಸಹಾಯದಿಂದ ಹಸ್ತಪ್ರತಿಗಳನ್ನು ಓದಿ ಅದನ್ನು ಸಂಕಲಿಸಬಹುದಾದ ಪಠ್ಯವನ್ನಾಗಿ ಪರಿವರ್ತಿಸಿಕೊಳ್ಳಬಹುದಾಗಿದೆ.

**ಸಂಕಲನ ಮತ್ತು ಪರಿಷ್ಕರಣ**

ಹಸ್ತಪ್ರತಿಯೊಂದರ ಸಂಕಲನ ಮತ್ತು ಪರಿಷ್ಕರಣಕ್ಕೆ ಟೈಪ್ ಟೋಕನ್ (Type Token) ಹಾಗೂ ಮಾರ್ಫಾಲಾಜಿಕಲ್ ವಿಶ್ಲೇಷಕಗಳು ತುಂಬ ಸಹಕಾರಿಯಾಗಿವೆ. ಕಾರ್ಪಸ್‌ನಿಂದ ನಾವು ಎಲ್ಲಾ ನಿರ್ದಿಷ್ಟ ಪದರೂಪಗಳ ಮತ್ತು ಅವುಗಳ ಪುನರಾವರ್ತನೆಯ ಸಂಖ್ಯೆಯನ್ನು ಪಡೆಯಬಹುದಾಗಿದೆ. ಟೈಪ್ ಟೋಕನ್ ವಿಶ್ಲೇಷಕವು ನೀಡುವ ಸಂಪೂರ್ಣ ಪದರೂಪಗಳ ಮತ್ತು ನಿಷ್ಪತ್ತಿ ರೂಪಗಳ ಸಹಾಯದಿಂದ ಶಬ್ದ ವಿಶ್ಲೇಷಕ ಬಳಸಿ ಒಂದು ಪದದ ಮೂಲರೂಪವನ್ನು ಅದರ ಆಂತರಿಕ ರಚನೆಯ ವಿನ್ಯಾಸಗಳನ್ನು ಮತ್ತು ಸಹೋದರ ಭಾಷೆಗಳಲ್ಲಿ ಅದು ಪಡೆದಿರುವ ಅರ್ಥಗಳನ್ನು ಹುಡುಕಿ ಪಡೆಯಬಹುದಾಗಿದೆ. Key-word-in Context ಉಪಕರಣದ ಮೂಲಕ ಕಾರ್ಪಸ್‌ನಲ್ಲಿ ನಿರ್ದಿಷ್ಟ ಪದವು ಬಳಕೆಯಾಗಿರುವ ಎಲ್ಲಾ ವಾಕ್ಯಗಳ ಪಟ್ಟಿಯನ್ನು ತಯಾರಿಸಬಹುದು. ಒಂದು ಪದವು ವಿಭಿನ್ನ ಸಂದರ್ಭದಲ್ಲಿ ಯಾವ ಯಾವ ಅರ್ಥದಲ್ಲಿ ಬಳಕೆಯಾಗಿದೆ, ಎಷ್ಟೆಷ್ಟು ಸಲ ಬಳಕೆಯಾಗಿದೆ ಎನ್ನುವುದನ್ನು ಕಂಡುಕೊಳ್ಳಬಹುದಾಗಿದೆ. ಇದು ಕೃತಿಕಾರನೊಬ್ಬನ ಜೀವನ ದೃಷ್ಟಿಯನ್ನು ಅರ್ಥಮಾಡಿಕೊಳ್ಳಲು ಸಹಾಯ ಮಾಡುತ್ತದೆ.

ಉದಾಹರಣೆಗೆ, ಮುದ್ದಣ ತನ್ನ ಒಟ್ಟು ಕಾವ್ಯಗಳಲ್ಲಿ ಉಪಯೋಗಿಸಿದ ಸ್ತ್ರೀವಾಚಿ ಶಬ್ದಗಳನ್ನು ಪಟ್ಟಿ ಮಾಡಿದರೆ ಸುಮಾರು ೬೦೦ ಬಾರಿ ಉಪಯೋಗಿಸಿದ್ದನ್ನು ಕಂಪ್ಯೂಟರ್ ಹೇಳುತ್ತದೆ. ಇದರಲ್ಲಿ ಮತ್ತೇ ಕಮಲ, ಚಂದ್ರ ಮುಂತಾದ ಹಳೆಯ ಕ್ರಮದ ಹೋಲಿಕೆಗಳಿರುವುದನ್ನು ಬೇರೆ ಮಾಡಬಹುದು. ಹೆಣ್ಣಿನ ಕೇಶ, ಕಣ್ಣು, ಮುಖ, ಗಾತ್ರ ಮೊದಲಾದ ಅಂಗಾಂಗಗಳನ್ನು ಹೇಳುವ ಶಬ್ದಗಳನ್ನು ಬೇರೆ ಪಟ್ಟಿಮಾಡಬಹುದು. ಅದರಂತೆ ಸ್ತ್ರೀಯ ಸ್ವಭಾವ ಹೇಳುವಂತಹ ಗಡಸುಗಾತಿ, ಚಂಚಲೆ ಇತ್ಯಾದಿ ಪದಗಳನ್ನು ಪ್ರತ್ಯೇಕಿಸಿ ನೋಡಬಹುದು. ಇದರಿಂದ ಮುದ್ದಣ ಸ್ತ್ರೀಯನ್ನು ಎಷ್ಟೊಂದು ಆಳವಾಗಿ ಪರಿಭಾವಿಸಬಲ್ಲ ಎಂಬುದು ಗೋಚರವಾಗುತ್ತದೆ.

ಹಾಗೆ ಯೇಟ್ಸ್ ಕವಿ ತನ್ನ ಕಾವ್ಯದಲ್ಲಿ ತಂದಿರುವ ಪ್ರಾಣಿರೂಪಗಳು ಯಾವುವು ಎಷ್ಟು ಸಲ ಯಾವ ಸಂದರ್ಭದಲ್ಲಿ ಬಳಸುತ್ತಾನೆ ಎನ್ನುವುದರ ಪಟ್ಟಿಮಾಡಬಹುದು. ಕುದುರೆ ೭೯ ಸಲ, ಮೊಲ ೨೩ ಸಲ, ಸಿಂಹ ೨೦ ಸಲ, ತೋಳ ೯ ಸಲ, ಚಿರ್ತ ೯ ಸಲ, ಕರಡಿ ೩ ಸಲ, ಚಿರತೆ ೩ ಸಲ, ಕತ್ತೆ ೨ ಸಲ ಬಳಕೆಯಾಗಿದ್ದು ಕಂಡುಬರುತ್ತದೆ. ಮೊತ್ತದ ಮೂಲಕವಾದ ಈ ಬಗೆಯ ಅಭ್ಯಾಸವು ಕವಿಯ ಒಟ್ಟನಲ್ಲಿ ಶಬ್ದ ಸಂಪತ್ತನ್ನು ಒಂದೆಡೆ ದೊರಕಿಸುವುದರಿಂದ ಅವನ ಭಾಷಾ ಸಂಪತ್ತನ್ನು ಭಾಷಾ ಪ್ರಭುತ್ವವನ್ನು ಆತನ ಒಲವಿನ ವಿಶಿಷ್ಟ ಶಬ್ದ ಪ್ರಯೋಗಗಳನ್ನು ಕಂಡುಕೊಳ್ಳಬಹುದಾಗಿದೆ. ಗ್ರಂಥಸಂಪಾದನೆಗೆ ಈ ವಿಧಾನ ತುಂಬ ಸೂಕ್ತವಾದದ್ದಾಗಿದೆ. [ಡಾ॥ ಶ್ರೀನಿವಾಸ ಹಾವನೂರು, ೨೦೦೨, ಕಾವ್ಯಾಭ್ಯಾಸಕ್ಕೆ ಕಂಪ್ಯೂಟರ್ ಸಹಾಯ (ಹಸ್ತಪ್ರತಿ ವ್ಯಾಸಂಗ-೩, ಪುಟ. ೩೪) ಕನ್ನಡ ವಿಶ್ವವಿದ್ಯಾಲಯ, ಹಂಪಿ]

ಗ್ರಂಥಸಂಪಾದಕನಾದವನು ಒಂದು ಪದಪ್ರಯೋಗವನ್ನು ಅದರ ವೈವಿಧ್ಯಮಯ ಅರ್ಥವಿನ್ಯಾಸಗಳನ್ನು ಕಾಣಲು ಹಾಳೆ - ಲೇಖನಿ ಹಿಡಿದು ಪ್ರತಿ ಕೃತಿಯನ್ನು ಓದಿ ಗುರುತು ಹಾಕಿಕೊಂಡು ವರ್ಗೀಕರಿಸಿ ಅಭ್ಯಸಿಸಬೇಕಾಗುತ್ತದೆ. ಇದು ಶ್ರಮ ಮತ್ತು ಸಮಯಗಳೆರಡನ್ನು ಹೆಚ್ಚು ಬೇಡುತ್ತದೆ. ಕಂಪ್ಯೂಟರ್‌ನಿಂದಾಗಿ ಒಂದು ಪದದ ವೈವಿಧ್ಯಮಯ ಪ್ರಯೋಗಗಳು ವಿವಿಧಾರ್ಥ ಸಾಧ್ಯತೆಗಳು ಅದರ ಮೂಲ ರೂಪದ ಸ್ವರೂಪಗಳು ಒತ್ತಟ್ಟಿಗೆ ಸಿಕ್ಕುಬಿಡುತ್ತವೆ. ಕನ್ನಡದಂತಹ ಸಂಕೀರ್ಣವಾದ ಆಂತರಿಕ ಪದರಚನಾ ವಿನ್ಯಾಸ ಹೊಂದಿರುವ ಭಾಷೆಗಳ ಸಂಸ್ಕರಣೆಯಲ್ಲಿ ಪದ ಸಂಸ್ಕರಣದ ಮಹತ್ವ ಇನ್ನೂ ಹೆಚ್ಚಿನದ್ದಾಗಿದೆ.

ಒಂದು ಕಾವ್ಯದ ಸಂಪಾದನೆಯಲ್ಲಿ ಅಥವಾ ಪಠ್ಯವೊಂದರ ಸಂಕಲನದಲ್ಲಿ ಅದರಲ್ಲಿನ ಅಕ್ಷರ, ಮಾತ್ರೆ, ಪದ, ವಾಕ್ಯ, ಸಾಲುಗಳ ಅಂಕಿ ಸಂಖ್ಯಾ ವಿಶ್ಲೇಷಣೆ ಕೂಡ ಬಹಳ ಮಹತ್ವದ ಪಾತ್ರ ವಹಿಸುತ್ತವೆ. ಇದಕ್ಕೆ Statistical Pos Taggarನಂತಹ ಸಾಫ್ಟ್‌ವೇರ್‌ಗಳು ಸಹಕಾರಿಯಾಗಿವೆ. ಕುಮಾರವ್ಯಾಸನ ಪಠ್ಯವೊಂದನ್ನು ಸಂಕಲಿಸಬೇಕಾದರೆ ಭಾಮಿನಿ ಷಟ್ಪದಿಯ ಎಲ್ಲ ಲಕ್ಷಣಗಳನ್ನು ಸಂಕಲನಕಾರ ತಿಳಿದಿರಬೇಕಾಗುತ್ತದೆ. ವಚನಗಳ ಬಗ್ಗೆ ಕೆಲಸ ಮಾಡುವವರು ವಚನಗಳ ಬಗ್ಗೆ, ವಿವಿಧ ವಚನಕಾರರ ಬಗ್ಗೆ, ವಚನಗಳಲ್ಲಿ ಬಳಕೆ



ಯಾಗುವ ಪದಬಳಕೆಯ ಬಗ್ಗೆ ಅರಿತಿರಬೇಕಾಗುತ್ತದೆ. ಇಲ್ಲದೆ ಹೋದರೆ ಸಂಕಲನಕಾರ ಅಂತಹ ಪಠ್ಯವೊಂದನ್ನು ಮರು ರಚನೆ ಮಾಡಲು ಸಾಧ್ಯವಿಲ್ಲ. ಉದಾಹರಣೆಗೆ, ವಚನ ಸಾಹಿತ್ಯ ಸಂಪಾದನೆ ಮಾಡ ಹೊರಟಾಗ ವಚನ ಮಿಶ್ರಣ ಮತ್ತು ಪಾಠಮಿಶ್ರಣದ ಹಾವಳಿ ಕಣ್ಣಿಗೆ ಹೊಡೆಯುತ್ತದೆ. ಶರಣರಲ್ಲದವರ ವಚನಗಳು ಇಲ್ಲಿ ಕಾಣಿಸುತ್ತವೆ. ಖೋಟಾ ಕಟ್ಟುಗಳಾದ ಮುಕ್ತಿಕಂಠಾಭರಣದಂತಹ ವಚನಗಳು ಸಿಗುತ್ತವೆ. ಇವುಗಳನ್ನು ಬೇರ್ಪಡಿಸಿ ನೋಡುವುದು ಕಷ್ಟಸಾಧ್ಯ. ಕಂಪ್ಯೂಟರ್ ಭಾಷಾ ಸಂಸ್ಕರಣ ಘಟಕಗಳು, ಶಬ್ದ ವಿಶ್ಲೇಷಕಗಳು ಇಂದು ಕಷ್ಟಸಾಧ್ಯದ ಕೆಲಸವನ್ನು ಸಾಧ್ಯವಾಗುವಂತೆ ಮಾಡುವ ಸಾಮರ್ಥ್ಯ ಪಡೆದಿವೆ.

ಪಂಪನ ಒಂದು ಪದ್ಯದ ಸಾಲಿನಲ್ಲಿ ಬರುವ ಸುಪುಷ್ಪವೃಷ್ಟಿ ಎನ್ನುವ ಪದ ತುಂಬ ಚರ್ಚೆಗೆ ಒಳಗಾದದ್ದಿದೆ. ಡಿ. ಎಲ್. ನರಸಿಂಹಾಚಾರ್ಯರಿಂದ ಹಿಡಿದು ಟಿ.ವಿ. ವೆಂಕಟಾಚಲಶಾಸ್ತ್ರಿಗಳ ವರೆಗಿನ ಹಿರಿಯ ವಿದ್ವಾಂಸರು ಸುಪುಷ್ಪವೃಷ್ಟಿಯೋ ಅಥವಾ ಸುಪುಷ್ಪದೃಷ್ಟಿಯೋ ಎಂದು ಆಳವಾದ ವಿವೇಚನೆಗೆ ಒಳಪಡಿಸಿದ್ದಿದೆ. ಪಾಠ ನಿರ್ಣಯದ ಈ ವಿಧಾನ ತುಂಬ ಶ್ರಮದಾಯಕವಾದದ್ದು. ಪಾಠ ನಿರ್ಣಯಿಸುವುದೆಂದರೆ ರೂಪ ನಿರ್ಣಯಿಸುವುದು; ರೂಪ ನಿರ್ಣಯಿಸುವುದೆಂದರೆ ಗುಣ ನಿರ್ಣಯಿಸುವುದೆಂದರ್ಥ. ಶಬ್ದದ ರೂಪ ನಿರ್ಣಯವಾದರೆ ಅದರ ಅರ್ಥಗುಣ ತಾನಾಗೇ ಸರಿಯಾಗುತ್ತದೆ. ಶಬ್ದದ ಆಕೃತಿ ನಿರ್ಣಯ ಮಾಡುವುದರಿಂದ ಆಶಯದ ನಿರ್ಣಯವಾಗುತ್ತದೆ.

ಪಠ್ಯವೊಂದರ ಗಣಕೀಕರಣದಿಂದಾಗಿ ಪದ ಮತ್ತು ವಾಕ್ಯಗಳಲ್ಲಿ ಸತತ ಬಳಕೆಯಾಗಲಿರುವ ವಿರಳ ಬಳಕೆಯಲ್ಲಿರುವ ವಿಶಿಷ್ಟವಾದ ಸಂದರ್ಭಕ್ಕೆ ಸೀಮಿತವಾದ ಭಾಷೆಯ ನಿಜ ಪ್ರತಿನಿಧಿಯಾದ ಮತ್ತು ಅಲ್ಲದ ವಿವರಗಳನ್ನು ಕಂಡುಕೊಳ್ಳಬಹುದಾಗಿದೆ. ನಮ್ಮ ಕಂಪ್ಯೂಟರ್‌ನಲ್ಲಿ ಒಳ್ಳೆಯ ಎಲೆಕ್ಟ್ರಾನಿಕ್ ನಿಘಂಟುಗಳ ಮಾರ್ಫಾಲಾಜಿಕಲ್ ವಿಶ್ಲೇಷಕಗಳು ವಾಕ್ಯ ವಿಶ್ಲೇಷಕಗಳು (ಫೆಸರ್ಸ್), ಅರ್ಥ ವಿವೇಚಕಗಳು (ಸಿಮ್ಯಾಂಟಿಕ್ ಇಂಟರ್‌ಪ್ರಿಟರ್) ಧ್ವನಿಲಿಪಿ ವಿಶ್ಲೇಷಕಗಳು (ಫೊನೆಟಿಕ್ ಸ್ಕ್ರಿಪ್ಟ್) ಮತ್ತು ಜನರೇಟರುಗಳು (ಪದ ಉತ್ಪಾದಕಗಳು) ಇದ್ದರೆ ಅವುಗಳ ಸಹಾಯದಿಂದ ಕಾಗುಣಿತ ಪರಿಶೀಲಕ (Spell Checker) ಗಳನ್ನು ರೂಪಿಸಿಕೊಳ್ಳಬಹುದು. ಸಂಕಲನಾನುಸಂಧಾನವನ್ನು ಸರಳ ಮಾಡಿಕೊಳ್ಳಬಹುದು.

ಕಾಗುಣಿತ ಪರಿಶೀಲಕಗಳು ಗ್ರಂಥಸಂಪಾದನೆಯಲ್ಲಿ ಮಹತ್ವದ ಪಾತ್ರ ವಹಿಸುತ್ತವೆ. ಇದರಲ್ಲಿ ಎರಡು ವಿಧ. ಒಂದು ಪತ್ತೆಹಚ್ಚುವ ಭಾಗ, ಎರಡನೆಯದು ತಿದ್ದುವ ಭಾಗ. ಕಂಪ್ಯೂಟರ್‌ಗೆ ಅಳವಡಿಸಿದ ಪಠ್ಯದಲ್ಲಿ ಎಲೆಕ್ಟ್ರಾನಿಕ್ ನಿಘಂಟುವಿನ ಸಹಾಯದಿಂದ ಸೂಕ್ತ ಸಂಜ್ಞೆಗಳೊಂದಿಗೆ ಇಂತಹ ತಪ್ಪುಗಳನ್ನು ಪತ್ತೆ ಮಾಡಬಹುದು. ತಿದ್ದುವ ಭಾಗವು ಪರಿಮಾಣಾತ್ಮಕ ಮತ್ತು ನಿರ್ದಿಷ್ಟ ವಾಕ್ಯಕ್ಕೆ ಕನಿಷ್ಠ ದೂರ (Minimum Edit Distance) ಮುಂತಾದವುಗಳನ್ನು ಬಳಸಲಾಗುತ್ತದೆ. Statistical pos Taggar, Hidden Matuer model ಆಧಾರಿತ ಒಂದು ಸಾಫ್ಟ್‌ವೇರ್ ಕೂಡ ಪಠ್ಯದಲ್ಲಿನ ಪದಬಳಕೆಯ ಸಂದರ್ಭ ಅದರ ವ್ಯಾಕರಣ ಅಂಶಗಳನ್ನು ನೀಡುತ್ತದೆ. ಹೀಗೆ ಪಠ್ಯಗಳನ್ನು Tag ಮಾಡಲು ಸಂಸ್ಕರಿಸಲು ಮಾರ್ಫಾಲಾಜಿ ಆಧರಿಸಿದ ಭಾಷಾವಿಜ್ಞಾನದ ತಂತ್ರಗಳು ತುಂಬ ಉಪಯುಕ್ತ ವಾಗಿವೆ. ಇದೂ ಅಲ್ಲದೆ Speech Corpus & Text Corpusಗಳು ಮಾತಿನಿಂದ ಪಠ್ಯಕ್ಕೆ– ಪಠ್ಯದಿಂದ ಮಾತಿಗೆ ಪರಿವರ್ತಿತವಾಗುವ ವ್ಯವಸ್ಥೆಗಳಲ್ಲಿ ಭಾಷಾ ಉಪಭಾಷೆಗಳ ಗುರುತಿಸುವಿಕೆಯಲ್ಲಿ ತುಂಬಾ ಸಹಾಯಕವಾಗಿವೆ. ವಿಶೇಷವಾಗಿ ಕನ್ನಡ ಸಾಹಿತ್ಯದ ಅಧ್ಯಯನ ಮತ್ತು ಪರಿಷ್ಕರಣದಲ್ಲಿ ಈ ಸಾಫ್ಟ್‌ವೇರ್‌ಗಳು ಅತ್ಯುಪಯುಕ್ತವಾಗಿವೆ ಎಂದು ಹೇಳಬಹುದು.

ಈ ಎಲ್ಲ ಭಾಷಾ ಸಂಸ್ಕರಣೆಗೆ ಪ್ರಮುಖ ಆಧಾರವೇ ಕಾರ್ಪಸ್. ಉತ್ತಮ ಕಾರ್ಪಸ್‌ನ ಸೃಷ್ಟಿ ಕನ್ನಡ ಹಸ್ತಪ್ರತಿಗಳ ಸಂಕಲನ ಮತ್ತು ಅಧ್ಯಯನಕ್ಕೆ ಸಹಾಯಕವಾಗಿದೆ. ಕಂಪ್ಯೂಟರ್ ತಂತ್ರಜ್ಞಾನ ನನ್ನ ದೃಷ್ಟಿಯಲ್ಲಿ ಕೇವಲ ಟೆಕ್ನಿಕಲ್ ಏಡ್ (ತಾಂತ್ರಿಕ ಉಪಕರಣ) ಮಾತ್ರವಲ್ಲ, ಅದನ್ನು ಮೀರಿದ ಒಂದು ಗುಣ ಅದಕ್ಕಿದೆ. ಇಂದು ದೇಶ-ವಿದೇಶಗಳ ಮಧ್ಯೆ ಅದೊಂದು ಸಾಂಸ್ಕೃತಿಕ ರಾಯಭಾರಿಯಂತೆ ಆರ್ಥಿಕ, ರಾಜಕೀಯ, ಸಾಮಾಜಿಕವಾದಂಥ ರೀತಿಯಲ್ಲಿ ಕಾರ್ಯ ನಿರ್ವಹಿಸುತ್ತದೆ. ಕಂಪ್ಯೂಟರ್ ಗಿರುವ ಇಂಥ ಅನನ್ಯ ಸಾಮರ್ಥ್ಯ ಸಾಹಿತ್ಯ ಮತ್ತು ಭಾಷಿಕವಾದ ಸಂಸ್ಕರಣದ ಕೆಲಸವನ್ನು ನಿರ್ವಹಿಸಲು ಪ್ರೇರಣೆಯಾಗಿದೆ.

ಇಂದು ದೇಶದೆಲ್ಲೆಡೆ ಹಸ್ತಪ್ರತಿಗಳ ಸಂಗ್ರಹ ಸಂರಕ್ಷಣೆಯಲ್ಲಿ ನಡೆಯುತ್ತಿರುವ ಪ್ರಯತ್ನಗಳು ತುಂಬಾ ಸಾಂಪ್ರದಾಯಿಕ ರೀತಿಯಲ್ಲಿಯೇ ಇವೆ. ಯಾವ ಮಾಧ್ಯಮದಲ್ಲಿ ಬರಹ ಸಂಗ್ರಹ ಆಗಿರುತ್ತದೋ ಆ ಮಾಧ್ಯಮದ ಸ್ಥಿರತೆ ಮತ್ತು ಬರಹದ ಪ್ರಸಾರದ ನಡುವೆ ಒಂದು ವಿಲೋಮ ಸಂಬಂಧವಿದೆ. ಅಂದರೆ ಹೆಚ್ಚು ಸ್ಥಿರವಾದ ಮಾಧ್ಯಮವಿದ್ದರೆ ಬರಹಕ್ಕೆ ತಾಳಿಕೆ ಹೆಚ್ಚು ಎನ್ನುವ ನಂಬಿಕೆ. ಆದರೆ ಇಂಥದರ ಪ್ರಸಾರ ಕಡಿಮೆ ಇರುತ್ತದೆ. ಪ್ರಸಾರ ಹೆಚ್ಚಿದಷ್ಟು ಮಾಧ್ಯಮದ ತಾಳಿಕೆ ಗುಣ ಕಡಿಮೆಯಾಗುತ್ತದೆ. ಇಂದು ಹಸ್ತಪ್ರತಿ ಸಂಗ್ರಹ, ಸಂರಕ್ಷಣೆ ಮತ್ತು ಪ್ರಸಾರಕ್ಕೆ ಸಂಬಂಧಿಸಿದಂತೆ ಅಮೂಲ್ಯ ಪರಿಕರಗಳು ಕೈಗೆಟಕುತ್ತಿವೆ. ಪ್ಲಾಪಿ, ಸಿಡಿ, ಡಿವಿಡಿ, ಪೆನ್‌ಡ್ರೈವ್ ಮುಂತಾದ ಅಪಾರ ಸಂಗ್ರಹ ಸಾಮರ್ಥ್ಯವುಳ್ಳ ಸಾಮಗ್ರಿಗಳ ಸಾವಿರಾರು ಹಸ್ತಪ್ರತಿಗಳನ್ನು ಒಂದೇ ಬಾರಿಗೆ ಹೊತ್ತೊಯ್ಯಬಲ್ಲಂಥವಾಗಿವೆ. ಪೆನ್ನಿನೋಪಾದಿಯಲ್ಲಿ ಇಡೀ ಹಸ್ತಪ್ರತಿ ಭಂಡಾರವನ್ನೆ ಜೇಬಲ್ಲಿಟ್ಟುಕೊಳ್ಳಬಹುದಾಗಿದೆ. ಹಾಗೆ ಇಂಟರ್‌ನೆಟ್ ಮೂಲಕ ಇಂಥ ಸಂಗ್ರಹಿತ ಹಸ್ತಪ್ರತಿಗಳನ್ನು ಸದಾ ಬಳಕೆಗನುಕೂಲವಾಗುವಂತೆ ವಿಶ್ವವ್ಯಾಪಿಯಾಗಿಸಬಹುದಾಗಿದೆ. ವಿದ್ಯುನ್ಮಾನ ನೆಲೆಗಳು ಇಂದು ಅತ್ಯಧಿಕ ಕಾಲ - ದೇಶಗಳನ್ನು ಕ್ಷಣ ಮಾತ್ರದಲ್ಲಿ ಮೀರಿಸುವ ಪಸರಿಸುವ ಶಕ್ತಿ ಪಡೆದಿವೆ. ಅಷ್ಟ ತಾಳಿಕೆಯ ಗುಣದಲ್ಲಿ ಕಡಿಮೆ ಆಯುಸ್ಸು ಹೊಂದಿವೆ. ಮುಖ್ಯವಾಗಿ ತಂತ್ರಜ್ಞಾನವು ಲಿಖಿತವಾದದ್ದು ಹೆಚ್ಚು ಶಾಶ್ವತವಾದದ್ದು ಮತ್ತು ಪ್ರಮಾಣಬದ್ಧವಾದದ್ದು ಎನ್ನುವ ನಂಬಿಕೆಯನ್ನೇ ಪಲ್ಲಟಗೊಳಿಸಿದೆ. ಬರೆದದ್ದನ್ನು ಹೆಚ್ಚು ಶ್ರಮವಿಲ್ಲದೆ ಓದಲು, ತಿಳಿಯಲು ಸಾಧ್ಯ ವಾಗುತ್ತದೆ. ಮತ್ತು ವೇಗವಾಗಿ ಪ್ರಸಾರಮಾಡಲು ಬರುತ್ತದೆ. ಬಹುಪ್ರತಿಗಳಲ್ಲಿ ಸಿಗುವ ಕಾರಣದಿಂದಾಗಿ ಯಾರು ಬೇಕಾದರೂ ಇಂದು ಹಸ್ತಪ್ರತಿಗಳನ್ನು ಓದಬಹುದಾಗಿದೆ. ಓದಿಗಾಗಿ ಯಾರಿಗೋ ಕಾಯಬೇಕಿಲ್ಲ. ಅಷ್ಟೇ ಪ್ರಮಾಣದಲ್ಲಿ ಅದರ ಶಾಶ್ವತತೆಯ ಕಲ್ಪನೆಗೂ ಭಂಗ ಬಂದಿದೆ. ಈ ಅಪಾಯದ ಅರಿವು ನಮಗಿರಬೇಕು. ಓ.ಸಿ.ಆರ್. ಕನ್ನಡಕ್ಕೆ ಬಂದರಂತೂ ಗ್ರಂಥಸಂಪಾದನೆ ಕ್ಷೇತ್ರದಲ್ಲಿ ಹೊಸದಿಗಂತವೇ ತೆರೆದುಕೊಂಡಂತಾಗುತ್ತದೆ. ತ್ರುಟಿತ, ಸ್ಖಾಲಿತ್ಯ, ಮೂಲ, ಇಂಥ ಪಾರಂಪರಿಕ ಪಾರಿಭಾಷಿಕ ಪದಗಳ ಬದಲಿಗೆ ಸ್ಕ್ಯಾನು, ಇಮೇಜ್, ಪುನಾರಚನೆ, ಸಾಫ್ಟ್‌ವೇರ್ ಎನ್ನುವ ಹೊಸಪದಗಳ ಬಳಕೆ ಈ ಕ್ಷೇತ್ರದಲ್ಲಿ ಚಾಲ್ತಿಗೆ ಬರುತ್ತಿವೆ.

ಒಟ್ಟಿನಲ್ಲಿ ಕಂಪ್ಯೂಟರ್ ಆಗಮನವು ಕೈಬರಹ ಪ್ರಧಾನವಾದ ಹಸ್ತಪ್ರತಿ ಗಳಂತಹ ಬರಹ ಸಾಮಗ್ರಿಗಳನ್ನು ಸರಳವಾಗಿ ಓದುವ ಮತ್ತು ತಿಳಿಯುವ ಅವಕಾಶವನ್ನು ತೆರೆದಿಟ್ಟದ್ದು ಸ್ಪಷ್ಟ. ನೇರವಾಗಿ ಗಣಕ ಪರದೆಯ ಮೇಲೆ ಲೇಖನ ಬರೆಯುವ ಇಂದಿನ ರೀತಿಯು ಕೈಗೆ ಮಸಿ ಅಂಟಿದ ಅಕ್ಷರಗಳು ಚಿತ್ ಕಾಟ್ ಆಗುವ, ಬರೆದ ಬರಹಗಳನ್ನು ಕಲ್ಪಿಸಿ, ಹೊಂದಿಸಿ ಇಟ್ಟು ಮತ್ತೊಬ್ಬರಿಗೆ ತಲುಪಿಸುವ ಸಮಸ್ಯೆ ಮತ್ತು ವಿಳಂಬವನ್ನು ಇಲ್ಲವಾಗಿಸುತ್ತಿವೆ. ಹಸ್ತಪ್ರತಿಯಲ್ಲಿನ ಚಂದದ ಬರವಣಿಗೆಯ ಅಕ್ಷರಗಳಿಗೆ ಈ ಬರವಣಿಗೆಯನ್ನು ಬಳಸಿ ನಾವು ಹೊಸ ಫಾಂಟ್‌ಗಳನ್ನು ರೂಪಿಸಬಹುದು. ಈಗಾಗಲೇ ಕನ್ನಡದಲ್ಲಿ ಬಳಕೆಯಿರುವ ರನ್ನ, ಪಂಪ, ಕುವೆಂಪು, ಕುಮಾರವ್ಯಾಸ ಇತ್ಯಾದಿ ಹೆಸರಿನ ಅಕ್ಷರ ವಿನ್ಯಾಸಗಳು ರೂಪಗೊಂಡಿವೆ; ಆದರೆ ಇವೆಲ್ಲ ತಲೆಬರಹಕ್ಕೆ ಯೋಗ್ಯವಾದಂಥವು, ರನ್ನಿಂಗ್ ಮ್ಯಾಟರಿಗೆ ಅಂಥ ಉಪಯುಕ್ತವಾಗಿ ಮತ್ತು ಪ್ರಮಾಣಬದ್ಧವಾಗಿ ಕಾಣುತ್ತಿಲ್ಲ. ಹೀಗಾಗಿ ಹಸ್ತಪ್ರತಿಗಳ ಡಿಜಿಟಲ್ ರೂಪದಿಂದ ಅಕ್ಷರಗಳನ್ನು ಅವುಗಳ ಕಾಗುಣಿತಗಳನ್ನು ಆಯ್ಕೆಮಾಡಿ ಬೇರೆ ಒಂದು ಬರವಣಿಗೆಯ ಪ್ರಮಾಣಬದ್ಧ ಮಾದರಿಯನ್ನು ರೂಪಿಸಲು ಸಾಧ್ಯವಿದೆ. ಒಟ್ಟಿನಲ್ಲಿ ಆಧುನಿಕ ವಿದ್ಯುನ್ಮಾನ ಮಾಧ್ಯಮಗಳು ಕನ್ನಡ ಭಾಷೆ ಮತ್ತು ಸಾಹಿತ್ಯ ಸಂಸ್ಕೃತಿಗಳಲ್ಲಿ ಹೊಸ ಸಂಚಲನೆಯನ್ನು ತಂದಿರುವುದನ್ನು ಮರೆಯಲಾಗದು.

*ಹೆಚ್ಚಿನ ಓದಿಗಾಗಿ:*


೧. ಸಂ : ಡಾ|| ವೀರೇಶ ಬಡಿಗೇರ ಮತ್ತು ಎಸ್. ಆರ್. ಚನ್ನವೀರಪ್ಪ, ೨೦೦೨ ಹಸ್ತಪ್ರತಿ ವ್ಯಾಸಂಗ - ೨. ಕಂಪ್ಯೂಟರ್ ಮತ್ತು ಕನ್ನಡ ಅಭಿವೃದ್ಧಿ: ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಡಾ|| ಕೆ.ವಿ. ನಾರಾಯಣ, ೨೦೦೫, ನಮ್ಮೊಡನೆ ನಮ್ಮ ನುಡಿ, ಲೋಹಿಯಾ ಪ್ರಕಾಶನ, ಬಳ್ಳಾರಿ.



ಡಾ|| ವೀರೇಶ ಬಡಿಗೇರ
ಪ್ರವಾಚಕ, ಹಸ್ತಪ್ರತಿಶಾಸ್ತ್ರವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ - ೫೮೩೨೭೬



## ಕನ್ನಡ ಸಾಹಿತ್ಯ ಸಂದರ್ಭ ಮತ್ತು ಕುವೆಂಪು

*ಎನ್. ಬೋರಲಿಂಗಯ್ಯ*

**ಪುಟ : ೩೩೪+೨೦ ಬೆಲೆ : ರೂ. ೨೦೦**

**ದಾರಿದೀಪ ಪ್ರಕಾಶನ,** ದಾರಿದೀಪ ಸಂಶೋಧನಾ ಕೇಂದ್ರ, ೧೧೪, ಬೋಗಾದಿ ಬಡಾವಣೆ (ದಕ್ಷಿಣ), ಮೈಸೂರು -೨೫

*ಎನ್. ಬೋರಲಿಂಗಯ್ಯನವರು ಸುಮಾರು ನಾಲ್ಕು ದಶಕಗಳ ಅವಧಿಯಲ್ಲಿ ಬರೆದ ವಿಮರ್ಶಾ ಪ್ರಬಂಧಗಳು ಇಲ್ಲಿ ಸಂಕಲಿತವಾಗಿವೆ. ಈ ವಿಮರ್ಶಾ ಪ್ರಬಂಧಗಳನ್ನು 'ವಿಮರ್ಶೆಯ ವಿಮರ್ಶೆ' ಎಂದು ಡಾ॥ ಪೃಥ್ವಿದತ್ತ ಚಂದ್ರಶೋಭಿ ಗುರುತಿಸಿದ್ದಾರೆ. ಕಾರಣ : ಕನ್ನಡ ಸಾಂಸ್ಕೃತಿಕ ಬದುಕಿನ ಮುಖ್ಯ ಘಟ್ಟಗಳಲ್ಲಿ ಒಂದಾದ ಕುವೆಂಪು ಸಾಹಿತ್ಯ ಸೃಷ್ಟಿ ಮತ್ತು ಅದರ ಮೇಲೆ ನವ್ಯ ವಿಮರ್ಶಕರ ಬರಹಗಳು – ಈ ಬೋರಲಿಂಗಯ್ಯನವರ ವಿಮರ್ಶೆಯನ್ನು ಆಳವಾಗಿ ಪ್ರಭಾವಿಸಿದ ಘಟನೆಗಳಾಗಿವೆ. ಹಾಗಾಗಿ ಇವರ ವಿಮರ್ಶಾ ಪ್ರಬಂಧಗಳ ಹರವು ದೊಡ್ಡದು. ಕುವೆಂಪು ಮಾತ್ರವಲ್ಲದೆ ಬೇಂದ್ರೆ, ಮಾಸ್ತಿ, ಪರಮೇಶ್ವರ ಭಟ್, ಡಾ॥ ಎಂ.ಜಿ.ಕೃಷ್ಣಮೂರ್ತಿಯವರ ಬರಹಗಳ ಸಂಬಂಧಿಸಿದ ವಿಚಾರಗಳೂ ಇಲ್ಲಿ ದಾಖಲಾಗಿವೆ.*

## ಶಿಕ್ಷಣ ಮತ್ತು ಲೈಂಗಿಕ ಜೀವನ

*ಎನ್. ಬೋರಲಿಂಗಯ್ಯ*

**ಪುಟ : ೮೦+೨೨ ಬೆಲೆ : ರೂ. ೪೦**

**ದಾರಿದೀಪ ಪ್ರಕಾಶನ,** ದಾರಿದೀಪ ಸಂಶೋಧನಾ ಕೇಂದ್ರ, ೧೧೪, ಬೋಗಾದಿ ಬಡಾವಣೆ (ದಕ್ಷಿಣ), ಮೈಸೂರು - ೨೬

*ಈ ಪುಸ್ತಕ ನಾಲ್ಕು ಅಧ್ಯಾಯಗಳನ್ನು ಒಳಗೊಂಡಿದೆ. ಸಮಾನತೆ ಮತ್ತು ಮಹಿಳೆ, ಲೈಂಗಿಕ ಶಿಕ್ಷಣ, ವಿವಾಹಪೂರ್ವ ಲೈಂಗಿಕ ಸಂಬಂಧಗಳ ಅವಶ್ಯಕತೆ ಮತ್ತು ಸ್ವರೂಪ, ಮದುವೆ – ಹೀಗೆ ಪ್ರತಿಯೊಂದು ಅಧ್ಯಾಯಗಳಲ್ಲೂ ಎನ್. ಬೋರಲಿಂಗಯ್ಯನವರು ವಿಸ್ತೃತವಾಗಿ ಚರ್ಚಿಸಿರುವುದು ಕಂಡುಬರುತ್ತದೆ. ವಿವಾಹಪೂರ್ವ ಲೈಂಗಿಕ ಸಂಬಂಧಗಳಿಗೆ ಈಚೆಗೆ ಖುಷ್ಬೂ ನೀಡಿದ ಹೇಳಿಕೆಗಳಿಗೆಲ್ಲ ಇಲ್ಲಿ ಸಮರ್ಥನೀಯ ಉತ್ತರಗಳಿವೆಯಾದರೂ ಈ ಪುಸ್ತಕ ತುಂಬ ಹಿಂದೆಯೇ ರಚನೆಯಾಗಿದ್ದು ಇವತ್ತಿಗೂ ಇದು ಉತ್ತರಮುಖೀನ ಜೀವಂತಿಕೆ ಉಳಿಸಿಕೊಳ್ಳುತ್ತಿರುವುದು ನಿಜಕ್ಕೂ ಪ್ರಶಂಸನೀಯವಾದದ್ದು. ಚಿಂತನೆಗೆ ಹಚ್ಚುವ ಕೃತಿ.*



## ವಚನ ಕಟ್ಟಿದ ಅಲ್ಲಮ

*ಎನ್. ಬೋರಲಿಂಗಯ್ಯ*

**ಪುಟ : ೧೮೭+೨೪ ಬೆಲೆ : ರೂ. ೧೦೦**

**ದಾರಿದೀಪ ಪ್ರಕಾಶನ,** ದಾರಿದೀಪ ಸಂಶೋಧನಾ ಕೇಂದ್ರ, ೧೧೪, ಬೋಗಾದಿ ಬಡಾವಣೆ (ದಕ್ಷಿಣ), ಮೈಸೂರು-೨೬

*ಬೋರಲಿಂಗಯ್ಯನವರ ಈ ಕೃತಿ ಅಲ್ಲಮನ ವಚನ ವಿವೇಚನೆಗೆ ಹಚ್ಚಿದೆ. ಈ ಕೃತಿ ರಚನೆಯಾಗಲು ಡಾ॥ ಡಿ. ಆರ್. ನಾಗರಾಜರ 'ಅಲ್ಲಮಪ್ರಭು ಮತ್ತು ಶೈವ ಪ್ರತಿಭೆ' ಎಂಬ ಪುಸ್ತಕ ಕಾರಣ ಎಂದಿರುವ ಬೋರಲಿಂಗಯ್ಯನವರಿಗೆ ಡಿ. ಆರ್. ಅಲ್ಲಮನನ್ನು ಒಳಗಿನಿಂದಲೇ ಭೇದಿಸಿ ನೋಡುವ ಹರವು ಹಾಕಿಕೊಂಡಿಲ್ಲ ಅನಿಸಿತಂತೆ. ಈ ನಿಟ್ಟಿನಲ್ಲಿ ಅವರು ಅಲ್ಲಮನನ್ನು ಓದಲು ಮೊದಲುಮಾಡಿದಾಗ ಅವರ ಮನಸ್ಸಿನಲ್ಲಿ ಮೂಡಿದ ಅರ್ಥಗಳನ್ನು ಮಾತ್ರವೇ ದಾಖಲಿಸಿದ್ದಾರೆ. ಡಿ.ಆರ್. ಅಲ್ಲಮನನ್ನು ಅರಿಯಲು ಹೊರಗಿನಿಂದ ಒಳಗೆ ಧುಮುಕಿದ್ದಾರೆ. ಬೋರಲಿಂಗಯ್ಯನವರು ವಚನಗಳ ಒಳಗಿನಿಂದ ಹೊರಗೆ ಧುಮುಕಿದ್ದಾರೆ. ಪ್ರಭುವನ್ನು ಒಬ್ಬ ಸಮಾಜ ವಿಜ್ಞಾನಿಯಾಗಿ, ಒಬ್ಬ ತತ್ವ ಚಿಂತಕನನ್ನಾಗಿ, ಒಬ್ಬ ದಾರ್ಶನಿಕನನ್ನಾಗಿ, ಜ್ಞಾನದ ಸೀಮಾತೀತದ ಅನ್ವೇಷಕನನ್ನಾಗಿ ನಿರ್ವಚಿಸುವ ಪ್ರಯತ್ನ ಇಲ್ಲಿ ನಡೆದಿದೆ ಎಂದು ಲಿಂಗದೇವರು ಹಳೇಮನೆ ಅಭಿಪ್ರಾಯಪಟ್ಟಿದ್ದಾರೆ.*



## ಮಹಿಳಾ ಸಬಲೀಕರಣ-ಅಂಬೇಡ್ಕರ್ ದೃಷ್ಟಿಕೋನ

*ಡಾ॥ ಬಾಬುರಾವ್ ಮುಡಬಿ*

**ಪುಟ : ೧೯೩+೨೮ ಬೆಲೆ : ರೂ. ೨೩೫**

**ಲಕ್ಷ್ಮೀ ಪ್ರಕಾಶನ,** ನಂ. ೧೨೦, ೫ನೇ ಮುಖ್ಯರಸ್ತೆ, ೫ನೇ ಅಡ್ಡರಸ್ತೆ, ಸಂಜಯ ನಗರ, ಬೆಂಗಳೂರು -೯೪

*ಭಾರತೀಯ ಆಡಳಿತ ಸೇವೆ (ಐ.ಎ.ಎಸ್)ಯ ಅಧಿಕಾರಿಯಾಗಿ ಕಾರ್ಯ ನಿರ್ವಹಿಸಿರುವ ಡಾ॥ ಬಾಬುರಾವ್ ಮುಡಬಿಯವರು ಇತಿಹಾಸ, ಸಮಾಜಶಾಸ್ತ್ರ ಹಾಗೂ ಕಾನೂನು ವಿಷಯಗಳಲ್ಲಿಯೂ ತಜ್ಞರು. ಅಂಬೇಡ್ಕರರನ್ನು ಕೇವಲ ದಲಿತ ನಾಯಕರೆಂದು ಗುರುತಿಸಿಕೊಂಡಿರುವ ಬಹುತೇಕರಿಗೆ ಹೊಸ ಬಗೆಯ ಹೊಳಹುಗಳು ಈ ಕೃತಿಯಲ್ಲಿ ಕಾಣಸಿಗುತ್ತವೆ. ಅಂಬೇಡ್ಕರ್‌ರವರು ಮಹಿಳಾ ವಿಮೋಚನೆ ಹಾಗೂ ಅವರ ಉದ್ಧಾರಕ್ಕಾಗಿ ಮಾಡಿದ ಹಲವು ಹೋರಾಟಗಳನ್ನು ಲೇಖಕರು ಇಲ್ಲಿ ವಿಶ್ಲೇಷಿಸಿ ಯಶಸ್ವಿಯಾಗಿದ್ದಾರೆ. 'ಮೂಲಭೂತವಾಗಿ ಮುಡಬಿಯವರು ಅಂಬೇಡ್ಕರ್‌ವಾದಿಗಳಾಗಿದ್ದರೂ ಪ್ರಬಂಧ ರಚನೆಯ ಸಂದರ್ಭದಲ್ಲಿ ಗಾಂಧೀಜಿಯ ನಿಲುವಿಗಳಿಗೆ ಒಳನೋಟ ನೀಡದೆ ವಿಚಾರಗಳನ್ನು ಆದರ್ಶೀಕರಣದ ನೆಲೆಯಿಂದ ಒಪ್ಪಿಕೊಂಡಿರುವುದರಿಂದ ಮಹಿಳಾ ಸಂಬಂಧಿ ಸಂಗತಿಗಳಿಗೆ ನ್ಯಾಯ ನೀಡಲು ಆಗಿಲ್ಲ.*



## ನಗುಮುಖದ ಹೋರಾಟಗಾರ ಕಾಮ್ರೇಡ್ ಎ. ಶಾಂತಾರಾಂ ಪೈ

*ಸಂ: ವಿ. ಕುಕ್ಯಾನ್*

**ಪುಟ : ೧೩೬ ಬೆಲೆ : ರೂ. ೨೦**

**ಸಮದರ್ಶಿ ಪ್ರಕಾಶನ,** ರಘುನಾಥಯ್ಯ ಮೆಮೋರಿಯಲ್ ಹಾಲ್, ನವಭಾರತ್ ಸರ್ಕಲ್, ಮಂಗಳೂರು - ೧

*ನಗುಮುಖದ ಹೋರಾಟಗಾರ ಎಂದೇ ಹೆಸರಾಗಿದ್ದ ಕಾಮ್ರೇಡ್ ಎ. ಶಾಂತಾರಾಂ ಪೈಯವರು ಮಾರ್ಕ್ಸ್‌ವಾದದಿಂದ ಪ್ರಭಾವಿತರಾದವರು. ಸಾಮಾಜಿಕ ಹಾಗೂ ಆರ್ಥಿಕ ಸಮಾನತೆಗಳ ಆಧಾರದ ಸಮಾಜ ನಿರ್ಮಾಣ ಮೊದಲಾದ ಹೊಸ ಆಯಾಮಗಳನ್ನು ಕಂಡುಕೊಂಡ ಯುವಜನತೆ ಈ ಚಳುವಳಿಯಲ್ಲಿ ತಮ್ಮನ್ನು ಸಮರ್ಪಿಸಿಕೊಳ್ಳಲು ಮುಂದಾದವರಲ್ಲಿ ಇವರೂ ಒಬ್ಬರು. ಶಾಂತಾರಾಂ ಪೈರವರ ವ್ಯಕ್ತಿತ್ವದ ವಿಶಿಷ್ಟತೆ ಏನೆಂಬುದನ್ನು ಈ ಕೃತಿ ಪರಿಚಯಿಸುತ್ತದೆ. ಶಾಂತಾರಾಂರ ಬಗ್ಗೆ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಲೇಖನಗಳು ಹಾಗೂ ಸ್ವತಃ ಶಾಂತಾರಾಂ ಅವರೇ ಬರೆದ ಲೇಖನಿಗಳು ಇಲ್ಲಿ ಸಂಕಲಿತವಾಗಿವೆ. ವಿ. ಕುಕ್ಯಾನ್ ಈ ಕೃತಿಯ ಸಂಪಾದಕರು. ಶೋಕ ಸಂದೇಶಗಳ ಭಾಗದಲ್ಲಿ ಶಾಂತಾರಾಂರ ಬಗ್ಗೆ ಒಡಮೂಡಿರುವ ಅಭಿಪ್ರಾಯಗಳನ್ನು ಗಮನಿಸಿದರೆ ಅವರ ಹೋರಾಟದ ಬಗ್ಗೆ ಎಂಥವರಿಗೂ ಒಲವು ಬೆಳೆಯುವುದು ಖಂಡಿತ. ಕಾರ್ಮಿಕ ಕಾಯಿದೆ, ಕಾನೂನುಗಳನ್ನು ಸುಲಭ ಭಾಷೆಯಲ್ಲಿ ವಿವರಿಸುತ್ತಿದ್ದ ಶಾಂತಾರಾಂ ಪೈ ಅವರದು ವಿಶಿಷ್ಟ ವ್ಯಕ್ತಿತ್ವ.*



## ಸಾಹಿತ್ಯ ಸಂಪ್ರೀತಿ

*ಕವಿತಾ ಮಲ್ಲಪ್ಪ*

**ಪುಟ : ೫೬+೧೨ ಬೆಲೆ : ರೂ. ೫೦**

**ಅಮರ ಪ್ರಕಾಶನ,** ಎಲ್.ಐ.ಜಿ. ೧೭೫, ೩ನೇ ಹಂತ, ಬಡೇಪೂರ ಕಾಲೋನಿ, ಗುಲಬರ್ಗಾ - ೫೮೫ ೧೦೫

*ರಾಯಚೂರು ಜಿಲ್ಲೆಯಲ್ಲಿ ಗ್ರಾಮ ಪಂಚಾಯತಿ ಕಾರ್ಯದರ್ಶಿಯಾಗಿ ಸೇವೆ ಸಲ್ಲಿಸುತ್ತಿರುವ ಕವಿತಾ ಮಲ್ಲಪ್ಪನವರದು ಬಹುಮುಖ ಆಸಕ್ತಿ. ಪ್ರಾರಂಭದಲ್ಲಿ ಕ್ರೀಡಾ ಕ್ಷೇತ್ರದಲ್ಲಿ ಆಸಕ್ತರಾಗಿ ನಂತರ ಸಾಹಿತ್ಯ ರಚನೆಯ ಕಾರ್ಯದಲ್ಲಿ ತೊಡಗಿಕೊಂಡವರು. ವಚನ ಪರಂಪರೆ ಮತ್ತು ರಂಗಭೂಮಿಗೆ ಸಂಬಂಧಿಸಿದ ಲೇಖನಗಳು ಈ ಕೃತಿಯಲ್ಲಿವೆ. ದಲಿತ ವಚನಕಾರ್ತಿ ಉರಿಲಿಂಗ ಪೆದ್ದಿಯ ಬಗೆಗಿನ ಲೇಖನ ಗಮನ ಸೆಳೆಯುತ್ತದೆ. ಹಾಗೆಯೇ ಬುದ್ಧನ ಬಗೆಗೆ ಕವಿತಾ ಮಲ್ಲಪ್ಪ ದಾಖಲಿಸಿರುವ ವಿಚಾರಗಳು ಬಹಳ ಕಾಲ ಮನಸ್ಸಿನಲ್ಲಿ ಉಳಿಯುವ ಶಕ್ತಿ ಪಡೆದಿವೆ. ವಚನ ಸಾಹಿತ್ಯ, ರಂಗಭೂಮಿ, ಜಾನಪದ ಹೀಗೆ ವೈವಿಧ್ಯಮಯ ಲೇಖನಗಳಿವೆ. ದಲಿತ ಪ್ರಜ್ಞೆ ಹಾಗೂ ಸ್ತ್ರೀಪರ ಕಾಳಜಿ ಇವರ ಲೇಖನದಲ್ಲಿ ಕಾಣುತ್ತೇವೆ. ಸಾಹಿತ್ಯ ಕ್ಷೇತ್ರದಲ್ಲಿ ಸಹೋದರಿ ಕವಿತಾ ಮಲ್ಲಪ್ಪ ಮುಂದುವರಿಯುವ ದಲಿತ ಸಾಹಿತ್ಯಕ್ಕೆ ಮುಂದುವರಿಕೆಯಾಗಿ ಹೊರಬರಲಿ ಎಂದು 'ಮುನ್ನುಡಿಯಲ್ಲಿ ಡಾ॥ ಎಚ್.ಟಿ. ಪೋತೆ ಹಾರೈಸಿದ್ದಾರೆ.*

**ಎನ್. ಸಿ. ಮಹೇಶ್,** *ಸೇಂಟ್ ಆ್ಯನ್ಸ್ ವುಮೆನ್ಸ್ ಪ್ರಥಮ ದರ್ಜೆ ಕಾಲೇಜು, ನಂ. ೨, ಕೇಂಬ್ರಿಡ್ಜ್ ರಸ್ತೆ, ಹಲಸೂರು, ಬೆಂಗಳೂರು - ೫೬೦ ೦೦೮*

# ಖಾಸಗಿ ವೃತ್ತಿ ಶಿಕ್ಷಣ ಕ್ಷೇತ್ರಕ್ಕೆ ಅಗತ್ಯವಾದ ಶಾಸನ

ಎಲ್ಲ ಬೇಡಿಕೆಗಳನ್ನು ಒಳಗೊಂಡಂಥ ಒಂದು ಸಮಗ್ರ ಕಾನೂನನ್ನು ಕೇಂದ್ರ ಸರಕಾರ ರಚಿಸಿದಲ್ಲಿ ಮಾತ್ರ ಈಗ ಸೃಷ್ಟಿಯಾಗಿರುವ ಗೊಂದಲವನ್ನು ಸಾಕಷ್ಟು ಪ್ರಮಾಣದಲ್ಲಿ ಕಡಿಮೆ ಮಾಡಿಕೊಳ್ಳಬಹುದಾಗಿದೆ. ಇಲ್ಲದಿದ್ದಲ್ಲಿ ಕಟುಟೀಕೆ, ಪ್ರತಿಭಟನೆ ಮತ್ತು ವಿದ್ಯಾರ್ಥಿ-ಪೋಷಕರುಗಳ ಶಾಶ್ವತ ಶಾಪಕ್ಕೆ ಸರಕಾರ ಗುರಿಯಾಗ ಬೇಕಾಗುತ್ತದೆ. ಅಲ್ಲದೆ ಬಹುಮುಖ್ಯವಾಗಿ ಈಗ ಹೊರಹೊಮ್ಮುತ್ತಿರುವ 'ಜ್ಞಾನ-ಸಮಾಜ'ಕ್ಕೆ ಸೂಕ್ತ ಪ್ರಬಲವಾದ ಮಾನವ ಸಂಪನ್ಮೂಲವನ್ನು ಸೃಷ್ಟಿಸಲು ಸಾಧ್ಯ ಇಲ್ಲದಿದ್ದಲ್ಲಿ ಪುನಃ ನಾವು ಹಣವಿದ್ದವನಿಗೆ ಮಾತ್ರ 'ಓದು' ಎಂಬ ಕರಾಳ ಯುಗಕ್ಕೆ ವಾಪಸ್ಸು ಬಂದು ಮುಟ್ಟುತ್ತೇವೆ ಎಂದು ಹೇಳಿದರೆ ಅತಿಶಯೋಕ್ತಿ ಆಗದು.

**ಕೆ. ಪಿ. ವಾಸುದೇವನ್**

**ಪಿ.** ಎ. ಇನಾಂದಾರ್ ಮತ್ತು ಇತರರು ಮಹಾರಾಷ್ಟ್ರದ ವಿರುದ್ಧ ಹೂಡಿದ್ದ ಮೊಕದ್ದಮೆಯಲ್ಲಿ ೭ ಜನರ ಸಂವಿಧಾನ ನ್ಯಾಯಮೂರ್ತಿಗಳ ತಂಡ, ಅಂದಿನ ಮುಖ್ಯ ನ್ಯಾಯಾಧೀಶರಾದ ಆರ್. ಸಿ. ಲಾಹೊಟಿ ಅವರ ನೇತೃತ್ವದಲ್ಲಿ, ಅನುದಾನಕ್ಕೆ ಒಳಪಡದ ವೃತ್ತಿಶಿಕ್ಷಣ ಕಾಲೇಜುಗಳು (ಅಲ್ಪಸಂಖ್ಯಾತ ಅಥವಾ ಇತರೆ) ವಿದ್ಯಾರ್ಥಿಗಳ ಪ್ರವೇಶದಲ್ಲಿ ನಿರವಲಂಬಿತ ಹಕ್ಕು ಹೊಂದಿದೆ ಎಂದು ತೀರ್ಪು ನೀಡಿದೆ. ಸರಕಾರದ ಮಧ್ಯಪ್ರವೇಶವಿಲ್ಲದೆ ಈ ಕಾಲೇಜುಗಳು ಎಂಜಿನಿಯರಿಂಗ್, ವೈದ್ಯಕೀಯ ಮತ್ತು ಇತರ ವೃತ್ತಿ ಶಿಕ್ಷಣ ಕಾಲೇಜುಗಳಲ್ಲಿ ತಮ್ಮ ಆಯ್ಕೆಯ ವಿದ್ಯಾರ್ಥಿಗಳಿಗೆ ಪ್ರವೇಶ ನೀಡಬಹುದಾಗಿದೆ. ಅಲ್ಲದೆ ಸರಕಾರದ ಕಾಲೇಜುಗಳಲ್ಲಿ ಕೋಟಾ ಮತ್ತು ಮೀಸಲಾತಿಗಳನ್ನು ಮೇಲ್ಕಂಡ ತೀರ್ಪು ವಜಾ ಮಾಡಿದೆ.

ಈ ತೀರ್ಪಿನಲ್ಲಿ ಒಂದು ಒಳ್ಳೆಯ ಅಂಶ ಕಂಡುಬಂದಿದೆ. ಟಿ.ಎಂ.ಎ. ಪೈ ಸಂಬಂಧಪಟ್ಟ ತೀರ್ಪನ್ನು ಎಲ್ಲಿಯವರೆಗೆ ವಿಸ್ತರಿಸಿ ಸಂವಿಧಾನದ ಕೆಲವು ಮೂಲಭೂತ ಅಂಶಗಳನ್ನು ಅಡ್ಡಿಪಡಿಸಬಹುದೆಂದು ಈ ತೀರ್ಪು ಸ್ಥಾಪಿಸಿದೆ. ಈ ತೀರ್ಪಿನಲ್ಲಿ ಸಂವಿಧಾನದಲ್ಲಿರುವ ಸಮಾನತೆ ಕುರಿತ ಅಂಶಗಳನ್ನು ಮತ್ತು ಶಿಕ್ಷಣಕ್ಷೇತ್ರದಲ್ಲಿ ಅದರ ಅಗತ್ಯದ ಬಗ್ಗೆ ಒತ್ತಿ ಹೇಳುತ್ತಲೇ, ಹೊಸದಾಗಿ ಆವಿಷ್ಕಾರವಾಗುತ್ತಿರುವ ನಮ್ಮ 'ಜ್ಞಾನ-ಸಮಾಜ'ದಲ್ಲಿ ಶಿಕ್ಷಣ ಮತ್ತು ಸಮಾನತೆಯ ಪ್ರಾಮುಖ್ಯತೆಯನ್ನು ಪ್ರಸ್ತಾಪಿಸಲಾಗಿದೆ. ಜಾಗತಿಕ ಸ್ಪರ್ಧೆಯ ಸಂದರ್ಭದಲ್ಲಿ ಶಿಕ್ಷಣ ಅವಕಾಶಗಳನ್ನು ಪ್ರಜಾತಾಂತ್ರಿಕಗೊಳಿಸುವ ಅಗತ್ಯವಿಲ್ಲವೆಂದೂ ಹೇಳಲಾಗಿದೆ.

ಆದರೆ, ಈ ತೀರ್ಪಿನ ಆರಂಭದಲ್ಲಿರುವ ಧ್ವನಿಗೆ ಪೂರಕವಾಗಿರುವ ಸಮಾನತೆ ಕುರಿತಾದ ಕಾಳಜಿಯು, ದುರದೃಷ್ಟವಶಾತ್, ಅದರಿಂದಾಗಿ ಉದ್ಭವಿಸಬಹುದಾದ ವಾಸ್ತವ ಪರಿಸ್ಥಿತಿಯಲ್ಲಿ ಕಂಡುಬರುವುದಿಲ್ಲ. ಬಹುಶಃ, ಈ ಅಂಶವನ್ನು ದೃಷ್ಟಿಯಲ್ಲಿಟ್ಟುಕೊಂಡೇ ತೀರ್ಪಿನ ಸಲಹೆಗಳು ಮುಂದಿನ ಶೈಕ್ಷಣಿಕ ವರ್ಷದಿಂದ ಜಾರಿಗೆ ಬರಬೇಕೆಂಬ ಸಲಹೆಯನ್ನು ನೀಡಲಾಗಿದೆ. ಅಲ್ಲದೆ ಈ ತೀರ್ಪು ಜಾರಿಗೆ ಬರುವ ಮುಂಚೆ ಕೇಂದ್ರ ಮತ್ತು ರಾಜ್ಯ ಸರಕಾರಗಳು ಆದಷ್ಟು ಬೇಗ ಸೂಕ್ತ ಕಾನೂನು ರಚಿಸಬೇಕೆಂದೂ ಆಗ್ರಹಿಸಲಾಗಿದೆ. ಈ ರೀತಿ ಅರ್ಥೈಸಲು ಕಾರಣವೇನೆಂದರೆ, ಟಿ. ಎಂ. ಎ. ಪೈ ಸಂಬಂಧ ತೀರ್ಪಿನ ಬಗ್ಗೆ ಪ್ರಸ್ತುತ ತೀರ್ಪಿನಲ್ಲಿ ಹೇಳಲಾಗಿರುವುದನ್ನು ಗಮನಿಸಿ: "....We would like to reiterate, that certain recitals, certain observations and certain findings in Pai Foundation are contradictory inter se..." ಇಲ್ಲಿ ೭ ಜನ ನ್ಯಾಯಾಧೀಶರು ೧೧ ನ್ಯಾಯಾಧೀಶರ ತೀರ್ಪನ್ನು ವಜಾಮಾಡಲು ಸಾಧ್ಯವಿಲ್ಲದ ಅಸಹಾಯಕತೆ ಕೂಡ ಇದೆ. ೫ ಜನ ನ್ಯಾಯಾಧೀಶರು ಇಸ್ಲಾಂ ಅಕೆಡಮಿ ಸಂಬಂಧ ನೀಡಿದ ತೀರ್ಪಿನ ಬಗ್ಗೆ ಮಾತ್ರ, ಈ ತೀರ್ಪು ನ್ಯಾಯ ನೀಡಲು ಸಾಧ್ಯ. ೭ ಜನರ ಈ ತೀರ್ಪು, ೫ ಜನರ ಆ ತೀರ್ಪನ್ನು ಸಂಪೂರ್ಣ ತಿರಸ್ಕರಿಸಿದೆ. ೫ ಜನರ ತೀರ್ಪು ಸರಕಾರಿ 'ಕೋಟಾ'ವನ್ನು ಸಾಧ್ಯ ಮಾಡಿತ್ತು, ಪ್ರವೇಶಶುಲ್ಕ ಮತ್ತು ಪ್ರವೇಶವನ್ನು ನಿಯಂತ್ರಿಸುವ ಸಮಿತಿಗಳ ರೆಕ್ಕೆಗಳನ್ನು ಈ ತೀರ್ಪು ಕಡಿದುಹಾಕಿದೆ.

ಈ ಸಮಿತಿಗಳು ಖಾಸಗಿ ವೃತ್ತಿಶಿಕ್ಷಣ ಕಾಲೇಜುಗಳಿಗಾಗಿ ಪ್ರವೇಶ ಪರೀಕ್ಷೆಗಳನ್ನು ನಡೆಸಲು ಸಾಧ್ಯವಿಲ್ಲ. ಶುಲ್ಕವನ್ನು ನಿಗದಿಪಡಿಸಲು ಸಾಧ್ಯವಿಲ್ಲ. ಬದಲಾಗಿ ಈ ಕಾರ್ಯಗಳನ್ನು ಉಸ್ತುವಾರಿ ಮಾಡಬಹುದಾಗಿದೆ, ಅಷ್ಟೆ. ಇಸ್ಲಾಮಿಕ್ ಅಕೆಡಮಿ ಅಥವಾ ಟಿ. ಎಂ. ಎ. ಪೈ ತೀರ್ಪಿನಲ್ಲಿ ಇಲ್ಲದಿರುವ 'ಎನ್. ಆರ್. ಐ. ಕೋಟಾ'ದ ಬಗ್ಗೆ ಪ್ರಸ್ತುತ ತೀರ್ಪು ಹೇಳಿದೆ. ಟಿ.ಎಂ.ಎ.ಪೈ ತೀರ್ಪು, ಶುಲ್ಕ ವಸೂಲಾತಿಯಲ್ಲಿ ವಿವಿಧ ರೂಪಗಳನ್ನು ಸಂಪೂರ್ಣವಾಗಿ ತಿರಸ್ಕರಿಸಿದ್ದರೆ, ಪ್ರಸ್ತುತ ತೀರ್ಪು ಎನ್. ಆರ್. ಐ. ಪ್ರವೇಶಕ್ಕೆ ಮಾತ್ರ ಈ ಅವಕಾಶವನ್ನು ನೀಡುತ್ತದೆ.

೧೧ ಮಂದಿ ನ್ಯಾಯಾಧೀಶರ ತೀರ್ಪನ್ನು, ೭ ಮಂದಿ ತೀರ್ಪು ಹೊಡೆದುಹಾಕಲು ಸಾಧ್ಯವಿಲ್ಲವಾದುದರಿಂದ ಮತ್ತು ೧೧ ಮಂದಿ ತೀರ್ಪನ್ನು ಹಲವಾರು ರೀತಿಯಲ್ಲಿ ವಿಶ್ಲೇಷಿಸಲು ಸಾಧ್ಯವಿರುವುದರಿಂದ, ಅನೇಕ ಮೊಕದ್ದಮೆಗಳನ್ನು ಹೂಡಬಹುದಾಗಿದೆ. ಅದರಲ್ಲೂ ಪ್ರಸ್ತುತ, ಖಾಸಗಿ ಆಡಳಿತ ಮಂಡಳಿಗಳ ಬದಲು ಅಸಹಾಯಕ ವಿದ್ಯಾರ್ಥಿಗಳು ಮತ್ತು ಅವರ ಪೋಷಕರು ಅವರಿಂದ ಮೊಕದ್ದಮೆ ನಡೆಸುವ ಖರ್ಚನ್ನು ಭರಿಸಲು ಸಾಧ್ಯವಾದಲ್ಲಿ, ಸರ್ವೋಚ್ಚ ನ್ಯಾಯಾಲಯದಲ್ಲಿ ಮೊಕದ್ದಮೆ ಹೂಡಲು ಸಾಧ್ಯವಿದೆ. ಹಾಗೆ ನೋಡಿದಲ್ಲಿ, ಪೋಷಕರು, ವಿದ್ಯಾರ್ಥಿಗಳು ಮತ್ತು ಶಿಕ್ಷಕರ ವಿಚಾರಗಳನ್ನು ಸರ್ವೋಚ್ಚ ನ್ಯಾಯಾಲಯದ ಈ ೩ ತೀರ್ಪಿನ ಸಂದರ್ಭದಲ್ಲಿ ಪ್ರತಿನಿಧಿಸಲೇ ಇಲ್ಲ. ನಮ್ಮ ನ್ಯಾಯ ವ್ಯವಸ್ಥೆಯ ಮಿತಿ ಇರುವುದು ಇಲ್ಲಿಯೇ. ತಮ್ಮ ಮುಂದೆ ಇರುವ ಎರಡು ವಾದ-ಪ್ರತಿವಾದಗಳಲ್ಲಿ ಒಂದರ ಪರ ನ್ಯಾಯಾಲಯಗಳು ತೀರ್ಪು ನೀಡಬೇಕಿದೆ. ಪರಿಣತರ ಅಭಿಪ್ರಾಯಗಳನ್ನು ಕೇಳಬಹುದಾಗಿದ್ದರೂ, ವಾಸ್ತವದಲ್ಲಿ ಮೂರನೇ ವಾದಕ್ಕೆ ಅವಕಾಶ ಇಲ್ಲಿಲ್ಲ.



೧೯೯೨ರಲ್ಲಿ ಮೋಹಿನಿ ಜೈನ್ ತೀರ್ಪಿನಲ್ಲಿ ಎಲ್ಲ ಹಂತದಲ್ಲೂ ಶಿಕ್ಷಣದ ಹಕ್ಕು ಎಲ್ಲ ನಾಗರಿಕರ ಮೂಲಭೂತ ಹಕ್ಕೆಂದು ಹೇಳಲಾಯಿತು. ಶಿಕ್ಷಣದ ಹಕ್ಕು ಬದುಕಿನ ಹಕ್ಕಿನಿಂದ ನೇರ ಹರಿದುಬರುತ್ತದೆಂದು ಈ ತೀರ್ಪು ಎತ್ತಿಹಿಡಿಯಿತು. ಆರ್ಟಿಕಲ್ ೨೧ರಲ್ಲಿ ಬದುಕಿನ ಹಕ್ಕನ್ನು ಮತ್ತು ವ್ಯಕ್ತಿಯ ಗೌರವಾನ್ವಿತ ಇರುವಿಕೆಯನ್ನು ಸ್ಥಾಪಿಸುವುದರಿಂದ – ಶಿಕ್ಷಣದ ಹಕ್ಕಿನ ಜೊತೆ ತಾಳೆ ಹಾಕದಿದ್ದಲ್ಲಿ ಇದು ಸಾಧ್ಯವಿಲ್ಲ ಎಂದು ಈ ತೀರ್ಪು ಹೇಳುತ್ತಲೇ, ಸರಕಾರ, ಎಲ್ಲ ನಾಗರಿಕರಿಗೂ ಶಿಕ್ಷಣವನ್ನು ನೀಡುವ ಸೌಲಭ್ಯಗಳನ್ನು ಕಲ್ಪಿಸಬೇಕೆಂದು ಕರೆ ನೀಡಿತು. ಖಾಸಗಿ ಕಾಲೇಜಿನ ಪ್ರವೇಶಗಳು ಸಂವಿಧಾನದ ಅಡಿ ನಡೆಯಬೇಕು ಎಂದೂ ಈ ತೀರ್ಪು ವಿವರಿಸಿದೆ.

೧೯೯೩ರಲ್ಲಿ ಉನ್ನಿಕೃಷ್ಣನ್ ತೀರ್ಪಿನಲ್ಲಿ ಶಿಕ್ಷಣದ ಈ ಮೂಲಭೂತ ಹಕ್ಕನ್ನು ೧-೧೪ ವಯಸ್ಸಿಗೆ ಮಾತ್ರ ಎಂದು ಮಿತಿಗೊಳಿಸಲಾಯಿತು. ಆದರೆ ಖಾಸಗೀಕರಣವನ್ನು ಈ ತೀರ್ಪು ಕಟುವಾಗಿ ಟೀಕಿಸಿತು. ಶಿಕ್ಷಣ ನೀಡುವುದು ಒಂದು ವೃತ್ತಿಯೂ ಅಲ್ಲ; ವ್ಯಾಪಾರವೂ ಅಲ್ಲ; ಅದೊಂದು ಧಾರ್ಮಿಕ ಕ್ರಿಯೆ; ಅದನ್ನು ದಾನವೆಂದು ಪರಿಗಣಿಸಬೇಕು; ಅದನ್ನು ವ್ಯಾಪಾರೀಕರಣಗೊಳಿಸುವುದು ನಮ್ಮ ರಾಷ್ಟ್ರೀಯ ಪರಂಪರೆ ಮತ್ತು ಭಾವನೆಗಳಿಗೆ ವಿರುದ್ಧವಾದದ್ದು ಎಂದೂ ಈ ತೀರ್ಪು ಹೇಳಿತು. ಆದರೆ ೨೦೦೨ರಲ್ಲಿ ಟಿ. ಎಂ. ಎ. ಪೈ ತೀರ್ಪು ಉನ್ನಿಕೃಷ್ಣನ್ ತೀರ್ಪನ್ನು ತಿರಸ್ಕರಿಸಿ, ಖಾಸಗೀಕರಣ ಮತ್ತು ಉದಾರೀಕರಣದ ಆದರ್ಶಗಳನ್ನು ಮೈಗೂಡಿಸಿದಂಥ ತೀರ್ಪನ್ನು ನೀಡಿತು.

ಈ ತೀರ್ಪಿನ ೬೮ನೇ ಪ್ಯಾರಾದಲ್ಲಿ ೨ ಭಾಗಗಳಿವೆ. ಮೊದಲ ಭಾಗದಲ್ಲಿ, ಅನುದಾನ ರಹಿತ ಸಂಸ್ಥೆಗಳಿಗೆ ಪ್ರವೇಶದ ಸಂದರ್ಭದಲ್ಲಿ ಸ್ವಾಯತ್ತತೆ ನೀಡಬೇಕು ಮತ್ತು ಅದೇ ಸಮಯದಲ್ಲಿ ಪ್ರತಿಭೆಯನ್ನು ಪುರಸ್ಕರಿಸುವ ನಿಯಮವನ್ನು ಗಾಳಿಗೆ ತೂರಬಾರದು ಎಂದು ಹೇಳಲಾಗಿದೆ. ಎರಡನೇ ಭಾಗದಲ್ಲಿ, 'ಸಿಇಟಿ' ರೀತಿಯ ಪರೀಕ್ಷೆಗೆ ಸ್ವಲ್ಪ ಭಾಗ ಮತ್ತು ಕೌನ್ಸಿಲಿಂಗ್ ಮೂಲಕ ಇತರೆ ಸೀಟುಗಳನ್ನು ಭರ್ತಿಮಾಡುವ ವಿಧಾನವನ್ನು ಹೇಳುತ್ತಾ ಸರಕಾರದ ಜವಾಬುದಾರಿಯನ್ನು ವಿವರಿಸುತ್ತದೆ. ಬಡ ಮತ್ತು ಹಿಂದುಳಿದ ವರ್ಗದ ವಿದ್ಯಾರ್ಥಿಗಳಿಗೆ ಸೂಕ್ತ ಕ್ರಮದಲ್ಲಿ ಪ್ರವೇಶ ನೀಡಬಹುದಾಗಿದೆಯೆಂದೂ ಸೂಚಿಸುತ್ತದೆ. ಇದನ್ನು ವೃತ್ತಿಶಿಕ್ಷಣ ಮಾತ್ರವಲ್ಲ ಇತರ ಕಾಲೇಜುಗಳಿಗೂ ವಿಸ್ತರಿಸಬೇಕೆಂಬ ಆದೇಶವೂ ಇಲ್ಲಿ ಕಂಡುಬರುತ್ತದೆ.

ಆದರೆ, ಮೊದಲ ಭಾಗವನ್ನು ತೀರ್ಪಿನ ಭಾಗ ಎಂದೂ, ೨ನೇ ಭಾಗವನ್ನು ನಿದರ್ಶನ ಎಂದೂ ತಿಳಿಸಲಾಗಿದೆ. ಎರಡನೇ ಭಾಗ ಕೇವಲ ಒಂದು ಉದಾಹರಣೆ ಮತ್ತು ಸರಕಾರ ಯಾವ ರೀತಿಯಲ್ಲಿ ಮಾಡಬಹುದು ಎಂಬ ವಿವರಣೆ ಮಾತ್ರ; ಆದ್ದರಿಂದ ೨ನೇ ಭಾಗವನ್ನು ಕಾನೂನು ಎಂದು ಪರಿಗಣಿಸಲು ಸಾಧ್ಯವಿಲ್ಲ ಎಂದೂ ಇನಾಂದಾರ್ ತೀರ್ಪು ಹೇಳುತ್ತದೆ. ಅಲ್ಲದೆ ಕೇವಲ ಒಪ್ಪಿಗೆ ಅಥವಾ ಒಪ್ಪಂದ ಅಥವಾ ಮನ ಒಲಿಕೆಯ ಮೂಲಕ ಮಾತ್ರ ಸರಕಾರ ಇದನ್ನು ಮಾಡಿಸಲು ಸಾಧ್ಯ ಎಂದು ಹೇಳಲಾಗಿದೆ.

ಆದರೆ ಈ ಮೇಲ್ಕಂಡ ಅಭಿಪ್ರಾಯಕ್ಕೆ ಆಧಾರ ಸ್ಪಷ್ಟವಾಗುತ್ತಿಲ್ಲ. ೬೮ರ ಪ್ಯಾರಾದ ೨ನೇ ಭಾಗ ನಿದರ್ಶನವೇ ಆಗಿದ್ದರೂ, ಈ ನಿದರ್ಶನದ ರೀತಿ ನಡೆದುಕೊಳ್ಳಲು ಅಥವಾ ಅದಕ್ಕೆ ಸಮಾನಾಂತರವಾಗಿ ನಡೆದುಕೊಳ್ಳಲು ಸೂಕ್ತ ಅಧಿಕಾರ ಇರುತ್ತದೆ ಎಂದು ಪೈ ತೀರ್ಪು ಹೇಳಿದಂತೆ ಆಗುತ್ತದೆ. ಸರಕಾರಕ್ಕೆ ಇಚ್ಛಾಶಕ್ತಿ ಇದ್ದಲ್ಲಿ ೭ ಮಂದಿ ನ್ಯಾಯಮಂಡಳಿಯ ಈ ಭಾಗದ ತೀರ್ಪನ್ನು ಪ್ರಶ್ನಿಸಲೇಬೇಕಾಗುತ್ತದೆ. ಇಲ್ಲಿ ಯಾವುದೇ ರೀತಿಯ ತರ್ಕಬದ್ಧ ಪ್ರತಿಪಾದನೆ ನನಗಂತೂ ಕಾಣಿಸುತ್ತಿಲ್ಲ.

**ವಾಸ್ತವಾಂಶಗಳು :** ಮೇಲೆ ಕಾಣಿಸಿದ ಕಾನೂನಿನ ಸೂಕ್ಷ್ಮಗಳು ಏನೇ ಇರಲಿ, ಈ ನೂತನ ತೀರ್ಪಿನಿಂದ ಸೃಷ್ಟಿಯಾಗುವ ಉತ್ಪಾತಗಳ ಬಗ್ಗೆ ವಿಚಾರಮಾಡಿ ನೋಡೋಣ. ವೃತ್ತಿಶಿಕ್ಷಣದ ಕ್ಷೇತ್ರದಲ್ಲಿ ಯಾವುದೇ ನಿಯಂತ್ರಣದಿಂದ ಮುಕ್ತವಾದ ವ್ಯಾಪಾರೀಕರಣ ಈಗ ನಡೆಯಬಹುದಾಗಿದೆ. ಅನುದಾನವನ್ನು ಪಡೆಯುತ್ತಿರುವ ಕಾಲೇಜುಗಳು ಅಥವಾ ಅನುದಾನವನ್ನು ಕೆಲವು ವಿಷಯಗಳಿಗೆ ಮಾತ್ರ ಪಡೆಯುತ್ತಿರುವ ಕಾಲೇಜುಗಳು ಕ್ರಮೇಣ ಅನುದಾನವನ್ನು ತಿರಸ್ಕರಿಸಿ ವ್ಯಾಪಾರೀಕರಣದತ್ತ ಹೆಜ್ಜೆಹಾಕಬಹುದಾಗಿದೆ. ಲಾಭ ಬಡುಕತನ ಮತ್ತು ಕ್ಯಾಪಿಟೇಶನ್ ಶುಲ್ಕದ ಬಗ್ಗೆ ನಮ್ಮ ಸರ್ವೋಚ್ಚ ನ್ಯಾಯಾಲಯವು ತಡೆ ವಿಧಿಸಿದ್ದರೂ, ಇಡೀ ಕ್ಷೇತ್ರದಲ್ಲಿ ಹೊಸ ಉತ್ಸಾಹದ ಲಾಭಕೋರತನ ತಲೆಹಾಕುತ್ತದೆ.

ಇನಾಂದಾರ್ ತೀರ್ಪಿನಲ್ಲಿ, ಶಿಕ್ಷಣ ದಾನ (charity) ಎಂಬ ಪರಿಕಲ್ಪನೆಯನ್ನು ಮುಂದುವರೆಸಿದರೂ, ದಾನ ಪಡೆಯುವುದು ಹಕ್ಕಲ್ಲ. ದಾನವನ್ನು ಬೇಡುವುದು ಅಥವಾ ಆಗ್ರಹಿಸುವುದಕ್ಕೆ ಸಾಧ್ಯವಿಲ್ಲ ಎಂದೂ ಆ ತೀರ್ಪಿನಲ್ಲಿ ಹೇಳಲಾಗಿದೆ. ಆದ್ದರಿಂದ ಸರಕಾರ ಇಂತಿಷ್ಟೇ ಸೀಟುಗಳನ್ನು ಕೊಡಬೇಕು ಎಂದು ಕೇಳಲು ಸಾಧ್ಯವಿಲ್ಲ. ಮತ್ತು ಖಾಸಗಿ ಆಡಳಿತ ಮಂಡಳಿಗಳು 'ಬನ್ನ'ನ್ನು ಎಸೆಯುವಂತೆ ಸರಕಾರಕ್ಕೆ ಕಣ್ಣೊರೆಸಲು ಕೆಲವು ಸೀಟುಗಳನ್ನು ನೀಡಿ ಪ್ರತಿಭೆ ಮತ್ತು ಸಾಮಾಜಿಕ ನ್ಯಾಯವನ್ನು ಪುರಸ್ಕರಿಸಿದ ನಾಟಕವನ್ನಾಡಿ ತಮ್ಮ ಲಾಭ ಕೋರತನದ 'ಅಜೆಂಡಾ'ವನ್ನು ಮುಂದುವರೆಸುತ್ತವೆ. ಇಲ್ಲಿನ ಐರನಿ ಏನೆಂದರೆ ಶಿಕ್ಷಣವನ್ನು 'ಚ್ಯಾರಿಟಿ' ಎಂದು ಕೋರ್ಟುಗಳು ಗುರ್ತಿಸಿರುವುದೇ ಆಡಳಿತ ಮಂಡಳಿಗಳಿಗೆ ಅನುಕೂಲಕರ ವಾಗಿದೆ. 'ಚ್ಯಾರಿಟಬಲ್ ಇನ್‌ಸ್ಟಿಟ್ಯೂಶನ್'ಗಳಿಗೆ ಇರುವ ಕೆಲವು ವಿಶೇಷ ಸೌಲಭ್ಯಗಳು ಈ ವ್ಯಾಪಾರಿ ಮನೋವೃತ್ತಿಯ ಆಡಳಿತ ಮಂಡಳಿಗಳಿಗೆ ದೊರಕುವುದರಲ್ಲಿ ಸಂಶಯ ವಿಲ್ಲ. ಸರಕಾರಗಳು ಇಚ್ಛಾಶಕ್ತಿಯ ಕೊರತೆಯಿಂದ ನರಳುತ್ತಿವೆ. ಏಕೆಂದರೆ, ಎಲ್ಲ ಪಕ್ಷಗಳ ಎಲ್ಲೆಗಳನ್ನು ಮೀರಿ, ಎಲ್ಲ ಮತಗಳ ಗಡಿಗಳನ್ನು ಹಾದು, ವೃತ್ತಿಶಿಕ್ಷಣ ಆಡಳಿತ ಮಂಡಳಿಗಳ ಆಸಕ್ತಿ ಒಂದೇ ಕಡೆ ಕೇಂದ್ರೀಕೃತವಾಗಿದೆ. ಇವರೆಲ್ಲ ಪಕ್ಷಾತೀತರು ಮತ್ತು ಧರ್ಮಾತೀತರು!

ಆದ್ದರಿಂದ ಸರಕಾರವು, ಜನಪ್ರಿಯ ಸರಕಾರವೇ ಆಗಿದ್ದಲ್ಲಿ, ಮತ್ತು ಈ ಆಡಳಿತ ಮಂಡಳಿಗಳ ಕೈಗೊಂಬೆ ಆಗದೇ ಇದ್ದಲ್ಲಿ ಕೂಡಲೇ ಸೂಕ್ತವಾದ ಕಾನೂನನ್ನು ರಚಿಸಿ, ಮಧ್ಯಪ್ರವೇಶ ಮಾಡುವುದು ಅತ್ಯಗತ್ಯ ಕ್ರಮವಾಗಿದೆ.

**ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳ ಬಗ್ಗೆ ವಿಧೇಯಕದ ಕರಡು**

ಕೇಂದ್ರ ಮಾನವ ಸಂಪನ್ಮೂಲ ಸಚಿವಾಲಯ ಒಂದು ವಿಧೇಯಕದ ಕರಡನ್ನು ಚರ್ಚೆಗೆಂದು ಕೇಂದ್ರ ಶಿಕ್ಷಣ ಸಲಹಾ ಮಂಡಳಿಗೆ (CABE) ಕಳುಹಿಸಿಕೊಟ್ಟಿದೆ. ಸಾರ್ವಜನಿಕ ಒತ್ತಡದಿಂದಾಗಿ ಈ ವಿಧೇಯಕ ಅಗತ್ಯವಾಗಿದೆ. ಟಿ.ಎಂ.ಎ. ಪೈ ಮತ್ತು ಇಸ್ಲಾಮಿಕ್ ಅಕೆಡಮಿ ತೀರ್ಪಿನ ನಂತರ ವೃತ್ತಿಶಿಕ್ಷಣದಲ್ಲಿನ ಖಾಸಗಿ ವ್ಯಾಪಾರಿಗಳಿಗೆ ದೊರೆತಿರುವ ಲಗಾಮಿಲ್ಲದ ಸ್ವೇಚ್ಛೆಯ ಬಗ್ಗೆ ನಿರಂತರವಾಗಿ ದೇಶಾದ್ಯಂತ ನಡೆಯುತ್ತಿರುವ ಪ್ರತಿಭಟನೆ ಮತ್ತು ಚರ್ಚೆ ಸರಕಾರದ ಮೇಲೆ ಒತ್ತಡ ಹೇರುತ್ತಿದೆ. ಉನ್ನಿಕೃಷ್ಣನ್ ತೀರ್ಪನ್ನು ಅನೂರ್ಜಿತಗೊಳಿಸಿದ ಈ ಎರಡು ತೀರ್ಪುಗಳು ಪ್ರತಿಭಾನ್ವಿತ ಮಧ್ಯಮವರ್ಗದ ವಿದ್ಯಾರ್ಥಿಗಳಿಗೂ ವೃತ್ತಿಶಿಕ್ಷಣ ದುಬಾರಿ ಅನ್ನಿಸುವಂತೆ ಮಾಡಿದೆ. ಅಲ್ಲದೆ ಯುಪಿಎ ಸರಕಾರವು ತನ್ನ ಸಾಮಾನ್ಯ ಕನಿಷ್ಠ ಕಾರ್ಯಕ್ರಮದಲ್ಲಿ, ''ಯಾರೇ ಆಗಲಿ ಬಡತನದಿಂದಾಗಿ ವೃತ್ತಿಶಿಕ್ಷಣದಿಂದ ವಂಚಿತರಾಗುವುದಿಲ್ಲ'' ಎಂದು ಘೋಷಿಸಿದೆ. ಎಸ್‌ಎಫ್‌ಐ, ಎಐಎಸ್‌ಎಫ್ ಮುಂತಾದ ವಿದ್ಯಾರ್ಥಿ ಸಂಘಟನೆಗಳು, ಶಿಕ್ಷಕ ಸಂಘಟನೆಗಳು, ಬುದ್ಧಿಜೀವಿಗಳು ಮತ್ತು ಪ್ರಜ್ಞಾವಂತ ನಾಗರಿಕರು ಕೇಂದ್ರ ಸರಕಾರವನ್ನು ಸೂಕ್ತ ಕಾನೂನು ರಚಿಸಿ, ಅನುದಾನರಹಿತ ಕಾಲೇಜುಗಳ ಶುಲ್ಕ ಮತ್ತು ಪ್ರವೇಶಗಳನ್ನು ನಿಯಂತ್ರಿಸಬೇಕೆಂದು ಆಗ್ರಹಿಸುತ್ತಾ ಬಂದಿದ್ದಾರೆ. ಪ್ರಸ್ತುತ ೭ ಜನ ನ್ಯಾಯಾಧೀಶರ ಮಂಡಳಿಯ ತೀರ್ಪಿನ ನಂತರ ಇದು ಮತ್ತಷ್ಟು ತುರ್ತಾಗಿ ಆಗಲೇಬೇಕಾಗಿದೆ. ಯಾಕೆಂದರೆ, ಈಗ ಖಾಸಗಿ ವೃತ್ತಿಶಿಕ್ಷಣ ಸಂಸ್ಥೆಗಳಲ್ಲಿನ ಅತ್ಯಂತ ನ್ಯಾಯ ವಿರೋಧಿ ವ್ಯವಸ್ಥೆಗೆ ಕಾನೂನಿನ ಶ್ರೀರಕ್ಷೆ ದೊರಕಿದಂತೆ ಆಗಿದೆ.

ಮೇಲೆ ಹೆಸರಿಸಿದ ಕರಡಿನಲ್ಲಿ ಇರುವ ಸಂಗತಿಗಳು ಜನತೆಯ ಆಶೋತ್ತರಗಳಿಗೆ ವ್ಯತಿರಿಕ್ತವಾಗಿದೆ. ಡಾ|| ಟಿ. ಎಂ. ಎ. ಪೈ ಮತ್ತು ಇಸ್ಲಾಂ ಅಕೆಡಮಿ ತೀರ್ಪುಗಳಿಗಿಂತ ಹೆಚ್ಚು ಸ್ವೇಚ್ಛೆಯನ್ನು ಖಾಸಗಿ ಆಡಳಿತ ಸಂಸ್ಥೆಗಳಿಗೆ ನೀಡಲಾಗಿದೆ. ಅಲ್ಲದೆ ಅಲ್ಪಸಂಖ್ಯಾತ ಸಂಸ್ಥೆಗಳಿಗೆ ಅನಾವಶ್ಯಕ ಸೌಲಭ್ಯಗಳನ್ನು ಕಲ್ಪಿಸಲಾಗಿದೆ.

ಅಲ್ಪಸಂಖ್ಯಾತ ಸಂಸ್ಥೆಗಳು ಅನುದಾನಿತ ಅಥವಾ ಅನುದಾನರಹಿತ ಸಂಸ್ಥೆಯೇ ಆಗಿರಲಿ, ಮೀಸಲಾತಿಯನ್ನು ''ಆಡಳಿತಕ್ಕೆ ವರ್ಗಕ್ಕೆ ನೀಡಲಾಗಿದೆ. ಆಯಾ ಅಲ್ಪಸಂಖ್ಯಾತ ಸಮುದಾಯಕ್ಕೆ'' ಇದನ್ನು ನೀಡಲಾಗುತ್ತಿಲ್ಲ. ಅನುದಾನಿತ ಅಲ್ಪಸಂಖ್ಯಾತ ಸಂಸ್ಥೆಗಳಿಗೆ ಆಡಳಿತ ಕ್ಯಾಟಗರಿಯಲ್ಲಿ ಶೇ. ೫೦ರಷ್ಟು ಸೀಟುಗಳು ಮತ್ತು ಅನುದಾನರಹಿತ ಅಲ್ಪಸಂಖ್ಯಾತ ಆಡಳಿತ ಮಂಡಳಿಗಳಿಗೆ (ಅರ್ಥಾತ್ ಶೇ. ೧೦೦ರಷ್ಟಕ್ಕೂ ಇದು ಹೋಗಬಹುದು) ಸೀಟುಗಳನ್ನು ಕಾದಿರಿಸುವ ಹುನ್ನಾರವನ್ನು ಇಲ್ಲಿ ಕಾಣಬಹುದಾಗಿದೆ. ಈ ಮೀಸಲಾತಿ ಯಾವ ರೀತಿಯಲ್ಲಿ ಅಲ್ಪಸಂಖ್ಯಾತ ಸಮುದಾಯದ ವಿದ್ಯಾರ್ಥಿಗೆ ಉಪಯುಕ್ತವೆಂಬುದು ವೇದ್ಯವಾಗುತ್ತಿಲ್ಲ. ಈ ಆಡಳಿತ ಮಂಡಳಿಗಳು ತಮ್ಮ ಸಮುದಾಯದ ವಿದ್ಯಾರ್ಥಿಗಳಿಗೆ ಈ ಸೀಟುಗಳನ್ನು ನೀಡುವ ಅಗತ್ಯ ಇಲ್ಲಿ ಕಾಣಿಸುತ್ತಿಲ್ಲ. ಬದಲಾಗಿ ಅಲ್ಪಸಂಖ್ಯಾತ ಸೌಲಭ್ಯದ ಹೆಸರಿನಲ್ಲಿ ಹೊರಗಿನ ಯಾರಿಗೇ ಆಗಲಿ ಈ ಸೀಟುಗಳನ್ನು ಆಯಾ ಆಡಳಿತ ಮಂಡಳಿಗಳು ಹರಾಜು ಹಾಕಲು ಸಾಧ್ಯವಿದೆ. ಟಿ. ಎಂ. ಎ. ಪೈ ತೀರ್ಪಿನ "inter se merit" ಇಲ್ಲಿ ಕೆಲಸ ಮಾಡುವುದಿಲ್ಲ.

**ಔನ್ನತ್ಯದ ದ್ವೀಪಗಳು :** ಖಾಸಗಿ 'ಡೀಮ್ಡ್' ವಿಶ್ವವಿದ್ಯಾನಿಲಯಗಳನ್ನು ಪ್ರತ್ಯೇಕಿಸಿ ನೋಡಲಾಗಿದೆ. ಅವುಗಳು ತಮ್ಮದೇ ಆದ ಪ್ರವೇಶ ಪರೀಕ್ಷೆಗಳನ್ನು ನಡೆಸಬಹುದಾಗಿದೆ. ಆದರೆ ಈ ಪರೀಕ್ಷೆಗಳು ದೆಹಲಿ, ಚೆನ್ನೈ, ಮುಂಬೈ ಮತ್ತು ಕೊಲ್ಕತಾ – ಈ ನಾಲ್ಕು ನಗರಗಳಲ್ಲಿ, ಒಂದು ಕೇಂದ್ರದಲ್ಲಿಯಾದರೂ ನಡೆಯಬೇಕು. ಇದರ ಅರ್ಥ ಗ್ರಾಮೀಣ ವಿದ್ಯಾರ್ಥಿಗಳು ಈ ಪರೀಕ್ಷೆಗಳನ್ನು ತೆಗೆದುಕೊಳ್ಳಲು ಹರಸಾಹಸ ಪಡಬೇಕು ಎಂಬುದೇ ಆಗಿದೆ. ಮತ್ತು ಈ 'ಡೀಮ್ಡ್' ವಿ.ವಿ.ಗಳನ್ನು 'ಔನ್ನತ್ಯದ ದ್ವೀಪ'ಗಳನ್ನಾಗಿ ಕಾಪಾಡಿಕೊಳ್ಳುತ್ತಾ, ಉಳ್ಳವರು

ಮತ್ತು ಪ್ರಭಾವಶಾಲಿಗಳ ಮಕ್ಕಳ ಶಿಕ್ಷಣದ ಹಂಬಲಕ್ಕೆ ಉಪಯುಕ್ತ ದ್ವೀಪಗಳನ್ನಾಗಿ ಇವುಗಳನ್ನು ಸ್ಥಾಪಿಸುವ ಹುನ್ನಾರು ಇಲ್ಲಿದೆ.

ಈ ಕಾನೂನನ್ನು ಮಾಡುವ ಉದ್ದೇಶ ಇರುವುದು, ಸುಪ್ರೀಂ ಕೋರ್ಟಿನ ತೀರ್ಮಾನಗಳಿಂದ ಉದ್ಭವ ಆಗುವ 'ಲೂಪ್‌ಹೋಲ್'ಗಳ ಮೂಲಕ ಲಾಭ ಕೋರತನವನ್ನು ಮಟ್ಟಹಾಕುವುದೇ ಆಗಿದೆ. ಆದರೆ ಈ ಕರಡನ್ನು ನೋಡಿದರೆ ಈ ಮೂಲಭೂತ ಆಶಯಗಳನ್ನು ಗಾಳಿಗೆ ತೂರಿರುವುದು ಬಹಳ ಸ್ಪಷ್ಟವಾಗಿ ಗೋಚರವಾಗುತ್ತದೆ. ಅಷ್ಟೇ ಅಲ್ಲ, ಈ ಕರಡನ್ನು ತಯಾರಿಸಿದ ಅಧಿಕಾರಿಗಳು ಎರಡು ಸಿದ್ಧಾಂತಗಳಿಂದ ಪ್ರೇರಣೆ ಪಡೆದುಕೊಂಡಿರುವುದು ಗೋಚರವಾಗುತ್ತದೆ. ಅವುಗಳೆಂದರೆ, (೧) ದೇಶದಲ್ಲಿ ಎರಡು ಶ್ರೇಣಿಯ ಶಿಕ್ಷಣ ವ್ಯವಸ್ಥೆಯನ್ನು ಸೃಷ್ಟಿಸುವುದು. ಅವುಗಳಲ್ಲಿ, ಒಂದು 'ಔನ್ನತ್ಯದ ದ್ವೀಪ'ವಾಗಿರಬೇಕು; ಮತ್ತೊಂದು ಸಾರ್ವಜನಿಕ ಗ್ರಾಹಕರಿಗಾಗಿ, ನುರಿತ ಅಧ್ಯಾಪಕರುಗಳ ಕೊರತೆ, ಆರ್ಥಿಕ ಕೊರತೆ ಮತ್ತು ತಿರಸ್ಕಾರಕ್ಕೆ ಒಳಗಾದ ವ್ಯವಸ್ಥೆ. (೨) ಶಿಕ್ಷಣವನ್ನು ಒಂದು ಗ್ರಾಹಕರ ಕೊರತೆಯೇ ಇಲ್ಲದ, ತತ್‌ಕ್ಷಣ ಲಾಭದ, ಅಲ್ಪ ಬಂಡವಾಳ ಹೂಡಿಕೆಯ, ವಿಶಿಷ್ಟ ಪರಿಣತಿ ಅಗತ್ಯವಿಲ್ಲದ ಬಹು ಬೇಗ ಲಾಭ ತಂದುಕೊಡುವ ಉದ್ಯಮ. ಇದರಲ್ಲಿ ತೊಡಗುವ ಉದ್ಯಮಿಗಳನ್ನು ಎಲ್ಲ ರೀತಿಯಲ್ಲೂ ಪ್ರೋತ್ಸಾಹಿಸಿ ಲಾಭವನ್ನು ಅತಿಯಾಗಿ ಹೆಚ್ಚಿಸಲು ಸೌಲಭ್ಯ ಒದಗಿಸಿ ಕೊಡಬೇಕು. ಇಂತಹ ಚಿಂತನೆಯುಳ್ಳ ಅಧಿಕಾರಿಗಳನ್ನು ನಮ್ಮ ಶಿಕ್ಷಣ ವ್ಯವಸ್ಥೆಯ ಉದ್ದಕ್ಕೂ ದಿನನಿತ್ಯ ನಾವು ಕಾಣಬಹುದಾಗಿದೆ; ವಿಪರ್ಯಾಸವೆಂದರೆ, ಇವರಲ್ಲಿ ಬಹುಸಂಖ್ಯಾತರು ಅನುದಾನಿತ ಪದ್ಧತಿಯಿಂದ ಮಾತ್ರ ಶಿಕ್ಷಣ ಪಡೆದವರು, ಅಧಿಕಾರಿಗಳಾದವರು ಮತ್ತು ಮುಖ್ಯವಾಗಿ ಮನುಷ್ಯರಾದವರು. ಇದನ್ನು ವಿಪರ್ಯಾಸ ಎನ್ನುವುದಕ್ಕಿಂತ ನಮ್ಮ ವ್ಯವಸ್ಥೆಯ ದುರಂತ ಎಂದರೆ ಹೆಚ್ಚು ಸೂಕ್ತವಾಗುತ್ತದೆ.

**ನಮ್ಮ ಬೇಡಿಕೆಗಳು :** ಈಗ ನಾನು ತಮ್ಮ ಮುಂದಿಡುವುದು ಬಹುಶಃ (ಸಣ್ಣಪುಟ್ಟ ಬದಲಾವಣೆಗಳ ಜೊತೆ) ಎಲ್ಲ ಸರಿಯಾಗಿ ವಿಚಾರ ಮಾಡುವವರೆಲ್ಲರ ಆಲೋಚನೆಗಳೇ ಆಗಿರುತ್ತವೆ.

೧. ಕೇಂದ್ರ ಸರಕಾರ ಇಡೀ ದೇಶಕ್ಕೆ ಅನ್ವಯಿಸುವ ಒಂದು ಸಮಗ್ರ ಕಾಯಿದೆ ಮಾಡುವ ಅಗತ್ಯವಿಲ್ಲ. ಬದಲಾಗಿ ಪ್ರತಿರಾಜ್ಯ ಸರಕಾರವು ತನ್ನ ರಾಜ್ಯದ ಖಾಸಗಿ ವೃತ್ತಿ ಶಿಕ್ಷಣ ಮತ್ತು ಇತರ ಶಿಕ್ಷಣ ಕೇಂದ್ರಗಳ ಪ್ರವೇಶ ಮತ್ತು ಶುಲ್ಕ ವನ್ನು ನಿಯಂತ್ರಿಸುವ ಅಧಿಕಾರ ಸೃಷ್ಟಿಯಾಗುವಂತೆ ಕಾನೂನನ್ನು ರಚಿಸಬೇಕು. ಸಮಾನತೆ, ಗುಣಮಟ್ಟ ಕಾಪಾಡುವುದು ಮತ್ತು ಸುಲಭವಾಗಿ ಕೈಗೆಟಕುವಂತೆ ವೃತ್ತಿಶಿಕ್ಷಣ ಅಥವಾ ಇನ್ನು ಯಾವುದೇ ಉನ್ನತ ಶಿಕ್ಷಣವನ್ನು ನಿರೂಪಿಸುವುದು ರಾಜ್ಯ ಸರಕಾರಗಳ ಮೂಲ ಆಶಯವಾಗಬೇಕಿದೆ.

೨. ಪ್ರತಿಭೆಗೆ ಅನುಗುಣವಾಗಿ ಪ್ರವೇಶ ಮತ್ತು ಪೋಷಕರ ಆರ್ಥಿಕ ಮಟ್ಟಕ್ಕೆ ಅನುಗುಣವಾಗಿ ಶುಲ್ಕವನ್ನು ನಿರ್ಧರಿಸಬೇಕು. ಎಲ್ಲ ವೃತ್ತಿಶಿಕ್ಷಣ ಕೇಂದ್ರಗಳಿಗೂ ಪ್ರವೇಶವನ್ನು ಸಿಇಟಿ ಮೂಲಕ ಮಾತ್ರ ಮಾಡಬೇಕು. ಮೀಸಲಾತಿಯನ್ನು ಈಗ ಇರುವ ರೀತಿಯಲ್ಲೇ ಮುಂದುವರೆಸಿಕೊಂಡು ಹೋಗಬೇಕು.

೩. ಕೋರ್ಟುಗಳಲ್ಲಿ ಈ ವಿಷಯವನ್ನು ಪುನಃ ಆಡಳಿತ ಮಂಡಳಿಗಳು ಎಳೆದಾಡದಂತೆ ಸೂಕ್ತ ರೀತಿಯಲ್ಲಿ ಈ ಕಾನೂನನ್ನು ರಚಿಸಬೇಕು.

೪. ಈ ಕಾನೂನು ಪ್ರಸ್ತುತ ಶೈಕ್ಷಣಿಕ ವರ್ಷ ಆರಂಭದ ಹೊತ್ತಿಗೆ ಎಲ್ಲ ರಾಜ್ಯಗಳಲ್ಲೂ ಸೂಕ್ತ ಕಾನೂನು ರಚನೆಗೊಳ್ಳಲು ಅವಕಾಶವಾಗಬೇಕು.

೫. ಈ ಕಾನೂನಿನ ವ್ಯಾಪ್ತಿಯಲ್ಲಿ ಎಲ್ಲ ಅನುದಾನರಹಿತ ಕಾಲೇಜುಗಳು, ವಿ.ವಿ.ಗಳು, ಖಾಸಗಿ ಅಥವಾ ಸಾರ್ವಜನಿಕ ವಲಯದ ಕೇಂದ್ರಗಳು, ಅಲ್ಪಸಂಖ್ಯಾತ ಅಥವಾ ಇತರ ಸಂಸ್ಥೆಗಳು, ಇಂಡಿಯಾದ ಅಥವಾ ಇಂಡಿಯಾದಲ್ಲಿ ಕಾರ್ಯಾಚರಣೆ ಮಾಡುವ ವಿದೇಶಿ ಸಂಸ್ಥೆಗಳು, ಕಡ್ಡಾಯವಾಗಿ ಸೇರಬೇಕು.

೬. ಶಿಕ್ಷಣ ವ್ಯವಸ್ಥೆಯನ್ನು 'ಚ್ಯಾರಿಟಿ' ಎಂದು ಕರೆದರೆ ಮಾತ್ರ ಸಾಲದು. ಆಡಳಿತ ಮಂಡಳಿಗಳು 'ಚ್ಯಾರಿಟಿ'ಯ ಹೆಸರಲ್ಲಿ ಬಂಡವಾಳವನ್ನು ಹೂಡಬೇಕು ಮತ್ತು ಭವಿಷ್ಯತ್ತಿನಲ್ಲಿ ವಿಸ್ತರಣೆಗೆ ಸೂಕ್ತ ಬಂಡವಾಳವನ್ನು ಕಾದಿರಿಸಬೇಕು. ವಿದ್ಯಾರ್ಥಿಗಳು ದೈನಂದಿನ ವೆಚ್ಚಕ್ಕೆ ಸೂಕ್ತವಾದ ಶುಲ್ಕ ನೀಡಬೇಕೇ ಹೊರತು, ಯಾವುದೇ ರೀತಿಯಲ್ಲಿ ಬಂಡವಾಳ ಹೂಡಿಕೆಯ ವೆಚ್ಚವನ್ನು ನೀಡಬೇಕಾಗಿಲ್ಲ. ಈ ದೈನಂದಿನ ವೆಚ್ಚವನ್ನು ೩ ವರ್ಷಗಳಿಗೆ ಒಮ್ಮೆ




ಪರಾಮರ್ಶೆಗೊಳಿಸಬಹುದಾಗಿದೆ.

೭. ಕೇಂದ್ರ ಮತ್ತು ರಾಜ್ಯ ಸರಕಾರಗಳು ಶಿಕ್ಷಣಕ್ಕೆಂದು ಒಂದು ನಿಧಿಯನ್ನು ಸ್ಥಾಪಿಸಿ ವಿದ್ಯಾರ್ಥಿಗಳಿಗೆ ಸಾಕಷ್ಟು ಲಂಬಿತ ಕಾಲಾವಧಿಯ ಸಾಲವನ್ನು ಬಹಳ ಕಡಿಮೆ ಬಡ್ಡಿ ದರದಲ್ಲಿ ವಿದ್ಯಾರ್ಥಿಗಳ ಅಗತ್ಯಕ್ಕೆ ಅನುಗುಣವಾಗಿ ತತ್‌ಕ್ಷಣವೇ ನೀಡುವುದರ ಮೂಲಕ ಅಧಿಕಾರಶಾಹಿಯ ಕೌಶಲ ಮತ್ತು ಸಾಮರ್ಥ್ಯ ಹಾಗೂ ಸರಕಾರದ ಶೈಕ್ಷಣಿಕ ಜವಾಬುದಾರಿಯನ್ನು ಸ್ಥಾಪಿಸಬೇಕು.

೮. ಉನ್ನತ ಶಿಕ್ಷಣವನ್ನು 'ಮೆರಿಟ್ ಗುಡ್' ಎಂದು ಘೋಷಿಸಬೇಕು. ಕಾನೂನು ರೀತ್ಯಾ ಉನ್ನತ ಶಿಕ್ಷಣದ ಹಕ್ಕನ್ನು ನೀಡಿ, ಈ ಹಕ್ಕು ವಿದ್ಯಾರ್ಥಿಯ ಶೈಕ್ಷಣಿಕ ಪ್ರತಿಭೆ ಮತ್ತು ಅವನ ಆಸಕ್ತಿಗೆ ಅನುಗುಣವಾಗಿ ಮಾತ್ರ ನಿಯಂತ್ರಣಗೊಳ್ಳುವಂತೆ ಆ ಕಾನೂನಿನಲ್ಲಿ ಅವಕಾಶ ಮಾಡಿಕೊಳ್ಳಬೇಕು.

೯. ಯುಜಿಸಿ, ಎಐಸಿಟಿಇ, ಐಎಂಎ ಮುಂತಾದ ಕೇಂದ್ರ ಸಂಸ್ಥೆಗಳು ಮತ್ತು ಆಯಾ ವಿಶ್ವವಿದ್ಯಾನಿಲಯಗಳು ಎಲ್ಲ ಶಿಕ್ಷಣ ಕೇಂದ್ರಗಳ ಗುಣಮಟ್ಟದ ಜವಾಬುದಾರಿಯನ್ನು ವಹಿಸಿಕೊಂಡು, ಪ್ರತಿ ಶಿಕ್ಷಣಕೇಂದ್ರದ ಆಯಾ ವಿಷಯದ ಮಟ್ಟಿಗೆ ಎಲ್ಲ ರೀತಿಯ ಶೈಕ್ಷಣಿಕ ಮತ್ತು ಸೌಲಭ್ಯಗಳ ನಿಯಮಗಳನ್ನು ಪಾಲಿಸಿದಾಗ ಮಾತ್ರ, ಅವುಗಳಿಗೆ ಮಾನ್ಯತೆ ನೀಡಬೇಕು. ಅಧ್ಯಾಪಕರುಗಳಿಗೆ ಕನಿಷ್ಠ ವಿದ್ಯಾರ್ಹತೆಯನ್ನು ವಿಶ್ವವಿದ್ಯಾನಿಲಯಗಳು ನಿರ್ಧರಿಸುವುದಲ್ಲದೆ, ಅವರಿಗೆ ಸರಕಾರದ ಅಥವಾ ವಿಶ್ವವಿದ್ಯಾನಿಲಯಗಳಲ್ಲಿ ಅದೇ ಹಂತದ ವೃತ್ತಿಗೆ ನೀಡುವ ವೇತನವನ್ನೇ ಜಾರಿಗೊಳಿಸಬೇಕು. ವಿಶ್ವವಿದ್ಯಾನಿಲಯಗಳು ಈ ಕೇಂದ್ರಗಳ ಮೇಲ್ವಿಚಾರಣೆ ಮಾಡುತ್ತಾ, ಅಗತ್ಯ ಬಿದ್ದಾಗ ಈ ಕೇಂದ್ರಗಳನ್ನು ತಿದ್ದುವ ಅಥವಾ ಶಿಕ್ಷಿಸುವ ಅಧಿಕಾರ ಹೊಂದಿರಬೇಕು.

೧೦. ಈ ಕೇಂದ್ರ ಕಾನೂನು ಅಲ್ಪಸಂಖ್ಯಾತರು ಯಾರೆಂಬುದನ್ನು ಸ್ಪಷ್ಟವಾಗಿ ಗುರ್ತಿಸಲು ಸೂಕ್ತ ಸೂಚನೆಗಳನ್ನು ಟಿ.ಎಂ.ಎ. ಪೈ ತೀರ್ಪಿನ ರೀತಿಯಲ್ಲಿ ನೀಡಬೇಕು. ಯಾವುದೇ ಅಲ್ಪಸಂಖ್ಯಾತ ಸಂಸ್ಥೆಯಲ್ಲಿ ಆಯಾ 'ಸಮುದಾಯದ' ವಿದ್ಯಾರ್ಥಿಗಳಿಗೆ ಶೇಕಡಾವಾರು ನಿಗದಿತ ಸೀಟುಗಳನ್ನು ಕಡ್ಡಾಯ ನೀಡುವಂತೆ ಕೇಂದ್ರ ಕಾನೂನು ರಚಿಸಲ್ಪಡಬೇಕು. ಈ ಮೀಸಲಾತಿ ಕೂಡ ಸರಕಾರ ನಡೆಸುವ ಸಿಇಟಿ ರೀತಿಯ ಕೇಂದ್ರ ಪರೀಕ್ಷೆಯಿಂದ ನಿರ್ಧರಿಸಲ್ಪಡಬೇಕು.

೧೧. ಯಾವುದೇ ರೀತಿಯಲ್ಲೂ ಪ್ರವೇಶ ಮತ್ತು ಶುಲ್ಕಗಳ ಮಟ್ಟಿಗೆ ಸರಕಾರದಿಂದ ನೇಮಿಸಲ್ಪಟ್ಟ ಸಮಿತಿಯ ಹೊರತು ಆಡಳಿತ ಮಂಡಳಿಗಳು ಹಸ್ತಕ್ಷೇಪಮಾಡಲು ಅವಕಾಶ ನೀಡಬಾರದು. ಈ ಸಮಿತಿಯಲ್ಲಿ ಆಡಳಿತ ಮಂಡಳಿಯ ಪ್ರತಿನಿಧಿಗಳಿಗೆ ಅವಕಾಶ ನೀಡಬಾರದು.

ಈ ಎಲ್ಲ ಬೇಡಿಕೆಗಳನ್ನು ಒಳಗೊಂಡಂಥ ಒಂದು ಸಮಗ್ರ ಕಾನೂನನ್ನು ಕೇಂದ್ರ ಸರಕಾರ ರಚಿಸಿದಲ್ಲಿ ಮಾತ್ರ ಈಗ ಸೃಷ್ಟಿಯಾಗಿರುವ ಗೊಂದಲವನ್ನು ಸಾಕಷ್ಟು ಪ್ರಮಾಣದಲ್ಲಿ ಕಡಿಮೆ ಮಾಡಿಕೊಳ್ಳಬಹುದಾಗಿದೆ. ಇಲ್ಲದಿದ್ದಲ್ಲಿ ಕಟುಟೀಕೆ, ಪ್ರತಿಭಟನೆ ಮತ್ತು ವಿದ್ಯಾರ್ಥಿ - ಪೋಷಕರುಗಳ ಶಾಶ್ವತ ಶಾಪಕ್ಕೆ ಸರಕಾರ ಗುರಿಯಾಗಬೇಕಾಗುತ್ತದೆ. ಅಲ್ಲದೆ ಬಹು ಮುಖ್ಯವಾಗಿ ಈಗ ಹೊರಹೊಮ್ಮುತ್ತಿರುವ 'ಜ್ಞಾನ-ಸಮಾಜ'ಕ್ಕೆ ಸೂಕ್ತ ಪ್ರಬಲವಾದ ಮಾನವ ಸಂಪನ್ಮೂಲವನ್ನು ಸೃಷ್ಟಿಸಲು ಸಾಧ್ಯ. ಇಲ್ಲದಿದ್ದಲ್ಲಿ ಪುನಃ ನಾವು ಹಣವಿದ್ದವನಿಗೆ ಮಾತ್ರ 'ಓದು' ಎಂಬ ಕರಾಳ ಯುಗಕ್ಕೆ ವಾಪಸ್ಸು ಬಂದು ಮುಟ್ಟುತ್ತೇವೆ ಎಂದು ಹೇಳಿದರೆ ಅತಿಶಯೋಕ್ತಿ ಆಗದು.

**ಕೆ. ಪಿ. ವಾಸುದೇವನ್**
೫೦೭, ೬ನೇ ಮುಖ್ಯರಸ್ತೆ, ೪ನೇ ಹಂತ ವಿಜಯನಗರ, ಮೈಸೂರು - [illegible]

# ಸ್ತ್ರೀ ಭ್ರೂಣ ಹತ್ಯೆ ಒಂದು ಅವಲೋಕನ

ಡಾ|| ಎಚ್. ಎಸ್. ಮೋಹನ್

**ಪ್ರ**ತಿವರ್ಷ ಲಕ್ಷಾಂತರ ಹೆಣ್ಣುಮಕ್ಕಳು ಮದುವೆಯಾಗುತ್ತಾರೆ. ಅಂತಹ ಸಂದರ್ಭದಲ್ಲಿ ಅವರು ತಮ್ಮದೇ ಸಂಸಾರವನ್ನು ಆರಂಭಮಾಡುವ ಸವಿಗನಸು ಕಾಣುತ್ತಿರುತ್ತಾರೆ. ಕೆಲವೇ ತಿಂಗಳುಗಳಲ್ಲಿ ತಮ್ಮ ಮನೆ ಪುಟ್ಟ ಕಂದನ ಅಳು - ನಗುವಿನೊಂದಿಗೆ ತುಂಬುತ್ತದೆ ಎಂಬ ನಿರೀಕ್ಷೆಯಲ್ಲಿರುತ್ತಾರೆ. ಆದರೆ ಭಾರತದಂತಹ ದೇಶದಲ್ಲಿ ಜನಿಸಬಹುದಾದ ಮಗು ಗಂಡೋ ಅಥವಾ ಹೆಣ್ಣೋ ಎಂಬ ಬಗ್ಗೆ ತೀವ್ರ ಕಾತರವಿರುತ್ತದೆ.

'ಗಂಡು ಹುಟ್ಟಿದರೆ ಕಂಚಿನ ತಟ್ಟೆ ಹೊಡೆಯಿರಿ, ಹೆಣ್ಣು ಹುಟ್ಟಿದರೆ ಮಣ್ಣಿನ ಪಾತ್ರೆಗಳನ್ನು ಒಡೆಯಿರಿ' – ಇದು ನಮ್ಮ ದೇಶದ ಹರಿಯಾಣ ರಾಜ್ಯದಲ್ಲಿ ಇರುವ ಪ್ರಾಚೀನ ಪದ್ಧತಿ. ತಮ್ಮ ವಂಶವನ್ನು ಮುಂದುವರಿಸಿಕೊಂಡುಹೋಗಲು ಮದುವೆ ಅನಿವಾರ್ಯ ಎಂದು ಹಿಂದೂ ಪದ್ಧತಿಯಲ್ಲಿ ತಿಳಿಯಲಾಗಿದೆ. ಹಾಗಾಗಿಯೇ ಮದುವೆಯ ಸಂದರ್ಭದಲ್ಲಿ ವಧುವಿಗೆ ''ಅಷ್ಟ ಪುತ್ರ ಸೌಭಾಗ್ಯವತೀ ಭವ'' – ಅಂದರೆ ''ಎಂಟು ಗಂಡು ಮಕ್ಕಳ ತಾಯಿಯಾಗು'' ಎಂದು ಆಶೀರ್ವದಿಸಲಾಗುತ್ತದೆ.

ಈಗ ನಮ್ಮ ದೇಶದಲ್ಲಿ ಹಿಂದಿನ ಕೌಟುಂಬಿಕ ವ್ಯವಸ್ಥೆ ಇಲ್ಲ. ದೊಡ್ಡ ಅವಿಭಕ್ತ ಕುಟುಂಬಗಳು ಒಡೆದು ಸಣ್ಣ ಸಣ್ಣ ಕುಟುಂಬಗಳಾಗಿಹೋದರೂ ಗಂಡುಮಕ್ಕಳ ಬಗೆಗಿನ ವ್ಯಾಮೋಹ ಎಷ್ಟಕ್ಕೂ ಕಡಿಮೆಯಾಗಿಲ್ಲ. ಎಷ್ಟೋ ಕುಟುಂಬಗಳಲ್ಲಿ ಗಂಡುಮಕ್ಕಳು ಹುಟ್ಟುವುದೇ ಒಂದು ವರ ಎಂದು ಭಾವಿಸುತ್ತಾರೆ. ಒಂದು ಗಂಡುಮಗುವಾದರೆ ಹೆಚ್ಚಿನ ಸಂತೋಷ, ಎರಡು ಗಂಡುಮಕ್ಕಳಾದರೆ ಜೀವನದಲ್ಲಿ ಬಹುವಾಗಿ ಸಂತೋಷಪಡುವ ಸಂಗತಿ ಎಂದು ತಿಳಿಯುತ್ತಾರೆ. ಏಕೆಂದರೆ, ಎರಡರಲ್ಲಿ ಒಬ್ಬನು ಏನೋ ದುರ್ದೈವದಿಂದ ಮಡಿದರೂ, ಇಳಿ ವಯಸ್ಸಿನಲ್ಲಿ ತಂದೆ ತಾಯಿಯರನ್ನು ನೋಡಿಕೊಳ್ಳಲು ಇನ್ನೊಬ್ಬ ಮಗನಿದ್ದಾನಲ್ಲ – ಎಂಬ ಸಮಾಧಾನ. ಹಾಗಾಗಿ ಸೊಸೆಯಂದಿರ ಮೇಲೆ ಗಂಡನ್ನೇ ಹೆರಬೇಕೆಂಬ ಅನಿವಾರ್ಯ ಒತ್ತಡವನ್ನು ತರಲಾರಂಭಿಸುತ್ತಾರೆ. ಒಂದು ವೇಳೆ ಹೆಣ್ಣು ಮಗುವಾದರೆ, ವರದಕ್ಷಿಣೆ ಕೊಡಬೇಕಾಗುತ್ತದೆ. ಅದಕ್ಕಾಗಿ ಬಹಳಷ್ಟು ಸಾಲಸೋಲಗಳನ್ನು ಮಾಡಬೇಕಾಗುತ್ತದೆ ಎಂದು ತಿಳಿಯಲಾಗುತ್ತದೆ.

**ಪ್ರಸ್ತುತ ಭಾರತದ ಪರಿಸ್ಥಿತಿ**

೧೯೯೭ರ ವಿಶ್ವಸಂಸ್ಥೆಯ 'ಭಾರತದ ಜನಸಂಖ್ಯಾ ಹಾಗೂ ಪ್ರಗತಿಯ ವರದಿ'ಯ ಪ್ರಕಾರ, ಭಾರತದ ಜನಸಂಖ್ಯೆಯಲ್ಲಿ ಸುಮಾರು ೪೮ ದಶಲಕ್ಷ ಮಹಿಳೆಯರು 'ಕಾಣೆಯಾಗಿದ್ದರೆ'. ೧೯೯೧ರ ಜನಗಣತಿಯ ಪ್ರಕಾರ ೧೦೦೦ ಪುರುಷರಿಗೆ ೧೦೩೬ ಮಹಿಳೆಯರು – ಈ ಮಾನದಂಡ ಕೇರಳ ರಾಜ್ಯದಲ್ಲಿದೆ. ಅದನ್ನು ಇಡೀ ದೇಶಕ್ಕೆ ಅನ್ವಯಿಸಿದರೆ ೧೯೯೧ರಲ್ಲಿದ್ದ ೪೦೭ ಮಿಲಿಯನ್ ಮಹಿಳೆಯರ ಬದಲು ೪೫೫ ಮಿಲಿಯನ್ ಮಹಿಳೆಯರು ಇರಬೇಕಿತ್ತು. ಹಾಗಾಗಿ ಭಾರತ ಸಮಾಜದ ೩೨ - ೪೮ ದಶಲಕ್ಷ ಮಹಿಳೆಯರು ಕಾಣೆಯಾಗಿರುವುದನ್ನು ವಿವರಿಸಬೇಕಾಗುತ್ತದೆ.

ಮಹಿಳೆಯರ ಸಂಖ್ಯೆ ಈ ರೀತಿಯಲ್ಲಿ ಕಡಿಮೆಯಾಗಿರುವುದು ಬ್ರಿಟಿಷರ ಆಳ್ವಿಕೆಯ ಭಾರತದಲ್ಲಿ ಸಹ ಇತ್ತು. ೧೮೮೧ರ ಮೊದಲು ಜನಗಣತಿಯಿಂದ ತೊಡಗಿ, ನಂತರದ ಎಲ್ಲಾ ಜನಗಣತಿಗಳಲ್ಲಿಯೂ ಹೀಗಿಯೇ ಪರಿಸ್ಥಿತಿ ಇತ್ತು. ೧೯೮೧ರಲ್ಲಿ ಮಾತ್ರ ಮಹಿಳೆಯರ ಪ್ರಮಾಣ ಸ್ವಲ್ಪ ಜಾಸ್ತಿ ಇತ್ತು.

೧೯೯೧ರ ಜನಗಣತಿಯಲ್ಲಿ ಮಹಿಳೆಯರ ಪ್ರಮಾಣ ಗಮನಾರ್ಹವಾಗಿ ಕಡಿಮೆಯಾಗಿದೆ ಎನಿಸಿದರೆ, ಜಗತ್ತಿನ ಬೇರೆಡೆ ಪರಿಸ್ಥಿತಿ ಭಿನ್ನವಾಗಿತ್ತು. ಬೇರೆ ಕಡೆ ೩ - ೫ ಶೇಕಡಾ ಮಹಿಳೆಯರ ಸಂಖ್ಯೆ ಹೆಚ್ಚಿತ್ತು. ಯೂರೋಪ್, ಅಮೆರಿಕಾ ಮತ್ತು ಜಪಾನ್‌ಗಳಲ್ಲಿ ೧೦೦ಸ್ತ್ರೀಯರಿಗೆ ೯೫ - ೯೭ ಪುರುಷರಿದ್ದರೆ ರಷ್ಯಾದಲ್ಲಿ ೮೮ರಷ್ಟು ಕಡಿಮೆ ಇದ್ದರು. (ಬಹುಶಃ ವಿವಿಧ ಯುದ್ಧಗಳಲ್ಲಿ ಪುರುಷರು ಮಡಿದ ಕಾರಣ ಈ ಸಂಖ್ಯೆ ಕಡಿಮೆಯಾಗಿದೆ.) ಆದರೆ ಭಾರತ ಮತ್ತು ಚೀಣಾಗಳಲ್ಲಿ ಇದಕ್ಕೆ ಭಿನ್ನವಾದ ಪರಿಸ್ಥಿತಿ ಇತ್ತು. ಸ್ತ್ರೀಯರಿಗಿಂತ ಶೇಕಡಾ ೬ ರಿಂದ ೮ ರಷ್ಟು ಹೆಚ್ಚು ಪುರುಷರ ಸಂಖ್ಯೆ ಈ ದೇಶಗಳಲ್ಲಿತ್ತು. ಈ ಎರಡೂ ದೇಶಗಳ ಸಮಾಜದಲ್ಲಿ ಮೊದಲಿನಿಂದಲೂ ಪುರುಷರಿಗೆ ಹೆಚ್ಚಿನ ಆದ್ಯತೆ.

ಭಾರತದ ಜನಸಂಖ್ಯೆಯ ೧/೪ ಭಾಗ ೨೦ ವರ್ಷಕ್ಕಿಂತಲೂ ಚಿಕ್ಕ ವಯಸ್ಸಿನ ಹುಡುಗಿಯರದ್ದಾಗಿದೆ. ಆದರೆ ಈ ವರ್ಗ ಆರೋಗ್ಯ, ಶಿಕ್ಷಣ ಹಾಗೂ ವಿವಿಧ ಪ್ರಗತಿಪರ ಕಾರ್ಯಕ್ರಮಗಳಲ್ಲಿ ತೀವ್ರ ನಿರ್ಲಕ್ಷ್ಯಕ್ಕೆ ಒಳಗಾಗಿದೆ ಎಂಬುದು ದುಃಖಕರ ವಿಚಾರ. ಸಾವಿರಾರು ಹೆಣ್ಣುಮಕ್ಕಳು ಜನಿಸುವ ಮೊದಲೇ, ತಾಯಿಯ ಗರ್ಭದಲ್ಲಿಯೇ ಕೊಲ್ಲಲ್ಪಟ್ಟಿದ್ದಾರೆ. ಏಕೆಂದರೆ ಹೆಚ್ಚಿನ ಸಮಾಜಗಳಲ್ಲಿ ತಮಗೆ ಮುಂದೆ ಬಹಳ ಖರ್ಚಿನ ಬಾಬ್ತಾಗುವ ಹೆಣ್ಣುಮಕ್ಕಳು ಹುಟ್ಟುವುದಕ್ಕಿಂತ ಮಕ್ಕಳೇ ಹುಟ್ಟದಿದ್ದರೂ ತೊಂದರೆಯಿಲ್ಲ – ಎಂಬ ಭಾವನೆ ಇದೆ.

ಯುನಿಸೆಫ್‌ನ ೧೯೦೧ರ ವರದಿಯ ಪ್ರಕಾರ ೪೦ ರಿಂದ ೫೦ ದಶಲಕ್ಷ ಹೆಣ್ಣುಮಕ್ಕಳು ಭಾರತದ ಜನಸಂಖ್ಯೆಯಲ್ಲಿ ಕಳೆದುಹೋಗಿದ್ದಾರೆ. ಈ ಪರಿಸ್ಥಿತಿ ಏಕೆಂದರೆ – ಆ ಹೆಣ್ಣುಮಕ್ಕಳು ಹುಟ್ಟುವ ಮೊದಲೇ ಅಥವಾ ಹುಟ್ಟಿದ ಕೂಡಲೇ ವಿವಿಧ ರೀತಿಯಲ್ಲಿ ಕೊಲ್ಲಲ್ಪಟ್ಟಿದ್ದಾರೆ. ಅನೈತಿಕ ಗರ್ಭಪಾತ ಹಾಗೂ ಹೆಣ್ಣುಮಕ್ಕಳನ್ನು ಕೊಲ್ಲುವ ವಿಚಾರದಲ್ಲಿ ಈಗ ಭಾರತವು ಜಗತ್ತಿನ ಮುಂಚೂಣಿಯಲ್ಲಿದೆ. ೧೯೯೭ರಲ್ಲಿ ಜಗತ್ತಿನ ೧೫ ದಶಲಕ್ಷ ಅನೈತಿಕ ಗರ್ಭಪಾತಗಳಲ್ಲಿ ೪ ದಶಲಕ್ಷಗಳಷ್ಟು ಭಾರತದಲ್ಲಿಯೇ ಜರುಗಿವೆ. ಇವುಗಳಲ್ಲಿ ಹೆಚ್ಚಿನವು ಹೆಣ್ಣುಮಗುವಿನ ಜನನವನ್ನು ಸಹಿಸದೇ ಆದಂತಹವುಗಳು.

ದೆಹಲಿಯ 'ಸಹೇಲಿ' ಎಂಬ ಸ್ವಾಯತ್ತ ಸಂಸ್ಥೆ, ೧೯೭೮ - ೮೨ರಲ್ಲಿ ಸುಮಾರು ೭೮,೦೦೦ದಷ್ಟು ಹೆಣ್ಣು ಭ್ರೂಣಗಳು ಹತ್ಯೆಯಾಗಿವೆ ಎಂದು ಅಂದಾಜಿಸಿದೆ. ಅದೇ ಸಂಸ್ಥೆಯ ವರದಿಯ ಪ್ರಕಾರ ಈ ಸಂಖ್ಯೆ ೧೯೮೬ - ೮೭ರಲ್ಲಿ ೩೦ರಿಂದ ೫೦ ಸಾವಿರ ಸ್ತ್ರೀಭ್ರೂಣಗಳು ಹತ್ಯೆಯಾಗಿವೆ. ೧೯೮೨ - ೯೨ರ ಮಧ್ಯೆ ಲಿಂಗ ತಪಾಸಣಾ ಕ್ಲಿನಿಕ್‌ಗಳು ಬಹಳಷ್ಟು ಹೆಚ್ಚಾದವು. ದೆಹಲಿಯ ೭ ಕ್ಲಿನಿಕ್‌ಗಳಲ್ಲಿಯೇ ೧೩,೦೦೦ ಲಿಂಗ ನಿರ್ಧರಿಸುವ ಪರೀಕ್ಷೆಗಳು ಜರುಗಿವೆ. ಈ ಅವಧಿಯಲ್ಲಿ ಲಿಂಗ ನಿರ್ಧರಿಸುವ ಪರೀಕ್ಷೆಗಳ ಬಗ್ಗೆ ವಿಪರೀತ ಪ್ರಚಾರವಿತ್ತು. ವೃತ್ತಪತ್ರಿಕೆ, ನಿಯತಕಾಲಿಕಗಳು,



ಬಸ್, ಟ್ರೈನ್‌ಗಳು ಹಾಗೂ ಊರಿನಲ್ಲಿ ದೊಡ್ಡ ದೊಡ್ಡ ಫಲಕಗಳು, ಕರಪತ್ರಗಳ ಮೂಲಕ ಬೇಡದ ಮಗುವನ್ನು ಸುಲಭ ಮತ್ತು ಸುರಕ್ಷಿತವಾಗಿ ಗರ್ಭಪಾತ ಮಾಡಿ ತೆಗೆಯಲಾಗುತ್ತದೆ ಎಂದು ಪ್ರಚಾರ ಮಾಡಲಾಯಿತು.

ಸ್ತ್ರೀ ಭ್ರೂಣ ಹತ್ಯೆಯನ್ನು ತಡೆಯಲು ಆರಂಭದ ಪ್ರಯತ್ನಗಳು ೧೯ನೇ ಶತಮಾನದಲ್ಲಿಯೇ ಬ್ರಿಟಿಷರ ಆಳ್ವಿಕೆಯಲ್ಲಿನ ಭಾರತದಲ್ಲಿಯೇ ಆಗಿದ್ದವು. ಆದರೆ ಈಗ ಆ ಸಮಸ್ಯೆ ಬಹಳಷ್ಟು ತಿರುವು ತೆಗೆದುಕೊಂಡು ಬೇರೆಯದೇ ರೀತಿಯಲ್ಲಿ ಸಮಸ್ಯೆಯಾಗಿ ಪರಿಣಮಿಸಿದೆ. ಗರ್ಭಪಾತದ ಬಗ್ಗೆ ಕಠಿಣವಾದ ಕಾನೂನು ಈ ದೇಶದಲ್ಲಿದ್ದರೂ, ಈಗ ಜರುಗುತ್ತಿರುವ ಸ್ತ್ರೀ ಭ್ರೂಣ ಹತ್ಯೆಯ ಹಿನ್ನೆಲೆಯಲ್ಲಿ ಈ ಕಾನೂನನ್ನು ಪುನರ್ ವಿಮರ್ಶೆ ಮಾಡುವುದು ಅನಿವಾರ್ಯವಾಗಿದೆ.

ಭಾರತೀಯ ನ್ಯಾಯ ಸಂಹಿತೆಯ ರೀತ್ಯಾ, ಗರ್ಭಪಾತವನ್ನು ಕಾನೂನಿನ ಅಡಿಯಲ್ಲಿ ತರಲಾಯಿತು. ತಾಯಿಯ ಜೀವವನ್ನು ಉಳಿಸುವ ಉದ್ದೇಶಕ್ಕಿಂತ ಬೇರೆಯ ಉದ್ದೇಶಕ್ಕೆ ಜರುಗಿಸುವ ಗರ್ಭಪಾತ ಕಾನೂನಿನ ರೀತ್ಯಾ ಅಪರಾಧ ಎಂದು ಘೋಷಿಸಲಾಯಿತು. ಅಂತಹ ಅಪರಾಧಕ್ಕೆ ಆ ಮಹಿಳೆ ಹಾಗೂ ವೈದ್ಯರು ಇಬ್ಬರಿಗೂ ೭ ವರ್ಷಗಳ ಕಠಿಣ ಶಿಕ್ಷೆ, ಎಂದು ಸಾರಲಾಯಿತು. ಗರ್ಭದ ೨೦ನೇ ವಾರದ ನಂತರದ ಗರ್ಭಪಾತ ಮಾಡಿದರೆ ಶಿಕ್ಷೆಯನ್ನು ೧೦ ವರ್ಷಗಳಿಗೆ ವಿಸ್ತರಿಸಲಾಯಿತು. ಈ ಕಾನೂನು ಬಹಳ ಕಠಿಣತರದ ಕಾನೂನು ಆಗಿತ್ತು. ಹಾಗಾಗಿ ಬಹಳಷ್ಟು 'ಹಿಂಬಾಗಿಲ ಗರ್ಭಪಾತ'ಗಳು ಜರುಗತೊಡಗಿದವು. ಇದು ಮಹಿಳೆಯರಿಗೆ ವಿವಿಧ ರೀತಿಯ ಆರೋಗ್ಯ ಸಮಸ್ಯೆಯನ್ನು ಉಂಟುಮಾಡಿತು. ಅದೇ ಹೊತ್ತಿಗೆ ಜನಸಂಖ್ಯೆ ನಿಯಂತ್ರಿಸುವ ಬಗ್ಗೆಯೂ ಬಹಳಷ್ಟು ಹಾಹಾಕಾರ ಎದ್ದಿತು. ಹಾಗಾಗಿ ಈ ಕಾನೂನನ್ನು ಪುನರ್ವಿಮರ್ಶಿಸುವ ಅನಿವಾರ್ಯತೆ ಉಂಟಾಗಿ, ೧೯೭೧ರಲ್ಲಿ ಪುನರ್ವಿಮರ್ಶಿತ ಎಂ.ಟಿ.ಪಿ (MTP) ಕಾನೂನು ಜಾರಿಗೆ ಬಂದಿತು.

ಈ ಕಾನೂನು ಗರ್ಭಿಣಿ ಸ್ತ್ರೀಯ ಹಕ್ಕನ್ನು ಉಳಿಸಲು ಜಾರಿಗೆಬಂದಿತು. ಸ್ತ್ರೀಯ ದೈಹಿಕ ಅಥವಾ ಮಾನಸಿಕ ಆರೋಗ್ಯಕ್ಕೆ ತೀವ್ರ ರೀತಿಯ ತೊಂದರೆ ಉಂಟಾದಾಗ, ಜನನ ನಿಯಂತ್ರಣದಲ್ಲಿ ಆದ ವೈಫಲ್ಯ, ಅತ್ಯಾಚಾರದಿಂದ ಉಂಟಾದ ಗರ್ಭ – ಈ ಎಲ್ಲದರ ನಿವಾರಣೆಗೆ ಮಹಿಳೆಯರಿಗೆ ಈ ಕಾನೂನಿನ ರೀತ್ಯಾ ಗರ್ಭಪಾತ ಮಾಡಿಸಿಕೊಳ್ಳಲು ಅವಕಾಶ ನೀಡಲಾಗುತ್ತದೆ.

ಈ ಕಾನೂನಿನ ರೀತ್ಯಾ ವೈದ್ಯರು ಮೇಲಿನ ಸಂದರ್ಭಗಳಿದ್ದರೆ ೧೨ ವಾರಗಳ ಒಳಗೆ ಗರ್ಭಪಾತ ಜರುಗಿಸಬಹುದು. ಇಬ್ಬರು ವೈದ್ಯರು ಸೇರಿ ಒಂದೇ ಅಭಿಪ್ರಾಯಕ್ಕೆ ಬಂದರೆ ೧೨ - ೨೦ ವಾರಗಳಲ್ಲಿಯೂ ಗರ್ಭಪಾತ ಜರುಗಿಸಬಹುದು. ಆದರೆ ೨೦ ವಾರಗಳ ನಂತರ ಜರುಗಿಸುವುದಾದರೆ ತಾಯಿಯ ಜೀವ ಉಳಿಸುವ ಸಂದರ್ಭ ಇದ್ದರೆ ಮಾತ್ರ ಜರುಗಿಸಬೇಕು. ಹಾಗಾಗಿ ೨೦ ವಾರಗಳ ಒಳಗಿನ ಗರ್ಭಪಾತ ಕಾನೂನಿನ ರೀತ್ಯಾ ಮಾಡಬಹುದಾದ್ದರಿಂದ, ಅದನ್ನು ನಿಷೇಧಿಸುವುದು ಕಷ್ಟವಾಯಿತು. ಹಾಗಾಗಿ ಈ ಎಂ.ಟಿ.ಪಿ. (MTP) ಕಾನೂನಿನ ದುರ್ಬಳಕೆಯನ್ನು ತಡೆಗಟ್ಟಲು ಬೇರೆಯೇ ಕಾನೂನನ್ನು ತರಬೇಕು ಎಂದು ಹಲವಾರು ತಜ್ಞರು ಈ ಹಂತದಲ್ಲಿ ಅಭಿಪ್ರಾಯಪಟ್ಟರು.

> ಈಗ ನಮ್ಮ ದೇಶದಲ್ಲಿ ಹಿಂದಿನ ಕೌಟುಂಬಿಕ ವ್ಯವಸ್ಥೆ ಇಲ್ಲ. ದೊಡ್ಡ ಅವಿಭಕ್ತ ಕುಟುಂಬಗಳು ಒಡೆದು ಸಣ್ಣ ಸಣ್ಣ ಕುಟುಂಬಗಳಾಗಿಹೋದರೂ ಗಂಡುಮಕ್ಕಳ ಬಗೆಗಿನ ವ್ಯಾಮೋಹ ಎಷ್ಟಕ್ಕೂ ಕಡಿಮೆಯಾಗಿಲ್ಲ. ಎಷ್ಟೋ ಕುಟುಂಬಗಳಲ್ಲಿ ಗಂಡುಮಕ್ಕಳು ಹುಟ್ಟುವುದೇ ಒಂದು ವರ ಎಂದು ಭಾವಿಸುತ್ತಾರೆ. ಒಂದು ಗಂಡುಮಗುವಾದರೆ ಹೆಚ್ಚಿನ ಸಂತೋಷಪಟ್ಟರೆ ಎರಡು ಗಂಡುಮಕ್ಕಳಾದರೆ ಜೀವನದಲ್ಲಿ ಬಹುವಾಗಿ ಸಂತೋಷ ಸಂಗತಿ ಎಂದು ತಿಳಿಯುತ್ತಾರೆ. ಏಕೆಂದರೆ, ಎರಡರಲ್ಲಿ ಒಬ್ಬನು ಏನೋ ದುರ್ದೈವದಿಂದ ಮಡಿದರೂ, ಇಳಿ ವಯಸ್ಸಿನಲ್ಲಿ ತಂದೆ ತಾಯಿಯರನ್ನು ನೋಡಿಕೊಳ್ಳಲು ಇನ್ನೊಬ್ಬ ಮಗನಿದ್ದಾನಲ್ಲ – ಎಂಬ ಸಮಾಧಾನ. ಹಾಗಾಗಿ ಸೊಸೆಯಂದಿರ ಮೇಲೆ ಗಂಡನ್ನೇ ಹೆರಬೇಕೆಂಬ ಅನಿವಾರ್ಯ ಒತ್ತಡವನ್ನು ತರಲಾರಂಭಿಸುತ್ತಾರೆ.

೧೯೭೪ರ ಹೊತ್ತಿಗೆ ದೆಹಲಿಯ ಅಖಿಲ ಭಾರತ ವೈದ್ಯಕೀಯ ಸಂಸ್ಥೆ (AIIMS) ಒಂದು ಸ್ಯಾಂಪಲ್ ಸರ್ವೆಗಾಗಿ ಆಮ್ನಿಯೋಸಿಂಥಸೀಸ್ ಪರೀಕ್ಷೆಯನ್ನು ಕೈಗೊಂಡಿತು. ತಾಯಿಯ ಗರ್ಭದಲ್ಲಿರುವ ಮಗುವಿನ ವಿವಿಧ ಊನಗಳನ್ನು ಕಂಡುಹಿಡಿಯುವುದು ಈ ಪರೀಕ್ಷೆಯ ಉದ್ದೇಶವಾಗಿತ್ತು. ICMR ಸಂಸ್ಥೆ ಆ ನಂತರ ಈ ಪರೀಕ್ಷೆಗಳನ್ನು ಕೈಗೊಳ್ಳುವುದನ್ನು ನಿಲ್ಲಿಸಿಬಿಟ್ಟಿತು. ಆದರೆ ಗರ್ಭಸ್ಥ ಮಗುವಿನ ಲಿಂಗ ಗೊತ್ತಾಗುತ್ತದೆ ಎಂಬ ಅಂಶ ಆ ವೇಳೆಗೆ ತಿಳಿದುಬಿಟ್ಟಿದ್ದರಿಂದ, ೧೯೭೯ರ ಹೊತ್ತಿಗೆ ಲಿಂಗ ತಿಳಿಸುವ ಕ್ಲಿನಿಕ್‌ಗಳು ಪಂಜಾಬಿನ ಅಮೃತಸರದಲ್ಲಿ ಆರಂಭಗೊಂಡವು. ಹಲವಾರು ಸ್ತ್ರೀಪರ ಸಂಘಟನೆಗಳು ಈ ಹಂತದಲ್ಲಿ ತೀವ್ರ ವಿರೋಧ ವ್ಯಕ್ತಪಡಿಸಿದರೂ ಯಾವ ಪ್ರಯೋಜನ ಆಗಲಿಲ್ಲ. ಎಂ.ಟಿ.ಪಿ. (MTP) ಕಾನೂನಿನಲ್ಲಿ ಮಗುವಿನ ಊನ ಕಂಡುಹಿಡಿಯಲು ಆಮ್ನಿಯೋಸಿಂಥಸೀಸ್ ಪರೀಕ್ಷೆ ಮಾಡಬಹುದು ಎಂದಿದ್ದರಿಂದ – ಅದರ ದುರ್ಬಳಕೆ ಆರಂಭವಾಯಿತು. ಆಗ ೧೪-೧೬ ವಾರಗಳ ಮಧ್ಯೆ ಈ ಪರೀಕ್ಷೆ ಜರುಗಿಸಿ, ೨೦ ವಾರಗಳ ಒಳಗೆ ಗರ್ಭಪಾತ ಮಾಡಲಾರಂಭಿಸಿದರು.

ಈ ದುರ್ಬಳಕೆ ತಡೆಯಲು ಯಾವುದೇ ಸೂಕ್ತ ಕಾನೂನು ಇಲ್ಲದಿದ್ದಾಗ ೧೯೮೫ಕ್ಕಿಂತ ಮೊದಲು, ಕೇಂದ್ರ ಸರ್ಕಾರ, ಸರ್ಕಾರಿ ಸಂಸ್ಥೆಗಳಲ್ಲಿ ಲಿಂಗ ಗುರುತಿಸುವ ಪರೀಕ್ಷೆಯನ್ನು ದುರುಪಯೋಗಗೊಳಿಸುವುದನ್ನು ನಿಷೇಧಿಸಿ ಸುತ್ತೋಲೆ ಹೊರಡಿಸಲು ಮಾತ್ರ ಶಕ್ತವಾಯಿತು. ೧೯೮೬ರಲ್ಲಿ ಮುಂಬೈನ Forum Against Sex Determination and Sex Pre-Selection (FASDSP) ಎಂಬ ಸಾಮಾಜಿಕ ಸಂಸ್ಥೆ ಈ ದುರುಪಯೋಗದ ವಿರುದ್ಧ ಆಂದೋಲನ ಆರಂಭಿಸಿತು. ಈ ಸಂಸ್ಥೆಯ ತೀವ್ರ ಒತ್ತಡಕ್ಕೆ ಮಣಿದು ಮಹಾರಾಷ್ಟ್ರ ಸರ್ಕಾರ ೧೯೮೮ರಲ್ಲಿ Maharashtra Regulation of Pre-natal Diagnostic Techniques Act 1988 ಎಂಬ ಕಾನೂನನ್ನು ಜಾರಿಗೆ ತಂದಿತು. ಇದು ದೇಶದ ಮೊದಲ ಈ ರೀತಿಯ ಕಾನೂನಾಗಿ ಪರಿಣಮಿಸಿತು. ಮೇ ೧೯೯೪ರಲ್ಲಿ ಇಂತಹುದೇ ಕಾನೂನು ಪಂಜಾಬಿನಲ್ಲಿಯೂ ಜಾರಿಗೆ ಬಂದಿತು. ಆದರೆ ಸೆಪ್ಟೆಂಬರ್ ೧೯೯೪ರಲ್ಲಿ ಕೇಂದ್ರ ಸರ್ಕಾರವೇ ಇಂತಹ ಕಾನೂನನ್ನು ಜಾರಿಗೆ ತಂದಿದ್ದರಿಂದ ಈ ಎರಡೂ ಕಾನೂನಗಳು ಅಸ್ತಿತ್ವ ಕಳೆದುಕೊಂಡವು. ದೇಶಾದ್ಯಂತ ಜಾರಿಗೆ ಬಂದ ಕೇಂದ್ರ ಸರ್ಕಾರದ ಕಾನೂನಿನ ರೀತ್ಯಾ ಕಾನೂನಿಗೆ ವಿರುದ್ಧವಾಗಿ ಈ ಪರೀಕ್ಷೆ ಜರುಗಿಸುವವರಿಗೆ ೩ ವರ್ಷ ಜೈಲು ಮತ್ತು ೧೦ ಸಾವಿರ ರೂ.ಗಳ ದಂಡ ಎಂದು ಸಾರಲಾಯಿತು. ಆರಂಭದಲ್ಲಿ ಈ ಕಾನೂನು ಜಾರಿಗೆ ತರುವುದು ವಿವಿಧ ಕಾರಣಗಳಿಂದ ಕಷ್ಟವಾಯಿತು. ೧೯೯೭ರ ಹೊತ್ತಿಗೆ ಸರಿಯಾದವರ ಮೇಲೆ ಜವಾಬ್ದಾರಿಯನ್ನು ಹೊರಿಸಿದ್ದರಿಂದ ಈ ಕಾನೂನು ವಸ್ತುಶಃ ಜಾರಿಗೆ ಬಂದಿತು.

ಆದರೆ ಕಾನೂನು ಜಾರಿಗೆ ಬಂದರೆ ಸಮಸ್ಯೆ ಪರಿಹಾರವಾಯಿತೆ? ಖಂಡಿತಾ ಇಲ್ಲ. ಎಂತಹ ಕಾನೂನನ್ನೂ ತಪ್ಪಿಸುವ ಎಲ್ಲ ಉಪಾಯಗಳನ್ನು ಹುಡುಕುವ ನಮ್ಮ ಜನತೆ, ಈ ಕಾನೂನಿಗೆ ಅದೇ ಪರಿಸ್ಥಿತಿ ತಂದರು.

ಜನಗಣತಿಯ ಅಂಕಿಸಂಖ್ಯೆಗಳ ಪ್ರಕಾರ, ಹುಟ್ಟುವ ಮಕ್ಕಳ ಸಂಖ್ಯೆ ಅಧಿಕವಾಗುತ್ತಿದೆ. ಆದರೆ ಗಂಡು - ಹೆಣ್ಣುಗಳ ನಿಪಾತದಲ್ಲಿ ವ್ಯತ್ಯಾಸವಾಗುತ್ತಿದೆ. ಎಲ್ಲ ಸಮಾಜದಲ್ಲಿ ೧೦೦ ಹೆಣ್ಣುಮಕ್ಕಳಿಗೆ ೧೦೫ ಗಂಡು ಮಕ್ಕಳು ಹುಟ್ಟುತ್ತಿದ್ದಾರೆ. ಇದು ಅಂತರರಾಷ್ಟ್ರೀಯ ಗಂಡು-ಹೆಣ್ಣುಗಳ ನಿಪಾತ. ಅಲ್ಲದೆ ಗಂಡುಮಕ್ಕಳು ಆರಂಭದಲ್ಲಿ ಮರಣಿಸುವುದು ಹೆಣ್ಣುಮಕ್ಕಳಿಗಿಂತ ಜಾಸ್ತಿ. ಈ ಸಂಖ್ಯೆ ಭಾರತದಲ್ಲಿ ೧೯೨೧ರಲ್ಲಿ ೧೦೪.೭ ಆಗಿತ್ತು. ೧೯೭೧ರಲ್ಲಿ ೧೦೭.೫ ಹಾಗೂ ೧೯೯೧ರಲ್ಲಿ ೧೦೭.೯ ಆಗಿತ್ತು. ಹಾಗಾಗಿ ಈ ಸಂಖ್ಯೆ ಗಮನಾರ್ಹವಾಗಿ ಇಳಿಮುಖವಾಗುತ್ತಾ ೧೯೦೧ರ ೪ ದಶಲಕ್ಷದಿಂದ ೧೯೯೧ರಲ್ಲಿ ೩೨ ದಶಲಕ್ಷಕ್ಕೆ ಬಂದು ತಲುಪಿದೆ. ೧೯೦೧ರಲ್ಲಿ ೧೦೨೯ ಪುರುಷರಿಗೆ ೧೦೦೦ ಸ್ತ್ರೀಯರಿದ್ದರೆ, ಇದೇ ಸಂಖ್ಯೆ ೧೯೯೧ರಲ್ಲಿ ೧೦೭೯

ಪುರುಷರಿಗೆ ೧೦೦೦ ಸ್ತ್ರೀಯರ ಸಂಖ್ಯೆಗೆ ತಲುಪಿದೆ. ೨೦೦೧ರಲ್ಲಿ ೧೦೦೦ ಪುರುಷರಿಗೆ ೯೩೩ ಸ್ತ್ರೀಯರ ಸಂಖ್ಯೆ ಆಗಿದೆ.

ಈ ರೀತಿಯಲ್ಲಿ ಸ್ತ್ರೀಯರ ಸಂಖ್ಯೆಯ ಗಮನಾರ್ಹ ಇಳಿಮುಖ ನಗರ ಹಾಗೂ ಪಟ್ಟಣದ ಪ್ರದೇಶಗಳಲ್ಲಿಯೇ ಹೆಚ್ಚು ಕಂಡುಬಂದಿದೆ. ಬಹುಶಃ ವಿವಿಧ ಕೆಲಸ, ಉದ್ಯೋಗಗಳಿಗೆ ಗ್ರಾಮಗಳಿಂದ ನಗರಗಳಿಗೆ ಪುರುಷರು ವಲಸೆ ಬರುವುದೂ ಒಂದು ಕಾರಣವಾಗಿರಬಹುದು. ಆದರೆ ಈಗೀಗ ಈ ಅಸಮತೋಲನ ಗ್ರಾಮೀಣ ಪ್ರದೇಶಕ್ಕೂ ಹಬ್ಬಿರುವುದು ಕಂಡುಬರುತ್ತದೆ. ಭಾರತದಲ್ಲಿ ಪ್ರತಿವರ್ಷ ಹುಟ್ಟುವ ೧.೨ ಕೋಟಿ ಹೆಣ್ಣುಮಕ್ಕಳಲ್ಲಿ ೩೦ ಲಕ್ಷದಷ್ಟು ಬಾಲಕಿಯರು ತಮ್ಮ ೧೫ನೇ ವರ್ಷ ತಲುಪುವುದಿಲ್ಲ. ೪ ವರ್ಷದ ಒಳಗಿನವರಲ್ಲಿ ೧೯೮೧ರಲ್ಲಿ ೧೦೦೦ ಹುಡುಗರಿಗೆ ೯೬೧ ಹುಡುಗಿಯರಿದ್ದರೆ ಅದೇ ಪ್ರಮಾಣ ೧೯೯೧ರಲ್ಲಿ ೯೫೫ಕ್ಕೆ ಇಳಿದಿದೆ. ೧೯೯೧ರ ಜನಗಣತಿಯ ಪ್ರಕಾರ ಭಾರತದ ೪೨ ಜಿಲ್ಲೆಗಳಲ್ಲಿ ಮಾತ್ರ ಹುಡುಗಿಯರ ಪ್ರಮಾಣ ಸ್ವಲ್ಪ ಜಾಸ್ತಿಯಿತ್ತು. ಆದರೆ ೩೧ ಜಿಲ್ಲೆಗಳಲ್ಲಿ ೧೦೦೦ ಹುಡುಗರಿಗೆ ೯೦೦ ಹುಡುಗಿಯರಿಗಿಂತ ಕಡಿಮೆ ಹುಡುಗಿಯರಿದ್ದರು. ಇದು ತುಂಬಾ ಗಮನಾರ್ಹವಾದುದು.

ಈ ರೀತಿಯ ಹುಡುಗಿಯರ ಅಥವಾ ಸ್ತ್ರೀಯರ ಸಂಖ್ಯೆ ಕಡಿಮೆಯಾಗಲು 'ಸ್ತ್ರೀ ಭ್ರೂಣ ಹತ್ಯೆ' ಮುಖ್ಯ ಕಾರಣ ಎಂಬುದರಲ್ಲಿ ಅನುಮಾನವೇ ಇಲ್ಲ. ವಿವಿಧ ಸಾಮಾಜಿಕ ಮತ್ತು ಆರ್ಥಿಕ ಕಾರಣಗಳಿಗಾಗಿ ತಾಯಿಯಾದ ಸ್ತ್ರೀಯೇ ತನ್ನ ಗರ್ಭದಲ್ಲಿರುವ ಹೆಣ್ಣು ಭ್ರೂಣದ ಹತ್ಯೆಗೆ ಮುಂದಾಗುತ್ತಾಳೆ ಎಂಬುದು ವಿಪರ್ಯಾಸ. ಈ ಪ್ರಕ್ರಿಯೆ ಕ್ರಮೇಣವಾಗಿ ಕಡಿಮೆಯಾಗಬೇಕೇ ಹೊರತು, ಕಾನೂನಿನಿಂದ ಇದನ್ನು ತಡೆಗಟ್ಟುವುದು ಸಾಧ್ಯವಿಲ್ಲ ಎಂದು ಸಾಬೀತಾಗಿದೆ.

ಆದರೆ ಆಫ್ರಿಕಾದ ಇಥಿಯೋಪಿಯಾ ದೇಶದಲ್ಲಿ ಸ್ತ್ರೀ ಜನನಾಂಗವನ್ನು ಕತ್ತರಿಸಿ ತೆಗೆಯುವಂತಹ ಬರ್ಬರ ಕೃತ್ಯ ಈಗಲೂ ನಡೆಯುತ್ತಿದೆ. ೮-೯ ವರ್ಷದ ಹೆಣ್ಣು ಮಕ್ಕಳನ್ನು, ೬-೭ ಜನ ಸ್ತ್ರೀಯರು ಹಿಡಿದುಕೊಡು ಯಾವುದೇ ರೀತಿಯ ಅರಿವಳಿಕೆ, ಔಷಧಿ ಕೊಟ್ಟು (ನೋವು ತೆಗೆಯಲು) ಕೊಳ್ಳದೆ, ತುಂಬಾ ಹೀನಾಯವಾಗಿ ಸ್ತ್ರೀ ಜನನಾಂಗವನ್ನು ಚಾಕು, ಕತ್ತಿಯಿಂದ ಕತ್ತರಿಸುತ್ತಾರೆ. ಈ ಹುಡುಗಿಯರು ತಮಗೆ ಏನಾಗುತ್ತಿದೆ ಎಂಬುದೇ ಗೊತ್ತಾಗದೆ ತೀವ್ರ ನೋವಿನಲ್ಲಿ ಎಚ್ಚರ ತಪ್ಪುತ್ತಾರೆ. ಇಂತಹ ಅಮಾನವೀಯ ರಾಕ್ಷಸೀ ಕೃತ್ಯ ಈಗಲೂ ನಡೆಯುತ್ತಿದೆ ಎಂಬುದು ಮನುಕುಲಕ್ಕೇ ಅವಮಾನ.

ಡಾ॥ ಎಚ್. ಎಸ್. ಮೋಹನ್
ವಿಜಯ ಕಣ್ಣಿನ ಚಿಕಿತ್ಸಾಲಯ, ಸಾಗರ

## ಸಾದರ ಸ್ವೀಕಾರ

**ಬುದ್ಧಿಶಕ್ತಿ** — ಡಾ॥ ಮಹಾಬಲೇಶ್ವರ ರಾವ್
ಪುಟ : ೬೪ — ಬೆಲೆ : ರೂ. ೨೨

**ಕಣ್ಣು ಹೊಸ ನೋಟ** — ಡಾ॥ ಎಚ್. ಎಸ್. ಮೋಹನ್
ಪುಟ : ೧೨೪ — ಬೆಲೆ : ರೂ. ೫೦

**ಕ್ಲೋನಿಂಗ್** (ವಿಜ್ಞಾನ, ನೈತಿಕತೆ, ವಿವಾದ)
ಡಾ॥ ಎಚ್. ಎಸ್. ಮೋಹನ್
ಪುಟ : ೭೬ — ಬೆಲೆ : ರೂ. ೩೦

**ಹಲ್ಲಿನ ರಕ್ಷಣೆ** — ಡಾ॥ ಗುರುರಾಜ ಅರಕೇರಿ
ಪುಟ : ೨೮೦ — ಬೆಲೆ : ರೂ. ೧೦೦

**ಕ್ಯಾನ್ಸರ್ ಯಾರಿಗೆ ಮತ್ತು ಏಕೆ ಬರುತ್ತದೆ ?**
ಪ್ರೊ॥ ಎ. ರಮೇಶ ರಾವ್
ಪುಟ : ೧೪೪ — ಬೆಲೆ : ರೂ. ೬೫

**ಮಹಿಳಾ ಲೋಕ** (ಹೊಸತು ವಾಚಿಕೆ) — ಸಂ. : ನೇಮಿಚಂದ್ರ
ಪುಟ : ೧೮೪ — ಬೆಲೆ : ರೂ. ೭೫

**ವಿಚಾರ ಸಂಪತ್ತು** (ಹೊಸತು ವಾಚಿಕೆ)
ಸಂ. : ಕೆ. ಎಲ್. ಗೋಪಾಲಕೃಷ್ಣ ರಾವ್
ಪುಟ : ೧೮೮ — ಬೆಲೆ : ರೂ. ೭೫

**ಆಯ್ದ ಸಂಪಾದಕೀಯಗಳು** (ಹೊಸತು ವಾಚಿಕೆ)
ಸಂ. : ಡಾ॥ ಎನ್. ಗಾಯತ್ರಿ
ಪುಟ : ೧೭೬ — ಬೆಲೆ : ರೂ. ೭೫

ಮೇಲಿನ ಎಂಟು ಪುಸ್ತಕಗಳ ಪ್ರಕಾಶಕರು
**ನವಕರ್ನಾಟಕ ಪಬ್ಲಿಕೇಷನ್ಸ್ ಪ್ರೈ. ಲಿ.**, ಎಂಬೆಸಿ ಸೆಂಟರ್, ಕ್ರೆಸೆಂಟ್ ರಸ್ತೆ, ಬೆಂಗಳೂರು - ೫೬೦ ೦೦೧

**ಕನಸಿನ ಹೊಸ ಅಧ್ಯಾಯ** (ಕಥಾ ಸಂಕಲನ)
ಸಂ. : ವಿಜಯಕಾಂತ ಪಾಟೀಲ
ಪುಟ : ೯೬ — ಬೆಲೆ : ರೂ. ೪೦
**ಸುಮುಖ ಪ್ರಕಾಶನ**, ೧೭೪ಇ/೨೮, ೧ನೇ ಮಹಡಿ, ೧ನೇ ಮುಖ್ಯರಸ್ತೆ, ವಿದ್ಯಾರಣ್ಯನಗರ, ಮಾಗಡಿ ರಸ್ತೆ, ಟೋಲ್‌ಗೇಟ್, ಬೆಂಗಳೂರು - ೫೬೦ ೦೨೩

**ವಚನ ನಿವೇದನೆ** — ಸಿ. ಪಿ. ಕೆ.
ಪುಟ : ೬೪ — ಬೆಲೆ : ರೂ. ೬೦

**ತೊಟ್ಟುಗಳು** (ಹನಿಗವಿತೆ) — ಸಿ. ಪಿ. ಕೆ.
ಪುಟ : ೫೨ — ಬೆಲೆ : ರೂ. ೫೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಚಿತ್ರಭಾನು ಪ್ರಕಾಶನ**, ೨೬೫/೧೯, 'ಭಾರತಿ', ೬ನೇ ಕ್ರಾಸ್, ೪ನೇ ಮೇನ್, ವಿನಾಯಕನಗರ, ಮೈಸೂರು - ೧೨

**ನವನೀತ** (ಚಿಂತನ ಬರಹಗಳು) — ಸಿ. ಪಿ. ಕೆ.
ಪುಟ : ೭೬ — ಬೆಲೆ : ರೂ. ೫೦
**ಸಂವಹನ**, ೧೨/೧ಎ, ಈವನಿಂಗ್ ಬಜಾರ್ ಹಿಂಭಾಗ, ಶಿವರಾಂ ಪೇಟೆ, ಮೈಸೂರು - ೫೭೦ ೦೦೧

**ಕನ್ನಡ ಸ್ವಪ್ನವಾಸವದತ್ತ** (ನಾಟಕ) — ಸಿ. ಪಿ. ಕೆ.
ಪುಟ : ೬೬ — ಬೆಲೆ : ರೂ. ೩೦
**ಪ್ರತಿಭಾ ಪ್ರಕಾಶನ**, ಗೋಕುಲಂ ೩ನೇ ಹಂತ, ಮೈಸೂರು-೨

**ಚೆಲುವ ಕನ್ನಡ ನಾಡು** (ಮಕ್ಕಳ ಸಚಿತ್ರ ಕವನಗಳು)
ಎ. ಕೆ. ರಾಮೇಶ್ವರ
ಪುಟ : ೬೪ — ಬೆಲೆ : ರೂ. ೪೫

**ಸಕ್ಕರೆಯ ಮಳಲು** (ವಿಮರ್ಶೆ) — ಎ. ಕೆ. ರಾಮೇಶ್ವರ
ಪುಟ : ೧೨೮ — ಬೆಲೆ : ರೂ. ೮೫

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಕವಿರಾಜಮಾರ್ಗ ಪ್ರಕಾಶನ**, ಮಾತೋಶ್ರೀ ಗೋದು ತಾಯಿ ನಗರ, ಜೇವರ್ಗಿ ರಸ್ತೆ, ಗುಲಬರ್ಗಾ - ೫೮೫ ೧೦೨

**ಸಾಧಕ ಜೀವಿ – ಗುಡ್ಲಮನಿ** (ಜೀವನ ಚರಿತ್ರೆ)
ಡಾ॥ ಅಶೋಕ ನರೋಡೆ
ಪುಟ : ೧೨೪ — ಬೆಲೆ : ರೂ. ೫೦
**ಅಪೂರ್ವ ಪ್ರಕಾಶನ**, ೧೭, ಬಸವನಗರ, ಮಹಾಲಿಂಗಪುರ - ೫೮೭ ೩೧೨

**ಅನುರಾಗ** (ಕವನ ಸಂಕಲನ) ಶಾಂತಾರಾಮ ನಾಯಕ, ಹಿಚಕಡ
ಪುಟ : ೮೦ — ಬೆಲೆ : ರೂ. ೫೦
ಜನದೇವ ಪ್ರಕಾಶನ, ಹಿಚಕಡ, ಅಂಕೋಲ, ಉ.ಕ. ಜಿಲ್ಲೆ

**ನಾಟಕ ನೋಡು ಬಾ ಪ್ರೇಕ್ಷಕ** (ಲೇಖನಗಳು)
ಪಾರ್ವತಿ ಜಿ. ಐತಾಳ್
ಪುಟ : ೧೨೪ — ಬೆಲೆ : ರೂ. ೯೦
ಎಸ್.ಆರ್.ಎ.ಎಂ.ಎಚ್. ಪ್ರಕಾಶನ, ಕೋಟೇಶ್ವರ-೫೭೬ ೨೨೨

**ಅರೆಖಾಸಗಿ** (ಸ್ಮೃತಿ ಚಿತ್ರಣಗಳು) — ವಿಷ್ಣು ನಾಯ್ಕ
ಪುಟ : ೧೯೦ — ಬೆಲೆ : ರೂ. ೧೦೦
**ಶ್ರೀ ರಾಘವೇಂದ್ರ ಪ್ರಕಾಶನ**, ಅಂಬಾರಕೊಡ್ಲ, ಅಂಕೋಲಾ

**ಡಾ. ದೇವೇಂದ್ರಕುಮಾರ ಹಕಾರಿ ಅವರ ಸಾಹಿತ್ಯಿಕ ಸಾಧನೆ**
ಡಾ॥ ಹರಿಲಾಲ ಪವಾರ
ಪುಟ : ೧೦೧ — ಬೆಲೆ : ರೂ. ೫೦

**ಬೆಂಕಿಯಲ್ಲಿ ಕಮರಿದ ಹೂವು ಹೂನಾಸತಿ**
ಡಾ॥ ಹರಿಲಾಲ ಪವಾರ
ಪುಟ : ೭೫ — ಬೆಲೆ : ರೂ. ೫೦

ಮೇಲಿನ ಎರಡು ಪುಸ್ತಕಗಳ ಪ್ರಕಾಶಕರು
**ಪ್ರೀತಮ್ ಪ್ರಕಾಶನ**, ಧಾರವಾಡ - ೫೮೦ ೦೦೩

**ಸಾತ್ವಿಕ ಸಾಹಿತಿ ಡಾ॥ ಬೆಟಗೇರಿ ಕೃಷ್ಣಶರ್ಮ** (ಆನಂದಕಂದ)
ಪ್ರೊ॥ ಜ್ಯೋತಿ ಹೊಸೂರ
ಪುಟ : ೭೨ — ಬೆಲೆ : ರೂ. ೪೦
**ಕಾಲಗತಿ ಪ್ರಕಾಶನ**, ರಾಯಬಾಗ, ಬೆಳಗಾವಿ

**ಅರ್ಥಪೂರ್ಣ ಹೆಸರುಗಳು** — ನರ್ಮದಾ ಎನ್. ಪ್ರಭು
ಪುಟ : ೧೦೨ — ಬೆಲೆ : ರೂ. ೨೦

**ಕೂಸಪ್ಪನ ಕುಸು ಕುಸು** (ಹಾಸ್ಯ ಬರಹಗಳ ಸಂಕಲನ)
ರಾಘವೇಂದ್ರ ಉಡುಪಿ
ಪುಟ : ೧೦೪ — ಬೆಲೆ : ರೂ. ೪೦

**ಈ ಕ್ಷಣ ನಮ್ಮದು** (ಕವನ ಸಂಕಲನ) — ವಿ. ರಮಾ ಕಾರಂತ
ಪುಟ : ೮೮ — ಬೆಲೆ : ರೂ. ೪೦

**ಆಕ್ಯೂಪ್ರೆಶರ್** — ಎ. ರಾಮ ನ್ಯಾಕ್ ಪುತ್ತೂರು
ಪುಟ : ೪೮ — ಬೆಲೆ : ರೂ. ೧೫

**ನಿತ್ಯ ವಿನೂತನ ರಂಗೋಲಿ – ೧** — ಭಾರತಿ ಮರವಂತೆ
ಪುಟ : ೪೪ — ಬೆಲೆ : ರೂ. ೨೪

ಮೇಲಿನ ಐದು ಪುಸ್ತಕಗಳ ಪ್ರಕಾಶಕರು
**ಪುಸ್ತಕನಿಧಿ ಪ್ರಕಾಶನ**, ಗಾವಳಿಶಾಲೆ ಹತ್ತಿರ, ಅಂಚೆ : ಹಳ್ಳಾಡಿ - ಹರ್ಕಾಡಿ, ಕುಂದಾಪುರ - ೫೭೬ ೨೧೦

**Einstein : His Papers and His Letters**
*N. Krishna Swamy*
*Pages : 142* — *Price : Rs. 50*
**Gandhi Centre of Science and Human Values,** Bhartiya Vidya Bhavan, 43/1, Race Course Road, Bangalore - 560 001



# ಗುರುಗ್ರಹದ ಪುನರಾಗಮನ

**ಮೋ**ಡಗಳು ಆವರಿಸಿಕೊಳ್ಳುತ್ತಿದ್ದಂತೆ ನಕ್ಷತ್ರಗಳ ಕಣ್ಣು ಮುಚ್ಚಾಲೆಯ ಆರಂಭ. ಮೋಡಗಳ ನಡುವೆ ಇಣುಕುವ ಚುಕ್ಕೆಗಳಲ್ಲಿ ಅತಿ ಪ್ರಕಾಶಮಾನವಾಗಿ ಕಾಣಲಿರುವುದು ಗುರುಗ್ರಹ. ೪ನೇ ತಾರೀಖಿನಿಂದ ಸೂರ್ಯಾಸ್ತವಾಗುವಾಗಲೇ ಅದು ಪೂರ್ವದಲ್ಲಿ ಉದಯಿಸುವುದು. ಈ ಘಟನೆಗೆ opposition ಅಥವಾ ವಿಯುತಿ ಎಂದು ಹೆಸರು. ಭೂಮಿ ಗುರು ಗ್ರಹವನ್ನು ಹಿಂದೆ ಹಾಕಿ ಮುಂದೆ ಓಡುತ್ತಿರುವುದರ ಸೂಚನೆ ಇದು. ಇದರ ಪರಿಣಾಮವಾಗಿ ಭೂಮಿ-ಗುರು ನಡುವಿನ ದೂರ ಕನಿಷ್ಠವಾಗುವುದು; ಆದ್ದರಿಂದ ಗುರುಗ್ರಹ ಅತಿ ಪ್ರಕಾಶಮಾನವಾಗಿ ಕಾಣುವುದು. ಈಗಾಗಲೇ ಇದನ್ನು ರಾತ್ರಿ ಎಂಟು-ಒಂಬತ್ತು ಗಂಟೆಯಲ್ಲಿ ಕಂಡವರು; ಬೆಳಗಿನ ಜಾವ ಪಶ್ಚಿಮದಂಚಿನಲ್ಲಿ ಕಂಡವರು – ಇದು ಶುಕ್ರ ಗ್ರಹವೇ ಎಂದು ಗಲಿಬಿಲಿಗೊಂಡಿದ್ದಾರೆ. ಬೆಳಗಿನ ಜಾವ ಪಶ್ಚಿಮದಂಚಿನಲ್ಲಿ ಶುಕ್ರಗ್ರಹ ಕಾಣುವುದು ಸಾಧ್ಯವೇ ಇಲ್ಲ; ಅದು ಪೂರ್ವದಲ್ಲಿಯೇ ಕಾಣಬೇಕು – ಕಾಣುತ್ತಿದೆ.

೪ನೇ ತಾರೀಖಿನಿಂದ ಗುರುಗ್ರಹ ರಾತ್ರಿ ಇಡೀ ಕಾಣುತ್ತದೆ. ಆ ಮುಂದೆಯೂ ಅಷ್ಟೇ. ಆದ್ದರಿಂದ ದೂರದರ್ಶಕ ಇರುವವರು ಗುರುಗ್ರಹದ ಕೆಂಪುಮಚ್ಚೆ ಮತ್ತು ಅದರ ಉಪಗ್ರಹಗಳನ್ನು ನೋಡುವ ಕಾರ್ಯಕ್ರಮಗಳನ್ನು ಹಾಕಿಕೊಳ್ಳಬಹುದು. ಗುರುಗ್ರಹದ ''ದಿನ'' ಅಂದರೆ ತನ್ನ ಅಕ್ಷದ ಮೇಲೆ ಬುಗುರಿಯಂತೆ ತಿರುಗುವ ಅವಧಿ ಸುಮಾರು ಹತ್ತು ಗಂಟೆಗಳು. ಆದ್ದರಿಂದ ಪ್ರತಿರಾತ್ರಿಯ ಯಾವುದೋ ಒಂದು ಅವಧಿಯಲ್ಲಿ ಕೆಂಪುಮಚ್ಚೆ ಕಾಣುವುದು ಸಾಧ್ಯ. ಎರಡು ಗಂಟೆಗಳಿಗೊಮ್ಮೆ ದೂರದರ್ಶಕ ಅಥವಾ ದುರ್ಬೀನಿನಿಂದ ದೃಷ್ಟಿ ಹಾಯಿಸಿದರೆ ಕೆಂಪುಮಚ್ಚೆ ಕಾಣುವುದು ಖಂಡಿತ.




ಉಳಿದಂತೆ ಆಕಾಶ ಖಾಲಿಯೇನೋ ಎನ್ನಿಸಬಹುದು. ಆಕಾಶಗಂಗೆಯ ಭಾಗ ಪಶ್ಚಿಮ-ನೈರುತ್ಯದ ಅಂಚಿಗೆ ಸರಿದಿದೆ. ಪ್ರಕಾಶಮಾನವಾದ (ಸಿರಿಯಸ್) ಲುಬ್ಧಕ ಮತ್ತು ಅಗಸ್ತ್ಯ (ಕನೋಪಸ್) ತೆಳ್ಳನೆಯ ಮೋಡಗಳಿದ್ದರೆ ಮಂಕಾಗಿ ಕಾಣುವುವು. ನೆತ್ತಿಯಿಂದ ತುಸು ಪಶ್ಚಿಮಕ್ಕೆ ಶನಿ, ಮಂಗಳ ಗ್ರಹಗಳು ಕಾಣುವುವು. ಮಂಗಳ ಮಿಥುನದಿಂದ ಕಟಕದತ್ತ ಓಡುವುದನ್ನು ಗುರುತಿಸಬಹುದು.

ಪೂರ್ವದಲ್ಲಿ ಚಿತ್ರಾ ಮತ್ತು ಸ್ವಾತಿ ಇವೆರಡು ಮಾತ್ರ ಸ್ಫುಟವಾಗಿ ಕಾಣುವುವು. ನೆತ್ತಿಯ ಮೇಲೆ ಸಿಂಹರಾಶಿ, ಉತ್ತರಕ್ಕೆ ಸಪ್ತರ್ಷಿಮಂಡಲ, ದಕ್ಷಿಣಕ್ಕೆ ತ್ರಿಶಂಕು ಅಥವಾ ದಕ್ಷಿಣ ಶಿಲುಬೆ – ಇವುಗಳನ್ನು ಗುರುತಿಸಬಹುದು. ಗುರುಗ್ರಹದ ಪಕ್ಕದಲ್ಲಿರುವ ಕ್ಷೀಣ ಚುಕ್ಕೆಯೇ ವಿಶಾಖಾ ನಕ್ಷತ್ರ. ೧೩ರ ಹುಣ್ಣಿಮೆಯಂದು ಚಂದ್ರ ಇದರ ಸಮೀಪವೇ ಕಾಣುವುದರಿಂದ ಈ ತಿಂಗಳ ಹೆಸರು ವೈಶಾಖ ಆಗಿದೆ. ೧೪ರಂದು ಚಂದ್ರೋದಯವನ್ನು ತಪ್ಪದೇ ನೋಡಿ.



*೧೪ರಂದು ಸಂಜೆ ಪೂರ್ವ ದಿಕ್ಕಿನಲ್ಲಿ ಚಂದ್ರನ ಹಿಂದಿನಿಂದ ಹೊರಬರುತ್ತಿರುವ ಜ್ಯೇಷ್ಠಾ ನಕ್ಷತ್ರ*

ಚಂದ್ರನ ಮುಂದಿನಿಂದ ಹೊರಬರುವ ಜ್ಯೇಷ್ಠಾ ನಕ್ಷತ್ರವನ್ನು ಸುಲಭವಾಗಿ ಗುರುತಿಸಬಹುದು.

ಹ್ಯಾಲೀ ಧೂಮಕೇತುವಿನ ತುಣುಕುಗಳು ಸೃಷ್ಟಿಸುವ ಉಲ್ಕಾವೃಷ್ಟಿ ಮೊದಲ ವಾರದಲ್ಲಿ ಕಾಣುವುದು. ಬೆಳಗಿನ ಜಾವ ಗಂಟೆಗೆ ೧೦-೨೦ ಉಲ್ಕೆಗಳು ಬೀಳುವುವು.

ಶ್ವಾಸ್‌ಮನ್ – ವಾಚ್‌ಮನ್ ಅಥವಾ ೭೩P ಎಂಬ ಧೂಮಕೇತು ನಿರೀಕ್ಷೆಯಂತೆ ಸಿಡಿದುಹೋಗಿದೆ. ಹತ್ತು-ಹದಿನೈದು ತುಂಡುಗಳಲ್ಲಿ ಪ್ರಕಾಶಮಾನವಾದುದಕ್ಕೆ C ಎಂಬ ಹೆಸರಿದೆ. ಇದು ಹರ್ಕ್ಯುಲಸ್ (ಭೀಮಸೇನ) ಪುಂಜದಲ್ಲಿ ಓಡುತ್ತಿದೆ. ಬರಿಗಣ್ಣಿಗೆ ಕಾಣುವ ಪ್ರಕಾಶ ಪಡೆಯಬಹುದು ಎಂದು ನಿರೀಕ್ಷೆ. ನಕ್ಷೆಯಲ್ಲಿ ಹರ್ಕ್ಯುಲಸ್‌ಅನ್ನು ಸೂಚಿಸಿಲ್ಲ; ಅದು ಬೂಟಿಸ್ (ಸಹದೇವ)ಗಿಂತ ಪೂರ್ವಕ್ಕೆ ಇದೆ. ಆದ್ದರಿಂದ ಸುಮಾರು ೯ ಗಂಟೆಯ ಹೊತ್ತಿಗೆ ಉದಯಿಸಿ ಬೆಳಗಿನ ಜಾವದವರೆಗೂ ಕಾಣುವುದು. ಹೀಗೆ ರಾತ್ರಿ ಇಡೀ ನೋಡಲು ಸಿಗುವ ಧೂಮಕೇತುಗಳು ಅಪೂರ್ವ. ಹತ್ತುವರ್ಷದ ಹಿಂದೆ ಹಯಾಕುಟಾಕೆ ಎಂಬ ಧೂಮಕೇತು ಧ್ರುವ ನಕ್ಷತ್ರದ ಸಮೀಪ ಕಂಡಿತ್ತು. ಆಗ ಅದನ್ನು ರಾತ್ರಿ ಇಡೀ ನೋಡಬಹುದಾಗಿತ್ತು.

ಮೋಡಗಳು ನಮಗೆ ಧೂಮಕೇತುವಿನ ನೋಟವನ್ನು ತಪ್ಪಿಸಲಾರವು ಎಂದು ಆಶಿಸೋಣ.

## ಖಗೋಳ ದಿನಚರಿ

ಮೇ ೨ ಚಂದ್ರ – ಮಂಗಳ ನಡುವೆ ೪ ಡಿಗ್ರಿ ಅಂತರ *

೪ ಚಂದ್ರ – ಶನಿ ನಡುವೆ ೪ ಡಿಗ್ರಿ ಅಂತರ *

ಅಕ್ವಾರಿಡ್ಸ್ ಉಲ್ಕಾವೃಷ್ಟಿಯ ಗರಿಷ್ಠ ಚಟುವಟಿಕೆ

ಗುರುಗ್ರಹದ ವಿಯುತಿ

(ಸೂರ್ಯಾಸ್ತವಾಗುವಾಗ ಗುರುಗ್ರಹದ ಉದಯ)

೫ ಚಾಂದ್ರಮಾಸದ ಮೊದಲನೆಯ ಪಾದ (ಚಂದ್ರಾಸ್ತ ನಡುರಾತ್ರಿಗೆ)

೬ ಚಂದ್ರ – ಮಘ ನಕ್ಷತ್ರ ಜೋಡಿ *

೭ ಚಂದ್ರ – ಭೂಮಿ ನಡುವಿನ ದೂರ ಗರಿಷ್ಠ

೧೦ ಚಂದ್ರ – ಚಿತ್ರಾ ನಕ್ಷತ್ರ ಜೋಡಿ *

೧೨ ಚಂದ್ರ – ಗುರು ಗ್ರಹ ನಡುವೆ ೫ ಡಿಗ್ರಿ ಅಂತರ *

೧೩ ಹುಣ್ಣಿಮೆ ೧೨ :೨೧ಕ್ಕೆ

೧೪ ಚಂದ್ರ – ಜ್ಯೇಷ್ಠಾ ಜೋಡಿಯ ಅಪೂರ್ವ ದೃಶ್ಯ ಸುಮಾರು ೭:೪೫ಕ್ಕೆ ಚಂದ್ರೋದಯವಾಗುವಾಗ *

೨೦ ಚಾಂದ್ರಮಾಸದ ಕೊನೆಯ ಪಾದ (ಚಂದ್ರೋದಯ ನಡು ರಾತ್ರಿಗೆ)

೨೧ ಚಂದ್ರನ ಪಕ್ಕ ಯುರೇನಸ್ (ಆಚ್ಛಾದನೆ ಕಾಣುವುದಿಲ್ಲ)

೨೨ ಚಂದ್ರ – ಭೂಮಿ ನಡುವೆ ಕನಿಷ್ಠ ದೂರ

೨೪ ಚಂದ್ರ – ಶುಕ್ರ ನಡುವೆ ೪ ಡಿಗ್ರಿ ಕೋನ *

೨೭ ಅಮಾವಾಸ್ಯೆ ೧೦:೫೬ಕ್ಕೆ

೩೧ ಚಂದ್ರ – ಮಂಗಳ – ಶನಿ ನಡುವೆ ಪುಟ್ಟತ್ರಿಕೋನ *

ಜೂನ್ ೨ ಚಂದ್ರ – ಮಘ ಜೋಡಿ *

೭ ಚಂದ್ರ – ಚಿತ್ರಾ ಜೋಡಿ * (ಆಚ್ಛಾದನೆ ಕಾಣುವುದಿಲ್ಲ)

* ಛಾಯಾಗ್ರಹಣಕ್ಕೆ ಒಳ್ಳೆಯ ಅವಕಾಶ

ಡಾ|| ಬಿ. ಎಸ್. ಶೈಲಜಾ, ಜವಹರಲಾಲ್ ನೆಹರೂ ತಾರಾಲಯ, ಬೆಂಗಳೂರು - ೫೬೦ ೦೦೧




ಅರಿವಿನ ಕಥನದಲ್ಲಿರುವ ಲೇಖನಗಳನ್ನು ಅರಿವು, ಇರವು ಮತ್ತು ಮರೆವು ಎಂಬ ಮೂರು ವಿಭಾಗಗಳಲ್ಲಿ ವಿಂಗಡಿಸಲಾಗಿದೆ. ಅರಿವಿನಲ್ಲಿ ಅವಧೂತ, ದೇಶಿ ದರ್ಶನದ ರೂಪಕಗಳು, ಬೆಳೆಗೆರೆ ಕೃಷ್ಣಶಾಸ್ತ್ರಿಗಳ ಯೇಗ್ದಾಗೆಲ್ಲಾ ಐತೆ, ಅರಿವಿನ ಹಲವು ದಾರಿಗಳು, ಅಲ್ಲಮನ ಅರಿವು, ಅನುಭಾವ ಮತ್ತು ತತ್ವಶಾಸ್ತ್ರ, ನೆಲೆ-ಹಿನ್ನೆಲೆ, ಸಿದ್ಧವನಹಳ್ಳಿ ಕೃಷ್ಣಶರ್ಮ ಮತ್ತು ದಕ್ಷಿಣ ಭಾರತೀಯ ಸಂಸ್ಕೃತಿಯ ಬಗೆಗಿನ ಲೇಖನಗಳಿವೆ.

ಇರವಿನಲ್ಲಿ ಅಕ್ಷರಸೂರ್ಯನಿಗೆ ನಮನ, ಪುಸ್ತಕೋದ್ಯಮ ಮತ್ತು ಸಮೂಹ ಮಾಧ್ಯಮಗಳು, ಬಹುಮುಖೀ ಸಂಸ್ಕೃತಿ ಅಧ್ಯಯನಗಳು ಮತ್ತು ಕೆಲವು ಕೃತಿಗಳಿಗೆ ಬರೆದ ವಿಮರ್ಶಾ ಲೇಖನಗಳಿವೆ.

ಮರೆವಿನಲ್ಲಿ ದೇವುಡು ಮತ್ತು ಸೇಡಿಯಾಪು ಅವರ ಸಂಸ್ಕೃತಿ ಚಿಂತನೆಗಳು, ವೈದಿಕ ಮತ್ತು ಜೈನಪುರಾಣಗಳು, ವಿಜಯನಗರ ಕಾಲದ ಸಂಸ್ಕೃತ ಸಾಹಿತ್ಯ, ಶಾಸನಗಳಲ್ಲಿ ಅಸ್ಪೃಶ್ಯತೆಯ ಪರಿಕಲ್ಪನೆ ಮತ್ತು ಶಿವತತ್ವರತ್ನಾಕರ, ಜಿ. ಎಸ್. ಚಕ್ರವರ್ತಿ, ಪುಣೇಕರ್, ಚಂದ್ರಕಾಂತ ಕುಸನೂರು ಬಗ್ಗೆ ಲೇಖನಗಳಿವೆ.

ಇಲ್ಲಿನ ಲೇಖನಗಳು ಮೇಲಿನ ನೋಟಕ್ಕೆ ವಸಾಹತುಶಾಹಿಯೋತ್ತರ ಸಮಾಜಗಳ ಮುಖಾಮುಖಿಯಂತೆ ಕಾಣುತ್ತವೆ. ವಸಾಹತುಶಾಹಿ ಘಟ್ಟಕ್ಕೆ ಮುಂಚೆ ಭಾರತಕ್ಕೆ ಬಂದ ವೈದಿಕರು ಇಲ್ಲಿನ ಮೂಲ ಸಂಸ್ಕೃತಿಯನ್ನು ತಿರುಚಿ, ಮೂಲಸ್ಥರನ್ನು ಎಲ್ಲಾ ರೀತಿಯಲ್ಲೂ ಗುಲಾಮರನ್ನಾಗಿಸಿಕೊಂಡು ಕುಳಿತುಕೊಂಡುಬಿಟ್ಟಿದ್ದರು. ಇವರ ಜೊತೆಗೆ ಬಂದ ದೇವಭಾಷೆಯೆನ್ನುವ ಸಂಸ್ಕೃತ ಭಾಷೆಯೂ ಇಲ್ಲಿನ ಜನರನ್ನು ಶೋಷಣೆಗೆ ಒಳಪಡಿಸಿತು. ಮೂಲ ಸಮಾಜವನ್ನು ಛಿದ್ರ ಛಿದ್ರ ಮಾಡಿ ಕುಳಿತಿದ್ದ ವೈದಿಕರ ಪಿತೂರಿಯನ್ನು ತೆರೆದು ತೋರಿಸಬೇಕಾದರೆ ಭಾರತಕ್ಕೆ ಯೂರೋಪಿಯನರು ಮತ್ತು ಬ್ರಿಟಿಷರು ಬರಬೇಕಾಯಿತು. ಅದಕ್ಕಿನ್ನ ಮುಂಚೆ ವೈದಿಕಶಾಹಿ ಮನೋಧರ್ಮವನ್ನು ಎದುರಿಸಿ ಅದಕ್ಕೆ ತಡೆಯೊಡ್ಡಿ ನಿಂತವರಲ್ಲಿ ಚಾರ್ವಾಕರು ಮತ್ತು ಲೋಕಾಯತರು ಮೊದಲಿಗರು ಎನ್ನಬಹುದು. ಅನಂತರ ಬುದ್ಧ, ಬಸವ, ಜೈನರು, ಕಬೀರ, ಕನಕ, ಸರ್ವಜ್ಞ ಹೀಗೆ ಅನೇಕರು ಈ ನೆಲದ ಮೂಲ ಸಂಸ್ಕೃತಿಯನ್ನು ಎಂದೆಂದಿಗೂ ಚಲನಶೀಲವನ್ನಾಗಿರಿಸಲು ಕಾರಣರಾಗಿದ್ದಾರೆ.

**ಎಂ. ವೆಂಕಟಸ್ವಾಮಿ**

ವಸಾಹತುಶಾಹಿ ಘಟ್ಟದ ಪೂರ್ವಕಾಲದಲ್ಲಿ ಭಾರತದಲ್ಲಿ ಅನೇಕ ಬದಲಾವಣೆಗಳು ಕಾಣಿಸಿಕೊಂಡುವು. ಮುಖ್ಯವಾಗಿ ಶೂದ್ರರಿಗೆ ಅಕ್ಷರ ಜ್ಞಾನ ವರವಾಗಿ ಪರಿಣಮಿಸಿತು. ಜೊತೆಗೆ ವಿಜ್ಞಾನ, ತಂತ್ರಜ್ಞಾನದ ಲಾಭವು ದೊರಕಿತು. ಇಂತಹ ಒಂದು ಘಟ್ಟ ಭಾರತದಲ್ಲಿ ಕಾಣಿಸಿಕೊಳ್ಳದೆ ಇದ್ದಲ್ಲಿ ಭಾರತ ಇಂದಿಗೂ ಕತ್ತಲ ದೇಶವಾಗಿಯೆ ಉಳಿದುಕೊಂಡುಬಿಡುತ್ತಿತ್ತು. ಈ ಕಾರಣದಿಂದಲೇ ಅನಂತರದ ದಿನಗಳಲ್ಲಿ ಇಲ್ಲಿ ಅನೇಕ ಪ್ರತಿಭೆಗಳು ಹುಟ್ಟಿಕೊಂಡು ಶೂದ್ರರ ಬದುಕನ್ನು ಹಸನುಗೊಳಿಸಲು ಕಾರಣವಾದರು. ಅವರಲ್ಲಿ ಮುಖ್ಯರೆಂದರೆ ಮಹಾತ್ಮಾ ಗಾಂಧಿ, ಶಾಹು ಮಹಾರಾಜ, ಮಹಾತ್ಮ ಫುಲೆ, ನಾರಾಯಣ ಗುರು, ಪೆರಿಯಾರ್, ಡಾ|| ಅಂಬೇಡ್ಕರ್, ಇತರರು.

ವಸಾಹತುಶಾಹಿ ಘಟ್ಟದ ನಂತರ ಬುದ್ಧಿಜೀವಿಗಳಲ್ಲಿ ಅನೇಕ ತವಕ ತಲ್ಲಣಗಳು ಹುಟ್ಟಿಕೊಂಡು ಅವರನ್ನು ಕಾಡತೊಡಗಿವೆ. ಅವುಗಳಲ್ಲಿ ದೇಶಿ ಸಂಸ್ಕೃತಿ ಮತ್ತು ಸ್ವರೂಪಗಳು ಅಳಿಸಿಹೋಗುತ್ತಿವೆ, ಆರ್ಥಿಕ ದಿಗ್ಬಂಧನಗಳನ್ನು ಪ್ರಪಂಚದಾದ್ಯಂತ ಹೇರಲಾಗುತ್ತಿದೆ ಎನ್ನುವ ಚಿಂತನೆಗಳು ಮುಖ್ಯವಾದವು. ಆದರೆ ಇಂದು ಜಾಗತೀಕರಣ ಎನ್ನುವ ಭೂತ ನೂರಾರು ವರ್ಷಗಳ ಹಿಂದಿನಿಂದಲೂ ಅನೇಕ ರೀತಿಯಲ್ಲಿ ಪ್ರಪಂಚವನ್ನು ನಿರಂತರವಾಗಿ ಕಾಡುತ್ತಲೇ ಬಂದಿದೆ. ವಸಾಹತುಶಾಹಿಯ ಘಟ್ಟದಲ್ಲಿ ಒಂದೆರಡು ಶತಮಾನಗಳು ಅದು ಇಡೀ ಪ್ರಪಂಚವನ್ನೇ ಆರ್ಥಿಕವಾಗಿ ಲೂಟಿಮಾಡಿ, ದೇಶಿ ಸಂಸ್ಕೃತಿ ಮತ್ತು ಸ್ವರೂಪಗಳನ್ನು ಅಳಿಸಿಹಾಕಿಬಿಟ್ಟಿತು.

ಇದರ ವಿರುದ್ಧ ಪ್ರಪಂಚದಾದ್ಯಂತ ಪ್ರತಿಭಟನೆಗಳು, ಯುದ್ಧಗಳು ಕಾಣಿಸಿಕೊಂಡಿವೆ. ಕಪ್ಪೆಗಳನ್ನು ನುಂಗಿದ ಹಾವುಗಳಂತೆ ಶೋಷಣೆ ಮಾಡಿದ ದಂಗೆಕೋರ ದೇಶಗಳೆಲ್ಲ ತಮ್ಮ ತಮ್ಮ ಬಿಲಗಳಿಗೆ ಹೋಗಿ ಸ್ವಲ್ಪ ಕಾಲ ವಿಶ್ರಾಂತಿ ಪಡೆದುಕೊಂಡವು. ಆದರೆ ಅವುಗಳ ಅಟ್ಟಹಾಸ ಈಗ ಎಲ್‌ಪಿಜಿ ಹೆಸರಿನಲ್ಲಿ (ಜಾಗತೀಕರಣ, ಉದಾರೀಕರಣ ಮತ್ತು ಖಾಸಗೀಕರಣ) ಮತ್ತೊಮ್ಮೆ ತೀವ್ರವಾಗಿ ಮರುಕಳಿಸಿದೆ.

ವಸಾಹತುಶಾಹಿಯೋತ್ತರ ಘಟ್ಟದ ನಂತರ ತೃತೀಯ ಜಗತ್ತಿನ ಯಾವುದೇ ದೇಶಕ್ಕೂ (ಚೀಣಾ ಬಿಟ್ಟು) ಸರಿಯಾದ ನಾಯಕತ್ವ ದೊರಕಲಿಲ್ಲ. ದೊರೆತರೂ ಆ ದೇಶಗಳ ನಾಯಕರನ್ನು ಅತಿಭ್ರಷ್ಟರನ್ನಾಗಿ ಪರಿವರ್ತಿಸಲಾಯಿತು, ಇಲ್ಲವೇ ಕೊಲ್ಲಲಾಯಿತು. ಕರಿಯರ ಬಗ್ಗೆ ಕನಿಕರ ತೋರಿಸಿದ ನಾಯಕರನ್ನು ಅಮೆರಿಕಾದಲ್ಲಿ ಗುಂಡಿಟ್ಟು ಕೊಲ್ಲಲಾಯಿತು. ಅದೇ ರೀತಿ ಮತೀಯ ಕಾರಣಗಳಿಗಾಗಿ ಭಾರತದಲ್ಲಿ ಮಹಾತ್ಮಾ ಗಾಂಧಿಯನ್ನು ಹತ್ಯೆ ಮಾಡಲಾಯಿತು. ಅನಂತರದ ದಿನಗಳಲ್ಲಿ ಕೆಲವು ದೇಶಗಳು ಒಕ್ಕೂಟಗಳನ್ನು ಸ್ಥಾಪಿಸಿಕೊಂಡು ತೃತೀಯ ಜಗತ್ತಿನ ದೇಶಗಳಿಗೆ ಸಾಲ ಮತ್ತು ಇತರೆ ಆಮಿಷಗಳನ್ನು ಒಡ್ಡಿ ಅವುಗಳನ್ನು ತಮ್ಮ ಖೆಡ್ಡಾಗಳಿಗೆ ಕೆಡವಲಾಯಿತು. ಇಂತಹ ಉಪಾಯಗಳನ್ನು ಎದುರಿಸಿ ನಿಂತ ಅನೇಕ ನಾಯಕರನ್ನು ರಾಜಕೀಯ ಪಿತೂರಿಯಿಂದ ಕೆಳಗಿಳಿಸಲಾಯಿತು, ಇಲ್ಲವೇ ಕೊಲ್ಲಲಾಯಿತು. ಸದ್ದಾಮನಂತಹವನನ್ನು ಮನೆಗೆ ನುಗ್ಗಿ ಕೈಗಳಿಗೆ ಬೇಡಿ ಹಾಕಿ (ವಿಶ್ವ ಒಂದು ಸಣ್ಣ ಗ್ರಾಮ ಎನ್ನುವ ಈ ಹೊತ್ತಿನಲ್ಲಿ) ಪ್ರಪಂಚದ ಕಣ್ಣುಗಳ ಮುಂದೆಯೆ ಎತ್ತಿಕೊಂಡು ಹೋಗಲಾಯಿತು.

ಇದನ್ನೆಲ್ಲ ಎದುರಿಸಲು ಪರ್ಯಾಯ ರಾಜಕೀಯ ರಚನೆ ಮತ್ತು ಹೊಸ ಸಾಂಸ್ಕೃತಿಕ ಚಿಂತನೆಗಳು ಕೆಲವು ದಶಕಗಳಿಂದ ಪ್ರಪಂಚದಾದ್ಯಂತ ಪ್ರಾರಂಭಗೊಂಡು ಇವು ಮುಂದಿನ ದಿನಗಳಲ್ಲಿ ಪರ್ಯಾಯ ರಾಜಕೀಯ ಮತ್ತು ಸಾಂಸ್ಕೃತಿಕ ಚಿಂತನೆಗಳಾಗುವ ಆಶೋತ್ತರಗಳನ್ನು ಬುದ್ಧಿಜೀವಿಗಳು ಹೊಂದಿದ್ದಾರೆ. ಡಿ. ಆರ್. ನಾಗರಾಜ ಅವರು ಮೊದಲಿಗೆ ಕನ್ನಡ ನೆಲದಲ್ಲಿ ಅರಳಿ ನಿಂತಿದ್ದ ದೇಶಿ ಚಿಂತನೆಗಳ ಸ್ವೋಪಜ್ಞತೆಯನ್ನು, ಬೌದ್ಧಿಕ ವ್ಯಾಪ್ತಿಯನ್ನು, ಸಶಕ್ತವಾಗಿ ಸಂಸ್ಕೃತ ಮತ್ತು ಇಂಗ್ಲಿಷ್ ಭಾಷೆಗಳ ಎದುರಿಗೆ ಕನ್ನಡ ಪ್ರತಿಭೆಗೆ ಕೀಳರಿಮೆ ಇಲ್ಲ ಎನ್ನುವುದನ್ನು ಎತ್ತಿ ತೋರಿಸಿದವರಲ್ಲಿ ಗಮನಾರ್ಹ ಕೆಲಸ ಮಾಡಿದರು. ಆದರೆ ಅವರ ಅಕಾಲ ಮರಣದಿಂದ ಕನ್ನಡ ಬೌದ್ಧಿಕ ಶಕ್ತಿಯ ಕೊಂಡಿಯೊಂದು ಮುರಿದುಬಿದ್ದಿತು.

ಅನಂತರ ಅವರಿಟ್ಟ ಹೆಜ್ಜೆಗಳಲ್ಲಿ ಕನ್ನಡ ಪ್ರತಿಭೆಯನ್ನು ಮತ್ತೊಮ್ಮೆ ಎತ್ತರಕ್ಕೆ ಹೊತ್ತೊಯ್ಯುವ ಕೆಲಸದಲ್ಲಿ ಮಲ್ಲೇಪುರಂ ನಿಂತಿದ್ದಾರೆ ಎಂಬುದನ್ನು ಅವರ ಈ ಸಂಸ್ಕೃತಿ ಸಂಬಂಧೀಯ ಲೇಖನಗಳ ಕಟ್ಟು ಸಾಬೀತುಪಡಿಸಿದೆ.

ಯೂರೋಪಿನ ದಂಗೆಕೋರ ಸಂಸ್ಕೃತಿ ಮತ್ತು ಆರ್ಯ ಮೂಲದ ವೈದಿಕ ಸಂಸ್ಕೃತಿ ಪ್ರಪಂಚದ ನೆಲಮೂಲ ಚಿಂತನೆಗಳನ್ನು ಯಾವಾಗಲಿಂದಲೋ ಅನೇಕ ರೀತಿಯಲ್ಲಿ ದಮನ ಮಾಡುತ್ತಲೇ ಬಂದಿವೆ. ಈಗ ಈ ನೆಲಮೂಲ ಸಂಸ್ಕೃತಿಗಳು ಇಂದಿನ ಜಾಗತೀಕರಣ ಸಂಸ್ಕೃತಿಯ ಎದುರಿಗೆ ನಿಲ್ಲಬಲ್ಲವೇ ? ಪ್ರಸ್ತುತ ಜಾಗತಿಕ ಸಂದರ್ಭದಲ್ಲಿ ಉಳಿದುಕೊಂಡಿರುವ ಕೇವಲ ನೂರು ಮತ್ತೊಂದು ಭಾಷೆಗಳಲ್ಲಿ, ಎರಡು ವಾರಗಳ ಸರಾಸರಿ ಅವಧಿಯಲ್ಲಿ ಒಂದು ಭಾಷೆ ಭೂಮಿಯಿಂದ ಕಾಣೆಯಾಗುತ್ತಿದೆ. ಅವುಗಳ ಜೊತೆಗೆ ಸಾವಿರಾರು ವರ್ಷಗಳ ಇತಿಹಾಸವಿರುವ ಬುಡಕಟ್ಟು ಜನಾಂಗಗಳು ಒಂದೊಂದಾಗಿ ಮಾಯವಾಗುತ್ತಿವೆ. ತೃತೀಯ ಜಗತ್ತಿನಾದ್ಯಂತ ಮಿಲಿಯಾಂತರ ಬಡವರು ಪೌಷ್ಟಿಕಾಂಶದ ಆಹಾರವಿಲ್ಲದೆ, ರೋಗರುಜಿನಗಳಿಂದ ನರಳುತ್ತ, ನೆರೆ,ಬರ, ಸುನಾಮಿ ಮತ್ತು ಭೂಕಂಪಗಳಂತಹ ಪ್ರಕೃತಿ ವಿಕೋಪಗಳಿಂದ ಸಾವನ್ನಪ್ಪುತ್ತಿದ್ದಾರೆ.




ರೂ. ೩೦೦ ಪುಟಗಳು : ೩೫೨
ಸಿವಿಜಿ ಪಬ್ಲಿಕೇಷನ್ಸ್, ಬೆಂಗಳೂರು - ೫೩

ಇನ್ನು ಉಳಿದುಕೊಳ್ಳುವುದಾದರೂ ಏನು ? ಯಾವ ರೀತಿಯ ಚಿಂತನೆಗಳು ? ಭಾರತೀಯ ಸಂಸ್ಕೃತಿಯಲ್ಲಿ ವೈದಿಕ ಧರ್ಮವನ್ನು ಬದಿಗೆ ತಳ್ಳಿ ನೋಡಿದಾಗ ಅನೇಕ ನೆಲಮೂಲ ರೂಪಕಗಳು ಸ್ಥಳೀಯ ಸಂಸ್ಕೃತಿಗೆ ಕೇಂದ್ರವಾಗಿರುವುದನ್ನು ನೋಡಬಹುದಾಗಿದೆ. ಚಾರ್ವಾಕರು, ಲೋಕಾಯತರು, ಬುದ್ಧ, ಬಸವ, ಅಲ್ಲಮ, ಕನಕ, ಕಬೀರ, ಸರ್ವಜ್ಞ, ಸೂಫೀ ಸಂತರು... ಹೀಗೆ ಅನೇಕರ ದೇಶೀವಾದಗಳನ್ನು ಗಮನಿಸಬಹುದಾಗಿದೆ.

ಆದರೆ ಇಂದಿನ ಜಾಗತೀಕರಣವೆಂಬ ಭೂತ ಆರ್ಥಿಕ, ರಾಜಕೀಯ, ಸಾಮಾಜಿಕ ಸಿದ್ಧಾಂತಗಳನ್ನು ಪೂರ್ಣವಾಗಿ

೫೪ನೇ ಪುಟಕ್ಕೆ




# ನೇಪಾಳ : ಅರಸೊತ್ತಿಗೆಯ ವಿರುದ್ಧ ಆಂದೋಳನ

ದಕ್ಷಿಣ ಏಶಿಯಾದ ಪರ್ವತಗಳ ನಾಡು ನೇಪಾಳದ ಜನತೆ ನಿರಂಕುಶಾಡಳಿತೆಯ ವಿರುದ್ಧ ಪ್ರಜಾಪ್ರಭುತ್ವಕ್ಕಾಗಿ ನಿರಂತರವಾದ ಹೋರಾಟದಲ್ಲಿ ನಿರತವಾಗಿದೆ. ಸುಮಾರು ಎರಡೂವರೆ ಕೋಟಿ ಜನಸಂಖ್ಯೆಯ ಒಂದೂವರೆ ಲಕ್ಷ ಚದರ ಕಿಲೋಮೀಟರ್ ವಿಸ್ತೀರ್ಣದ ಹಿಮಾಲಯದ ತಪ್ಪಲಿನಲ್ಲಿರುವ ಈ ಪುಟ್ಟ ರಾಷ್ಟ್ರದ ಮೂಲೆಮೂಲೆಗಳಲ್ಲಿ ಜನ ಅರಸೊತ್ತಿಗೆಯ ವಿರುದ್ಧ ಬಂಡೆದ್ದಿದ್ದಾರೆ. ರಾಜಧಾನಿ ಕಠ್ಮಂಡು ವಸ್ತುತಃ ರಣರಂಗವಾಗಿ ಪರಿಣಮಿಸಿದೆ. ದೇಶಾದ್ಯಂತ ಅನಿರ್ದಿಷ್ಟಕಾಲ ಮುಷ್ಕರ ಹೋರಾಟ ನಡೆಯುತ್ತಿದೆ. ಸರಕಾರದ ದಬ್ಬಾಳಿಕೆ ಯಂತ್ರ ಎಂದಿನಂತೆ ಜನತೆಯ ಈ ಆಂದೋಳನವನ್ನು ಹತ್ತಿಕ್ಕಲು ಎಲ್ಲ ಕ್ರಮಗಳನ್ನು ಕೈಗೊಂಡಿದೆ. ಆದರೂ ನಿಷೇಧಾಜ್ಞೆಗಳನ್ನು, ಪೊಲೀಸು, ಸೈನ್ಯದಳದ ಭದ್ರಕೋಟೆಯನ್ನು ಭೇದಿಸಿ ಜನ ಪ್ರದರ್ಶನಗಳನ್ನು ನಡೆಸುತ್ತಿದ್ದಾರೆ. ಈ ಹಿಂದೆಯೂ ನೇಪಾಳದ ಜನ ಪ್ರಜಾ ಪ್ರಭುತ್ವಕ್ಕಾಗಿ ಹೋರಾಟ ನಡೆಸಿದ್ದಾರೆ. ಆದರೆ ಈ ಬಾರಿ ಹೋರಾಟ ಹಿಂದೆಂದಿಗಿಂತಲೂ ಹೆಚ್ಚು ತೀವ್ರವಾಗಿ ಮುಂದುವರಿಯುತ್ತಿದೆ. ದೇಶದ ಎಲ್ಲ ರಾಜಕೀಯ ಪಕ್ಷಗಳೂ ಒಂದುಗೂಡಿ ಕಾರ್ಯಾಚರಣೆಯಲ್ಲಿ ತೊಡಗಿವೆ. ಸರಕಾರ ಇವೆಲ್ಲ ಮಾವೋವಾದಿ ಉಗ್ರಗಾಮಿಗಳ ಚಿತಾವಣೆ ಎಂದು ಬಣ್ಣಿಸಿ ಸಹಸ್ರಾರು ಮಂದಿಯನ್ನು ಕಾರಾಗೃಹದಲ್ಲಿ ದೂಡಿ, ದೌರ್ಜನ್ಯ ನಡೆಸುತ್ತಿದ್ದರೂ ಹೋರಾಟದ ತೀವ್ರತೆ ಕಡಿಮೆಯಾಗಿಲ್ಲ.

ಅಧಿಕೃತವಾಗಿ ಹಿಂದೂರಾಷ್ಟ್ರ ಎಂದು ಕರೆದುಕೊಂಡಿರುವ ನೇಪಾಳದಲ್ಲಿ ಗೂರ್ಖಾ ರಾಜವಂಶದ ಬುನಾದಿ ನಿರ್ಮಾಣವಾದ್ದು ೧೮ನೇ ಶತಮಾನದಲ್ಲಿ. ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪನಿ ೧೯ನೇ ಶತಮಾನದಲ್ಲಿ ನೇಪಾಳವನ್ನು ಅಧೀನಪಡಿಸಿಕೊಳ್ಳಲು ಹವಣಿಸಿತ್ತು. ಆದರೆ ನೇಪಾಳವನ್ನು ವಸಾಹತು ಮಾಡಿಕೊಳ್ಳದೆ ದೊರೆಗಳನ್ನು ತಮ್ಮ ಅಧೀನದಲ್ಲಿ ಇರಿಸಿ ಕೊಂಡಿದ್ದರು. ಬ್ರಿಟಿಷರಿಗೆ ಆಗಿದ್ದ ಆಸಕ್ತಿ ತನ್ನ ಸೇನೆಗೆ ಸಮರ್ಥರಾದ ಗೂರ್ಖಾ ಯೋಧರನ್ನು ನೇಮಿಸಿಕೊಳ್ಳುವುದಾಗಿತ್ತು. ಹಾಗಾಗಿ ಸುಮಾರು ಇನ್ನೂರಐವತ್ತು ವರ್ಷ ಗಳಿಂದ ಈಗಿನ ರಾಜವಂಶ ನೇಪಾಳದಲ್ಲಿ ಹೆಚ್ಚು ಕಡಿಮೆ ನಿರಂಕುಶಾಡಳಿತವನ್ನು ನಡೆಸುತ್ತ ಬಂದಿದೆ. ಯಾವುದೇ ಅಭಿವೃದ್ಧಿ ಕಾರ್ಯವನ್ನು ಕಾಣದ ಈ ನಾಡಿನ ಬಹುತೇಕ ಜನ ಕಡು ಬಡತನದಲ್ಲಿದ್ದಾರೆ. ರಾಜವಂಶದ ಆಶ್ರಯದಲ್ಲಿರುವವರು ಮಾತ್ರ ಹೆಚ್ಚು ಹೆಚ್ಚು ಶ್ರೀಮಂತ ರಾಗಿದ್ದಾರೆ. ಭಾರತದ ಸ್ವಾತಂತ್ರ್ಯ ಹೋರಾಟದಿಂದ ಸ್ಫೂರ್ತಿಗೊಂಡ ನೇಪಾಳೀ ಜನರು ೧೯೪೭ರಲ್ಲಿ ನೇಪಾಳಿ ಕಾಂಗ್ರೆಸ್ ಎಂಬ ಹೆಸರಿನಲ್ಲಿ ರಾಜಕೀಯ ಸಂಘಟನೆಯನ್ನು ಸ್ಥಾಪಿಸಿ ಕೊಂಡು ಗಣರಾಜ್ಯ ಸ್ಥಾಪನೆಗಾಗಿ ಹೋರಾಟ ಪ್ರಾರಂಭಿಸಿದರು. ನಾಲ್ಕು ವರ್ಷಗಳಾದ ಮೇಲೆ ೧೯೫೦ರಲ್ಲಿ ದೊರೆ ತ್ರಿಭುವನ್ ಪದಚ್ಯುತಗೊಂಡರು. ಭಾರತ ಸರಕಾರದ ಮಧ್ಯಸ್ಥಿಕೆಯಿಂದ ರಾಜಕೀಯ ಘರ್ಷಣೆ ಅಂತ್ಯಗೊಂಡಿತು. ಅರಸೊತ್ತಿಗೆಯ ನಿರಂಕುಶಾಧಿಕಾರವನ್ನು ಮೊಟಕುಗೊಳಿಸಿ ರಾಜಾಶ್ರಯದಲ್ಲಿ ಸೀಮಿತ ಪ್ರಜಾಪ್ರಭುತ್ವ ವ್ಯವಸ್ಥೆಯೊಂದನ್ನು ಅನುಷ್ಠಾನಕ್ಕೆ ತರಲಾಯಿತು. ಆದರೆ ಈ ವ್ಯವಸ್ಥೆ ಎಂದೂ ಸುಗಮ ವಾಗಿರಲಿಲ್ಲ. ಚುನಾಯಿತ ಪ್ರಜಾಪ್ರಭುತ್ವ ಸರಕಾರ ಅಸ್ತಿತ್ವದಲ್ಲಿದ್ದರೂ ಅಧಿಕಾರವೆಲ್ಲ ಚಲಾಯಿತವಾಗುತ್ತಿದ್ದುದು ರಾಜಮನೆತನದವರಿಂದ. ಹಾಗಾಗಿ ಚುನಾಯಿತ ಪ್ರತಿನಿಧಿಗಳು ಮತ್ತು ದೊರೆಯ ಪರಿವಾರದ ನಡುವೆ ಘರ್ಷಣೆಗಳು ಸಂಭವಿಸುತ್ತಲೇ ಇತ್ತು. ಚುನಾಯಿತ ಸರಕಾರಗಳನ್ನು ವಜಾಮಾಡಿ, ಅದರ ಸ್ಥಾನದಲ್ಲಿ ದೊರೆಯ ಮರ್ಜಿಗನುಸಾರ ನಡೆದು ಕೊಳ್ಳುವ ಆಡಳಿತ ಸ್ಥಾಪಿಸುವುದು ಆಗಾಗ್ಗೆ ನಡೆಯುತ್ತಲೇ ಇತ್ತು. ನಿರಂಕುಶಾಡಳಿತವನ್ನು ಕೊನೆಗೊಳಿಸಿ ಪೂರ್ಣ ಪ್ರಜಾಪ್ರಭುತ್ವ ಸ್ಥಾಪನೆಯತ್ತ ಸುಧಾರಣೆಗಳು ಮಾತ್ರ ಬರಲೇ ಇಲ್ಲ. ಆದರೆ ನೇಪಾಳದ ಎಚ್ಚೆತ್ತ ಜನತೆ ತಮ್ಮ ಹೋರಾಟವನ್ನು ಮುಂದುವರಿಸಿದರು.



ಈಗ ಅಧಿಕಾರದಲ್ಲಿರುವ ದೊರೆ ಜ್ಞಾನೇಂದ್ರ ಆಡಳಿತ ವಹಿಸಿಕೊಂಡದ್ದು ೨೦೦೧ರಲ್ಲಿ. ಒಂದು ವಿಶಿಷ್ಟ ಸಂದರ್ಭದಲ್ಲಿ, ಅರಮನೆಯಲ್ಲಿ ಜರುಗಿದ ಹತ್ಯಾಕಾಂಡದಿಂದ. ಅಧಿಕಾರ ದಲ್ಲಿದ್ದ ದೊರೆ ಬೀರೇಂದ್ರ ಮತ್ತವನ ಕುಟುಂಬದ ಹಲವು ಸದಸ್ಯರು ಆತನ ಮಗನ ಹುಚ್ಚು ಗುಂಡುದಾಳಿಗೆ ಬಲಿಯಾದ ಮೇಲೆಯೇ. ಈತ ಅಧಿಕಾರ ವಹಿಸಿಕೊಳ್ಳುವುದಕ್ಕೆ ಮುಂಚೆಯೇ ದೇಶದಲ್ಲಿ ರಾಜಕೀಯ ಪರಿಸ್ಥಿತಿ ಅಸ್ಥಿರವಾಗಿತ್ತು. ಆರ್ಥಿಕ ಬಿಕ್ಕಟ್ಟಿನ ಜೊತೆಗೆ ದೇಶದಲ್ಲಿ ಮಾವೋವಾದಿ ಕಮ್ಯುನಿಸ್ಟರ ಪ್ರಾಬಲ್ಯ ಅಧಿಕಗೊಂಡಿದ್ದು ಸಶಸ್ತ್ರ ಆಂದೋಳನ ಅಲ್ಲಲ್ಲಿ ನಡೆಯುತ್ತಿತ್ತು. ಇದನ್ನು ತಡೆಗಟ್ಟುವುದರಲ್ಲಿ ಸರಕಾರ ವಿಫಲಗೊಂಡಿದೆ ಎಂದು ನೆಪವೊಡ್ಡಿ ದೊರೆ ಜ್ಞಾನೇಂದ್ರ ಕಳೆದ ವರ್ಷ ಫೆಬ್ರುವರಿಯಲ್ಲಿ ಹಂಗಾಮಿ ಸರಕಾರವನ್ನು ವಜಾಮಾಡಿ ಅಧಿಕಾರವನ್ನು ಪೂರ್ಣವಾಗಿ ತನ್ನ ಕೈವಶ ಮಾಡಿಕೊಂಡ. ಅಂದಿನಿಂದ ನಿರಂಕುಶಾಡಳಿತವನ್ನು ನಡೆಸುತ್ತಿರುವ ಈತ ಪ್ರಮುಖ ರಾಜಕೀಯ ಪಕ್ಷಗಳ ನಾಯಕರು ಗಳನ್ನು ಬಂಧನದಲ್ಲಿರಿಸಿದ್ದಾನೆ. ದಬ್ಬಾಳಿಕೆಯ ವಿರುದ್ಧವಾಗಿ ಜನತೆ ಈಗ ಹೋರಾಟದಲ್ಲಿ ನಿರತರಾಗಿದ್ದಾರೆ. ನೆರೆರಾಜ್ಯದ ಈ ವಿದ್ಯಮಾನಗಳು ಕೈಮೀರಿ ಹೋಗದ ಹಾಗೆ ನೋಡಿ ಕೊಳ್ಳಲು ಭಾರತ ಸರಕಾರ ರಾಯಭಾರಿ ವರ್ಗಗಳಿಂದ ದೊರೆಯ ಮೇಲೆ ಒತ್ತಾಯ ತಂದು ಎಲ್ಲ ಪಕ್ಷಗಳ ಪ್ರತಿನಿಧಿಗಳನ್ನೊಳಗೊಂಡ ಸರಕಾರವೊಂದನ್ನು ಸ್ಥಾಪಿಸಿ, ಚುನಾವಣೆ ಗಳಿಗೆ ಸಿದ್ಧಗೊಳಿಸುವಂತೆ ಮಾಡಬೇಕಾಗಿದೆ. ಮಾವೋವಾದಿಗಳ ಪ್ರಾಬಲ್ಯದಿಂದ ಆತಂಕ ಗೊಂಡಿರುವ ಅಮೆರಿಕಾ ಈಗಾಗಲೇ ದೊರೆ ಜ್ಞಾನೇಂದ್ರ ಮೇಲೆ ಒತ್ತಾಯ ತರುತ್ತಿದೆ. ಸಮಯ ಸಂದರ್ಭ ನೋಡಿ ಅದು ಮಧ್ಯ ಪ್ರವೇಶಿಸಲು ಸಾಕು. ಅದಕ್ಕೆ ಅವಕಾಶವೀಯ ಕೂಡದು. ಪ್ರಪಂಚದ ಎಲ್ಲ ಪ್ರಜಾಪ್ರಭುತ್ವವಾದಿಗಳ ಬೆಂಬಲ ನೇಪಾಳದ ಜನರಿಗಿದೆ. ಅವರ ಈ ಹೋರಾಟ ವಿಜಯಶಾಲಿಯಾಗಿ, ನೇಪಾಳದಲ್ಲಿ ನಿಜವಾದ ಜನತಂತ್ರ ಸರಕಾರ ಸ್ಥಾಪನೆಗೊಳ್ಳಲಿ ಎಂಬುದೇ ನಮ್ಮ ಆಶಯ.

# 'ನ್ಯಾಟೋ' ಕೂಟದ ಕೃತ್ಯದ ಬಲಿಪಶು

ಅಮೆರಿಕಾದ ನೇತೃತ್ವದಲ್ಲಿರುವ ನ್ಯಾಟೋ ಕೂಟದ ಕುತಂತ್ರಗಳಿಂದಾಗಿ ಯುಗೋಸ್ಲಾವಿಯ ತುಂಡರಿದು ಮೂರು ಪಾಲಾಯಿತು. ಅನಂತರ ಜರುಗಿದ ಮಾರಣ ಹೋಮದಲ್ಲಿ ಈ ಕೂಟದ ಹೊಣೆಗಾರಿಕೆ ಅಧಿಕ ಪ್ರಮಾಣದ್ದಾಗಿದ್ದರೂ ಗೂಬೆಕೂರಿಸಿದ್ದು ಸೆರ್ಬಿಯಾದ ಮಾಜಿ ಅಧ್ಯಕ್ಷ ಸ್ಲೋಬೋದಾನ್ ಮಿಲೋಸೆವಿಕ್‌ನ ಮೇಲೆ. ನರಮೇಧದ ಆಪಾದನೆ ಹೊರಿಸಿ ಆತನನ್ನು ಅಂತಾರಾಷ್ಟ್ರೀಯ ಟ್ರಿಬ್ಯೂನಲ್ ಮುಂದೆ ವಿಚಾರಣೆಗೆ ಗುರಿ ಪಡಿಸಲಾಯಿತು. ಹೇಗ್‌ನ ಕಾರಾಗೃಹದ ಸೆಲ್ ಒಂದರಲ್ಲಿ ಏಕಾಂತವಾಸಿಯಾಗಿದ್ದ ಮಿಲೋಸೆವಿಕ್ ಮಾರ್ಚ್ ೧೮ರಂದು ಅಸುನೀಗಿದ. ವಿಚಾರಣೆಗೆ ಗುರಿಯಾದ ದೇಶ ವೊಂದರ ರಾಷ್ಟ್ರಾಧ್ಯಕ್ಷರಲ್ಲಿ ಈತನೇ ಮೊದಲಿಗ ಹಾಗೂ ಅಂತಾರಾಷ್ಟ್ರೀಯ ನ್ಯಾಯಾಂಗ ಬಂಧನದಲ್ಲಿ ಕಾರಾಗೃಹದಲ್ಲಿರುವಾಗಲೇ ಮರಣಿಸಿದವರಲ್ಲೂ ಮೊದಲಿಗ. ಈಗ ಇದೇ ನ್ಯಾಯಾಲಯದಲ್ಲಿ ಅದೇ ಆಪಾದನೆಯ ಮೇಲೆ ವಿಚಾರಣೆಗೆ ಗುರಿಯಾಗಿರುವ ಇರಾಕಿನ ಅಧ್ಯಕ್ಷ ಸದ್ದಾಮ್ ಹುಸೇನ್ ಎರಡನೆಯವನು. ಅವನ ಗತಿ ಏನಾಗುತ್ತದೋ ನೋಡಬೇಕು. ಮಿಲೋಸೆವಿಕ್ ಸಾವಿನ ಬಗ್ಗೆ ಅನೇಕ ಊಹಾಪೋಹಗಳಿವೆ. ಯುಗೋ ಸ್ಲಾವಿಯದ ಘಟನೆಗಳಿಗೆ ಪ್ರತ್ಯಕ್ಷದರ್ಶಿಯಾಗಿ, ಪ್ರಮುಖ ಪಾತ್ರಧಾರಿಗಳಲ್ಲೊಬ್ಬನಾಗಿದ್ದ ಈತನಿಗೆ ಎಲ್ಲ ವಿಷಯಗಳೂ ತಿಳಿದಿತ್ತು. ಅನಾರೋಗ್ಯದಿಂದ ಬಳಲುತ್ತಿದ್ದ ಈತ ನ್ಯಾಯಾಲಯದ ಮುಂದೆ ತಾನೇ ವಾದಿಸುತ್ತಿದ್ದ. ಪಶ್ಚಿಮ ರಾಷ್ಟ್ರಗಳ ಕುತಂತ್ರವನ್ನು

ಬಯಲಿಗೀಡುಮಾಡಿಯಾನೆಂಬ ಭಯದಿಂದ ಸಮರ್ಪಕವಾದ ಚಿಕಿತ್ಸೆ ವ್ಯವಸ್ಥೆಯನ್ನು ಮಾಡದೆ ನಿಧಾನವಾಗಿ ಸಾವಿಗೀಡುಮಾಡಲಾಯಿತೆಂಬ ವದಂತಿಯೂ ಇದೆ. ಅದೇನೇ ಇರಲಿ, ರಾಷ್ಟ್ರವೊಂದರ ಅಧಿಪತಿ ಅಂತಾರಾಷ್ಟ್ರೀಯ ನ್ಯಾಯಾಲಯದ ಸುಪರ್ದಿನಲ್ಲಿ ಕಾರಾಗೃಹದಲ್ಲೇ ಸಾವನ್ನಪ್ಪಿದ್ದು ಸಾಧಾರಣ ವಿಷಯವೇನಲ್ಲ. ಸುಮ್ಮನೆ ತಳ್ಳಿಹಾಕುವಂಥದ್ದೂ ಅಲ್ಲ.

ಮೊದಲನೇ ಮಹಾಯುದ್ಧದ ನಂತರ ಸ್ಲೋವೆನ್ನರು, ಸೆರ್ಬರು ಮತ್ತು ಕ್ರವೋಟರ್ ಒಂದುಗೂಡಿ ಸ್ಥಾಪಿಸಿಕೊಂಡ ರಾಷ್ಟ್ರ ಯುಗೋಸ್ಲಾವಿಯ. ಎರಡನೇ ಮಹಾಯುದ್ಧದ ಕಾಲದಲ್ಲಿ ಜರ್ಮನಿಯ ದುರಾಕ್ರಮಣಕ್ಕೀಡಾದ ಈ ರಾಷ್ಟ್ರದ ಜನತೆ ಫಾಸಿಸ್ಟ್ ಶಕ್ತಿಗಳ ವಿರುದ್ಧ ಭೂಗತ ಹೋರಾಟ ನಡೆಸಿದರು. ಯುದ್ಧಾನಂತರ ಮಾರ್ಷಲ್ ಟೀಟೊ ನಾಯಕತ್ವದಲ್ಲಿ ಶೀತಯುದ್ಧದ ಕಾಲದಲ್ಲಿ ಅಲಿಪ್ತ ನೀತಿಯನ್ನು ಅನುಸರಿಸಿದ ಮಧ್ಯ ಯೂರೋಪಿನ ಏಕೈಕ ರಾಷ್ಟ್ರ ಯುಗೋಸ್ಲಾವಿಯ. ಅಲಿಪ್ತ ಚಳವಳಿಯ ಸಂಘಟನೆಯಲ್ಲಿ ಬೆಳವಣಿಗೆಯಲ್ಲಿ ಪ್ರಮುಖ ಪಾತ್ರವಹಿಸಿದ್ದ ಟೀಟೋ ನೇತೃತ್ವದಲ್ಲಿ ಈ ಒಕ್ಕೂಟ ಸಾಕಷ್ಟು ಪ್ರಗತಿ ಸಾಧಿಸಿತು. ಆತನ ನಿಧನಾನಂತರ ಅಧಿಕಾರಕ್ಕೆ ಬಂದದ್ದು ಮಿಲೋಸೆವಿಕ್ (೧೯೮೯). ಸೋವಿಯೆತ್ ಒಕ್ಕೂಟದ ವಿಭಜನೆ (೧೯೯೨) ಯುಗೋಸ್ಲಾವಿಯ ಒಕ್ಕೂಟದ ಮೇಲೆ ಭಾರಿ ಪರಿಣಾಮ ಉಂಟುಮಾಡಿತು. ಪಶ್ಚಿಮ ದೇಶಗಳು, ಮುಖ್ಯವಾಗಿ ಜರ್ಮನಿ, ಕ್ರೊಯೇಷಿಯ ಮತ್ತು ಸ್ಲೊವೇನಿಯ ಒಕ್ಕೂಟದಿಂದ ಪ್ರತ್ಯೇಕಗೊಂಡು ಸ್ವತಂತ್ರಗೊಳ್ಳುವಂತೆ ಪ್ರೇರೇಪಿಸಿದುವು. ಅಲ್ಲಿಂದ ಪ್ರಾರಂಭವಾಯಿತು ಯುಗೋಸ್ಲಾವಿಯದ ದುರಂತ. ಈ ಪ್ರದೇಶದಲ್ಲಿ ಜರ್ಮನಿ ಅಥವಾ ಯೂರೋಪಿಯನ್ ಯೂನಿಯನ್ ಪ್ರಾಬಲ್ಯ ಬೆಳೆಸಿಕೊಳ್ಳುವುದನ್ನು ಸಹಿಸದ ಅಮೆರಿಕಾ ಮಧ್ಯೆ ಪ್ರವೇಶಿಸಿತು. ಈ ಎಲ್ಲ ಬೆಳವಣಿಗೆಗಳೂ ಅನಗತ್ಯವಾದ ಹಿಂಸಾಚಾರಗಳಿಗೆ, ಅಂತರ್ಯುದ್ಧಕ್ಕೆ ಎಡೆಕೊಟ್ಟಿತು. ಅಮೆರಿಕಾಗೆ ಬೇಕಾಗಿದ್ದುದು ಅದೇ. ಪರಿಸ್ಥಿತಿ ನಿಯಂತ್ರಿಸುವ ಹೆಸರಿನಲ್ಲಿ ನ್ಯಾಟೋ ಹೆಸರಿನಲ್ಲಿ ದಾಳಿ ನಡೆಸಲಾಯಿತು. ನ್ಯಾಟೋ ಕೂಟ ನಡೆಸಿದ ಬಾಂಬು ದಾಳಿಯಲ್ಲಿ ಸಾಕಷ್ಟು ಸಂಖ್ಯೆಯ ಜನ ಅಸುನೀಗಿದರು. ಮುಖ್ಯವಾಗಿ ಬೋಸ್ನಿಯಾ ಪ್ರಾಂತ್ಯದ ಪ್ರತ್ಯೇಕ ವಾದಿಗಳ ಮೇಲೆ ಯುಗೋಸ್ಲಾವಿಯ (ಸೆರ್ಬಿಯ) ಆಡಳಿತೆಯ ದಬ್ಬಾಳಿಕೆ ಹಾಗೂ ನ್ಯಾಟೋ ದಾಳಿಯಿಂದ ಸಾಕಷ್ಟು ಹಾನಿಯಾಯಿತು. ಈ ಪರಿಸ್ಥಿತಿಗೆ ಹೊಣೆ ಸೆರ್ಬಿಯಾದ ನಾಯಕ ಮಿಲೋಸೆವಿಕ್‌ನಷ್ಟೇ ನ್ಯಾಟೋ ಕೂಡ. ಆದರೆ ಎಲ್ಲ ಅಪರಾಧವನ್ನೂ ಹೊರಿಸಿದ್ದು ಮಾತ್ರ ಆತನೊಬ್ಬನ ಮೇಲೆಯೇ. ಮಿಲೋಸೆವಿಕ್ ವಿಚಾರಣೆ ಸಂಪೂರ್ಣ ವಾಗಿ ಅಕ್ರಮವಾದದು ಎಂದು ಖ್ಯಾತ ಆಂಗ್ಲ ಸಾಹಿತಿ, ನೊಬೆಲ್ ಪುರಸ್ಕೃತ ಹೆರಾಲ್ಡ್ ಪಿಂಟರ್ ಅಭಿಪ್ರಾಯಪಟ್ಟಿದ್ದಾರೆ. ಸೆರ್ಬಿಯದ ಜನತೆ ಇದೊಂದು ಉದ್ದೇಶಪೂರಿತ ಕೊಲೆ ಎಂದು ಭಾವಿಸಿದ್ದಾರೆ. ಸತ್ಯ ಹೊರಬೀಳದ ಹಾಗೆ ನೋಡಿಕೊಳ್ಳುವುದರಲ್ಲಿ ಅಮೆರಿಕಾ ಮತ್ತು ನ್ಯಾಟೋ ಸಫಲಗೊಂಡಿವೆ. ಯಾವ ವಕೀಲರ ನೆರವೂ ಇಲ್ಲದೆ ವಿಚಾರಣೆಯ ಕಾಲದಲ್ಲಿ ತಾವೇ ವಾದಿಸುತ್ತಿದ್ದ ಮಿಲೋಸೆವಿಕ್ ಪಶ್ಚಿಮ ರಾಷ್ಟ್ರಗಳಿಗೆ, ಅಮೆರಿಕಾಗೆ ಇರುಸು ಮುರುಸಾಗುವ ಮಾಹಿತಿಗಳನ್ನು ನೀಡುವ ಸಾಧ್ಯತೆ ಇತ್ತು. ಅದಕ್ಕೇ ಅವರ ಸಾವು ಸಂಭವಿಸಿತು ಎಂಬ ಗುಮಾನಿಯೂ ಇದೆ.

# ಫ್ರೆಂಚ್ ಕಾರ್ಮಿಕರ ಯಶಸ್ಸು

ಫ್ರೆಂಚ್ ಸರಕಾರದ ಕಾರ್ಮಿಕ ವಿರೋಧಿ ನೀತಿಯನ್ನು ಹಿಮ್ಮೆಟ್ಟಿಸುವುದರಲ್ಲಿ ಫ್ರಾನ್ಸ್‌ನ ಕಾರ್ಮಿಕರು ಯಶಸ್ಸುಗಳಿಸಿದ್ದಾರೆ. ಇತ್ತೀಚಿಗೆ ಫ್ರಾನ್ಸ್‌ನ ಟ್ರೇಡ್ ಯೂನಿಯನ್‌ಗಳು ಮತ್ತು ವಿದ್ಯಾರ್ಥಿ ಸಂಘಟನೆಗಳು ನಡೆಸಿದ ರಾಷ್ಟ್ರವ್ಯಾಪಿ ಮುಷ್ಕರ ಹಾಗೂ ಪ್ರದರ್ಶನಗಳು ಜಗತ್ತಿನ ಎಲ್ಲ ಜನರ ಗಮನ ಸೆಳೆದಿವೆ. ಬಹುರಾಷ್ಟ್ರೀಯ ಕಂಪನಿಗಳಿಗೆ ಅನುಕೂಲವಾಗುವಂತೆ ಹೊಸ ಉದ್ಯೋಗ ಕಂಟ್ರಾಕ್ಟ್ ವ್ಯವಸ್ಥೆಯನ್ನು ಸರಕಾರ ಜಾರಿಗೆ ತಂದಿದೆ. ಈ ವ್ಯವಸ್ಥೆಯ ಪ್ರಕಾರ ಇಪ್ಪತ್ತಾರು ವಯಸ್ಸಿನ ಕೆಳಗಿರುವವರನ್ನು ಕೆಲಸಕ್ಕೆ ನೇಮಕ ಮಾಡಿಕೊಳ್ಳುವಾಗ ಎಷ್ಟು ಕಾಲ ಬೇಕಾದರೂ ತರಬೇತಿಯ ಅವಧಿಯಾಗಿಸಿ, ಬೇಕಾದಾಗ ಕೆಲಸದಿಂದ ತೆಗೆದು ಹಾಕಲು ಅವಕಾಶ ನೀಡಲಾಗಿತ್ತು. ಜಾಗತೀಕರಣದ ಹಿನ್ನೆಲೆಯಲ್ಲಿ ಕಾರ್ಮಿಕವರ್ಗದ ಹಕ್ಕುಗಳ ಮೇಲೆ ಜಗತ್ತಿನಾದ್ಯಂತ ನಡೆಯುತ್ತಿರುವ ದಾಳಿಯ ಪೈಕಿ ಇದೂ ಒಂದಾಗಿತ್ತು. ಫ್ರಾನ್ಸ್‌ನ ಕಾರ್ಮಿಕರು ಅದಕ್ಕೆ ಸರಿಯಾದ ಉತ್ತರ ನೀಡಿದ್ದಾರೆ. ಈಗಾಗಲೇ ಶೇ. ೨೫ರಷ್ಟು ನಿರುದ್ಯೋಗದ ಪ್ರಮಾಣವನ್ನು ಹೊಂದಿರುವ ಫ್ರಾನ್ಸ್‌ನಲ್ಲಿ ಈ ಪ್ರಮಾಣ ಇನ್ನಷ್ಟು ಹೆಚ್ಚುವ ಸಾಧ್ಯತೆ ಇತ್ತು. ಫ್ರಾನ್ಸ್‌ನ ಎಡಪಕ್ಷಗಳು ಮತ್ತು ಟ್ರೇಡ್ ಯೂನಿಯನ್‌ಗಳು, ಪಾರ್ಟಿ ಸಂಘಟನೆಗಳು ನಡೆಸಿದ ಬೃಹತ್ ಪ್ರದರ್ಶನಗಳು, ಮುಷ್ಕರಗಳು ಇಡೀ ದೇಶದ ಜನಜೀವನವನ್ನು ಅಸ್ತವ್ಯಸ್ತಗೊಳಿಸಿತು. ತೀವ್ರವಾದ ಪ್ರತಿಭಟನೆಯ ಎದುರಿನಲ್ಲಿ ಕೊನೆಗೆ ಸರಕಾರ ಹಿಮ್ಮೆಟ್ಟಬೇಕಾಯಿತು. ಈ ಯಶಸ್ಸು ಸಾಧಿಸಿದ ಫ್ರಾನ್ಸ್‌ನ ಕಾರ್ಮಿಕರು ಅಭಿನಂದನಾರ್ಹರು.

ಫ್ರಾನ್ಸ್‌ನ ಕಾರ್ಮಿಕರ ಈ ಹೋರಾಟ ಇತರ ದೇಶಗಳ ಕಾರ್ಮಿಕರಿಗೂ ಒಳ್ಳೆಯ ಪಾಠವಾಗಿದೆ. ಮುಖ್ಯವಾಗಿ ಭಾರತದ ಟ್ರೇಡ್ ಯೂನಿಯನ್ ಸಂಘಟನೆಗಳು ಇದರಿಂದ ಕಲಿಯಬೇಕಾಗಿದೆ. ವಿದೇಶೀ ಬಂಡವಾಳದ ಆಕರ್ಷಣೆ, ಜಾಗತೀಕರಣ, ಉದಾರೀಕರಣ ಇವುಗಳ ಹಿನ್ನೆಲೆಯಲ್ಲಿ ನಮ್ಮ ದೇಶದಲ್ಲಿ ಕಾರ್ಮಿಕರ ಹಕ್ಕುಗಳ ಮೇಲೆ ದಾಳಿ ನಡೆಯುತ್ತಿದೆ. ಇತ್ತೀಚಿನ ವರ್ಷಗಳಲ್ಲಿ ನ್ಯಾಯಾಲಯದ ತೀರ್ಪುಗಳೂ ಹೆಚ್ಚು ಹೆಚ್ಚು ಕಾರ್ಮಿಕ ವಿರೋಧಿಯಾಗುತ್ತಿವೆ. ಕೇಂದ್ರದಲ್ಲಿ ಆಡಳಿತದಲ್ಲಿರುವ ಮನಮೋಹನ್ ಸಿಂಗ್ ಸರಕಾರ ಅಂಗೀಕೃತವಾಗಿರುವ ಕನಿಷ್ಠ ಕಾರ್ಯಕ್ರಮವನ್ನು ಕಡೆಗಣಿಸಿ ಕಾರ್ಮಿಕ ಕಾಯಿದೆಗೆ ತಿದ್ದುಪಡಿಗಳನ್ನು ತರಲು ನೋಡುತ್ತಿದೆ. ಟ್ರೇಡ್ ಯೂನಿಯನ್‌ಗಳ ಪ್ರತಿಭಟನೆಯನ್ನು ಲೆಕ್ಕಿಸದೆ ಖಾಸಗೀ ವಲಯಕ್ಕೆ ಹೆಚ್ಚು ಒತ್ತು ನೀಡುತ್ತಿದೆ. ಸರಕಾರವೇ ನಿರ್ವಹಿಸಬೇಕಾಗಿರುವ, ನಿರ್ವಹಿಸಬಲ್ಲ ಕಾಮಗಾರಿಗಳನ್ನು ಉದ್ದೇಶಪೂರ್ವಕವಾಗಿ ಖಾಸಗಿ ಉದ್ಯಮ ಸಂಸ್ಥೆಗಳಿಗೆ ವಹಿಸಿಕೊಡಲಾಗುತ್ತಿದೆ. ಇಂಥ ಸಂದರ್ಭದಲ್ಲಿ ಕಾರ್ಮಿಕವರ್ಗ ಒಂದುಗೂಡಿ ಪ್ರತಿಭಟನೆ ನಡೆಸಿ ಸರಕಾರದ ಕಾರ್ಮಿಕ ವಿರೋಧಿ ನೀತಿಯನ್ನು ಹಿಮ್ಮೆಟ್ಟಿಸಬೇಕಾಗಿದೆ. ಫ್ರಾನ್ಸ್‌ನ ಟ್ರೇಡ್ ಯೂನಿಯನ್‌ಗಳ ಐಕ್ಯತೆ, ಸ್ಥೈರ್ಯವನ್ನು ನಮ್ಮ ಟ್ರೇಡ್ ಸಂಘಟನೆಗಳು ತೋರುವುದು ಜರೂರು ಅವಶ್ಯಕತೆಯಾಗಿದೆ.

ಸೀಯಾರ್ಕೆ
'ಚೌಬೀನ', ೮೪೯, ಬನಶಂಕರಿ ೩ನೇ ಹಂತ, ಕತ್ರಿಗುಪ್ಪೆ, ಬೆಂಗಳೂರು - ೫೬೦ ೦೮೫

೫೨ನೇ ಪುಟದಿಂದ *(ಅರಿವಿನ ಕಥನ)*

ಅಳಿಸಿಹಾಕುತ್ತಿದೆ ಎನ್ನುವ ಭೀತಿ ಈಗ ಎಲ್ಲರನ್ನೂ ಕಾಡುತ್ತಿದೆ. ಹೀಗೆ ಯೋಚಿಸುತ್ತಿರುವವರೆಲ್ಲ ಈಗ ಜಾಗತೀಕರಣವೆಂಬ ದೋಣಿಯಲ್ಲೇ ಕುಳಿತು ಪ್ರಯಾಣಿಸುತ್ತಿದ್ದಾರೆ. ಜಾಗತೀಕರಣದ ಈ ಸುನಾಮಿ ಪ್ರಪಂಚದ ಇತಿಹಾಸದಲ್ಲಿಯೆ ಇನ್ನೆಂದೂ ಕಾಣದ, ಕಂಡರಿಯದ ಮಟ್ಟದಲ್ಲಿ ಜನರ ಮಧ್ಯೆ ಅನೇಕ ಕಂದಕಗಳನ್ನು ಸೃಷ್ಟಿಸಿದೆ. ರಾಜರು, ಜಮೀನುದಾರರ ಬದಲಿಗೆ ಈಗ ಬಹುಮಿಲಿಯರು ಮತ್ತು ಬಹುಮಿಲಿಯ ಕಂಪನಿಗಳು ಪ್ರಪಂಚದಾದ್ಯಂತ ಸೃಷ್ಟಿಯಾಗುತ್ತಿವೆ. ಈ ಹೊತ್ತಿನಲ್ಲಿ ಹಿಂದೂ ಸಮಾಜದ ಮಧ್ಯ ನಿಂತುಕೊಂಡು ನೋಡುತ್ತಿದ್ದರೆ ನನಗೊಂದು ಆಲೋಚನೆ ಬರುತ್ತಿದೆ. ಈ ಜಾಗತೀಕರಣದ ಸುನಾಮಿಯಲ್ಲಿ ಮೇಲು-ಕೀಳು, ಜಾತಿಗಳು, ಅಸ್ಪೃಶ್ಯತೆ, ಮೂಢ ನಂಬಿಕೆಗಳೆಂಬ ಹೊಲಸು ಕೊಚ್ಚಿಕೊಂಡು ಹೋಗುವುದೇ ಆದರೆ ಅದು ಎಂತಹ ಒಂದು ಒಳ್ಳೆಯ ಬೆಳವಣಿಗೆ ಎಂದು ಚಿಂತಿಸುತ್ತೇನೆ.

ಈ ಹೊತ್ತಿನಲ್ಲಿ ಜಾಗತೀಕರಣದ ವಿರುದ್ಧವಾಗಿ ಈಜಿ ನಿಲ್ಲಬೇಕೆಂದರೆ ಅಗಾಧ ಪ್ರಜ್ಞೆ, ದೃಢ ನಿಲುವು, ಎದೆಗಾರಿಕೆ ಬೇಕು ಎನ್ನುವುದು ಕೆಲವರ ವಾದ. ಮಲ್ಲೇಪುರಂ ಅವರ ಚಿಂತನೆಗಳಲ್ಲಿ ಸಮಕಾಲೀನತೆಯ ರೂಪರೇಷೆಗಳು ಅಡಗಿದ್ದು ಬಲವಾದ ಸಾಹಿತ್ಯ ಅಧ್ಯಯನ, ಸಾಂಸ್ಕೃತಿಕ ಅಧ್ಯಯನವಾಗಿ, ಅದೊಂದು ಸಾಮಾಜಿಕ-ರಾಜಕೀಯ ಚಿಂತನೆಯಾಗಿ ಬೆಳೆಯಬೇಕಾಗಿದೆ ಮತ್ತು ಬೆಳೆಸಬೇಕಾಗಿದೆ. ಭಾರತದ ದೇಶಿ ಭಾಷೆಗಳಲ್ಲಿ ಅನೇಕ ಅನುಭಾವಿಗಳ ಚಿಂತನೆಗಳಿದ್ದು ಇಂತಹ ಅನುಭಾವದ ಚಿಂತನೆಗಳಿಂದಲೇ ಇದುವರೆಗೆ ಮೂಲ ಸಂಸ್ಕೃತಿಯ ರೂಪಕಗಳು ಮತ್ತು ಹೊಳಹುಗಳು ಉಳಿದುಕೊಂಡು ಬಂದಿವೆ.

ಇದಕ್ಕಾಗಿಯೇ ಮಲ್ಲೇಪುರಂ ಅವರ ಸಂಸ್ಕೃತಿ ಸಂಬಂಧೀ ಲೇಖನಗಳ ಈ ಕಟ್ಟು ನಮ್ಮ ಸಂಸ್ಕೃತಿಯನ್ನು ಉಳಿಸಿಕೊಳ್ಳಲು ಮುಖ್ಯವಾಗುತ್ತದೆ. ಇದನ್ನು, ಅವರು ತಮ್ಮ ಕೃತಿಯಲ್ಲಿ ಹೀಗೆ ಹೇಳಿದ್ದಾರೆ : ''ಇದು ಶುದ್ಧಾಂಗವಾಗಿ ವಿಮರ್ಶೆಗೆ ಸಂಬಂಧಿಸಿದ್ದಲ್ಲ, ನಮ್ಮ ನಡುವಿನ ಹಲವು-ಹತ್ತು ವಿಚಾರಗಳನ್ನು ಕುರಿತಾದ ಕಟ್ಟು ಇದಾಗಿದೆ. ನೆನ್ನೆ ಎಂಬುದು ಇವತ್ತಿನಲ್ಲೇ ಸಂಭವಿಸುತ್ತಿರುವುದರಿಂದ ನಿನ್ನೆಯ ಮರೆವು. ಇಂದಿನ ಇರವಿನ ಅರಿವಿನಲ್ಲೇ ಪ್ರತ್ಯಕ್ಷಗೊಳ್ಳಬೇಕೆಂಬುದು ನನ್ನ ಉದ್ದೇಶ.'' ಅವರ ಈ ಮಾತುಗಳು ಈ ಕಟ್ಟಿನ ಲೇಖನಗಳಲ್ಲಿ ಸಾಬೀತಾಗಿದೆ. ಪುಂಡಲೀಕ ಕಲ್ಲಿಗನೂರು ಅವರ ಸುಂದರ ಮುಖಪುಟದೊಂದಿಗೆ ಈ ಸಂಸ್ಕೃತಿ ಕಟ್ಟು ಅಂದವಾಗಿ ಮುದ್ರಣಗೊಂಡಿದೆ. ಇತ್ತೀಚೆಗೆ ಸಿವಿಜಿ ಪಬ್ಲಿಕೇಷನ್ಸ್‌ನವರು ಕುವೆಂಪು ಶತಮಾನೋತ್ಸವದ ಅಂಗವಾಗಿ ಬಿಡುಗಡೆ ಮಾಡಿದ ನೂರು ಕೃತಿಗಳಲ್ಲಿ ಈ ಕೃತಿಯೂ ಒಂದು.

ಎಂ. ವೆಂಕಟಸ್ವಾಮಿ
೫೭ಎ, 'ಕ್ರಾಂತಿನಿವಾಸ', ಸಾಯಿ ಲೋಟಸ್ ಬಡಾವಣೆ, ಸುಬ್ರಹ್ಮಣ್ಯಪುರ ಪೋಸ್ಟ್, ಬೆಂಗಳೂರು - ೬೧

# ಸುಗಂಧ ಚಿಕಿತ್ಸೆ

ಡಾ|| ವಸುಂಧರಾ ಭೂಪತಿ

ಅನೇಕ ಶತಮಾನಗಳಿಂದ ಪ್ರಪಂಚದಾದ್ಯಂತ ಬಳಸಲ್ಪಡುತ್ತಿರುವ ಗಿಡಮೂಲಿಕಾ ಚಿಕಿತ್ಸೆಯ ಒಂದು ವಿಭಾಗವೇ ಸುಗಂಧ ಚಿಕಿತ್ಸೆ. ಭಾರತದ ಅತ್ಯಮೂಲ್ಯ ಲೋಹಗಳು, ಕಲ್ಲುಗಳು, ವಸ್ತ್ರಗಳು, ಸಂಬಾರ ಪದಾರ್ಥಗಳು, ಸ್ವಾಭಾವಿಕವಾಗಿ ದೊರೆಯುವ ಸುಗಂಧದೆಣ್ಣೆಗಳಿಗಾಗಿ ಪ್ರಪಂಚದ ಎಲ್ಲೆಡೆಯೂ ಬಹು ಬೇಡಿಕೆ ಇದೆ. ಆಧುನಿಕ ವೈದ್ಯಶಾಸ್ತ್ರದ ಪಿತಾಮಹ ಹಿಪ್ಪೊಕ್ರೆಟಿಸ್ ಅಮೂಲ್ಯ ಔಷಧಿ ತೈಲಗಳ ಹೊಗೆ ಸೇವನೆ ಮತ್ತು ಶಾಖ ತೆಗೆದುಕೊಳ್ಳುವುದರಿಂದ ಅನೇಕ ಕಾಯಿಲೆಗಳು ವಾಸಿಯಾಗುತ್ತವೆಂದು ತಿಳಿಸಿದ್ದಾನೆ. ರೋಮನ್ನರು ಸುಗಂಧ ದ್ರವ್ಯಗಳನ್ನು ತಮ್ಮ ದೇಹಕ್ಕೆ ಲೇಪಿಸಿಕೊಳ್ಳಲು, ತಲೆಗೂದಲಿಗೆ ಹಚ್ಚಿಕೊಳ್ಳಲು ಮತ್ತು ವಸ್ತ್ರಗಳಿಗೆ ಸಿಂಪಡಿಸಿಕೊಳ್ಳಲು ಬಳಸುತ್ತಿದ್ದರು. ರೋಮನ್ ಸಾಮ್ರಾಜ್ಯ ಅಳಿದ ನಂತರ ಸುಗಂಧ ದ್ರವ್ಯಗಳು ಪರ್ಶಿಯಾ ಮತ್ತು ಅರಬ್ ರಾಜ್ಯಗಳಿಗೆ ಪ್ರಯಾಣ ಬೆಳೆಸಿದವು. ಅರೇಬಿಯಾದ ಒಬ್ಬ ಮಹಾನ್ ವೈದ್ಯ ಪಂಡಿತ, ಲೇಖಕ (ಕ್ರಿ.ಶ. ೯೮೦-೧೦೩೭) ಗುಲಾಬಿಯ ಮೇಲೆಯೇ ಒಂದು ಪುಸ್ತಕ ರಚಿಸಿದ. ಇದು ಇಸ್ಲಾಂ ಧರ್ಮದಲ್ಲಿ ಮಹತ್ವದ ಸ್ಥಾನ ಪಡೆದುಕೊಂಡಿವೆ. ಧರ್ಮಯುದ್ಧದ ನಂತರ ಸ್ವಾಭಾವಿಕ ಸುಗಂಧ ತೈಲಗಳು ಯೂರೋಪಿಗೆ ಆಗಮಿಸಿದವು. ೧೫ನೇ ಶತಮಾನದ ನಂತರ ಯೂರೋಪ್ ಗಿಡ ಮೂಲಿಕೆಗಳು, ಲ್ಯಾವೆಂಡರ್, ರೋಸ್ ಮೇರಿ ಸುಗಂಧ ತೈಲಗಳ ಅಲ್ಲಿ ಸಿಕ್ಕಿರುವ ಸುಗಂಧ ದ್ರವ್ಯಗಳನ್ನಿಡುತ್ತಿದ್ದ ಕುಡಿಕೆಗಳನ್ನು ಗಮನಿಸಿದಾಗ ಕ್ರಿ.ಪೂ. ೩೦೦೦ ದಿಂದಲೇ ಉಪಯೋಗಿಸುತ್ತಿದ್ದರೆಂದು ಅರಿವಿಗೆ ಬರುತ್ತಿದೆ. ದಾಲ್ಚಿನ್ನಿ, ಶುಂಠಿ, ಶ್ರೀಗಂಧ ಮುಂತಾದವುಗಳು ಶರೀರ ಮತ್ತು ಮನಸ್ಸಿನ ಮೇಲೆ ಯಾವ ರೀತಿ ಕಾರ್ಯ ನಿರ್ವಹಿಸುತ್ತವೆಂದು ಹೇಳಿದ್ದಾರೆ. ಪ್ರಮುಖ ಸುಗಂಧ (ಅತ್ತರ್)ವನ್ನು ಎಲ್ಲಾ ಧಾರ್ಮಿಕ ಕಾರ್ಯಕ್ರಮಗಳು, ಮದುವೆ ಮುಂತಾದ ಸಮಾರಂಭಗಳಲ್ಲಿ ಬಳಸಲಾಗುತ್ತಿತ್ತು. ಆಯುರ್ವೇದ ಚಿಕಿತ್ಸೆಯಲ್ಲಿ ಮನಸ್ಸಿನ ಶಾಂತ ಸ್ಥಿತಿ ಕಾಪಾಡಲು, ಮಾನಸಿಕ ಅಸ್ವಸ್ಥತೆ ಹೋಗಲಾಡಿಸಲು ಮತ್ತು ಚರ್ಮದ ಕಾಂತಿಗೆ ಶರೀರಕ್ಕೆ ಲೇಪಿಸುವ ಎಣ್ಣೆ ತಯಾರಿಸಲು ಸುಗಂಧ ದ್ರವ್ಯಗಳ ಬಳಕೆಯಾಗುತ್ತದೆ. ಮಾನಸಿಕ/ಭಾವನಾತ್ಮಕ ಏರುಪೇರುಗಳುಂಟಾದಾಗ ಸುಗಂಧ ಚಿಕಿತ್ಸೆ ಬಹಳ ಪರಿಣಾಮಕಾರಿಯಾಗಿ ಕೆಲಸ ಮಾಡುತ್ತದೆ.

**ಚಂಚಲ ತೈಲ (ಸುಗಂಧ ತೈಲ)**

ಸಸ್ಯದ ಜೀವಕೋಶಗಳಲ್ಲಿ ಸೂರ್ಯನ ಬೆಳಕಿನಿಂದ ತಯಾರಾದ ಚಂಚಲ ತೈಲ ಸೂರ್ಯನ ಚಿಕಿತ್ಸಾಶಕ್ತಿಯ ಆಗರ. ವಿಧವಿಧವಾದ ಹೂಗಳಲ್ಲಿ, ಎಲೆಗಳಲ್ಲಿ, ಸಂಬಾರ ಪದಾರ್ಥಗಳಲ್ಲಿ, ಹಣ್ಣುಗಳಲ್ಲಿ, ತೊಗಟೆಯಲ್ಲಿ, ಕಟ್ಟಿಗೆಯಲ್ಲಿ ಉತ್ತಮವಾದ ಪರಿಮಳ ಅಡಗಿರುತ್ತದೆ. ಈ ಪರಿಮಳಯುಕ್ತ ದ್ರವ್ಯಗಳು ಪ್ರಕೃತಿಯ ಸನಿಹಕ್ಕೆ ನಮ್ಮನ್ನು ಸೆಳೆಯುತ್ತವೆ. ಮನಸ್ಸನ್ನು ಪ್ರಶಾಂತವಾಗಿರಿಸುತ್ತವೆ, ಮುದ

೧೯೨೮ರಲ್ಲಿ ಫ್ರೆಂಚ್ ರಸಾಯನ ಶಾಸ್ತ್ರಜ್ಞ ಗಾಟ್ಟೆ ಫೊಸ್ಸೊ ಈ ಸುಗಂಧ ಚಿಕಿತ್ಸೆಯನ್ನು ಪುನರುಜ್ಜೀವನಗೊಳಿಸಿದ. ಡಾ|| ಜೀನ್ ವಾಲ್ನೆಟ್ ಆರೋಮ ಚಿಕಿತ್ಸೆಯ ಕುರಿತು ೧೯೬೪ರಲ್ಲಿ ಪ್ರಚಾರಪಡಿಸಿದ. ಈತನ ಶಿಷ್ಯೆ ಮೇಡಂ ಮಾರ್ಗರೇಟ್ ಮೇರಿ ಚಂಚಲ ತೈಲಗಳನ್ನು ಅದರಲ್ಲಿನ ಸುಗಂಧ ಗುಣ ಮತ್ತು ಔಷಧೀಯ ಗುಣಗಳಿಗಾಗಿ ಕಾಂತಿವರ್ಧಕಗಳಲ್ಲಿ ಉಪಯೋಗಿಸಲು ಪ್ರಾರಂಭ ಮಾಡಿದರು. ಇತ್ತೀಚೆಗೆ ಮತ್ತೆ ಚಂಚಲ ತೈಲಗಳನ್ನು ಕಾಂತಿ ವರ್ಧಕಗಳಲ್ಲಿ ಶೃಂಗಾರಗಳಲ್ಲಿ ಸಾಮಗ್ರಿಗಳ ತಯಾರಿಕೆಯಲ್ಲಿ ಹೆಚ್ಚು ಬಳಸಲಾಗುತ್ತಿದೆ. ಆದ್ದರಿಂದ ಸುಗಂಧ ದ್ರವ್ಯಗಳು ಮತ್ತೆ ತಮ್ಮ ಮಹತ್ವವನ್ನು ಮರಳಿ ಪಡೆಯುತ್ತಿವೆ.

ತಯಾರಿಕೆಗೆ ಬಹಳ ಜನಪ್ರಿಯತೆ ಪಡೆದುಕೊಂಡಿತ್ತು. ೧೭ನೇ ಶತಮಾನದ ಕೊನೆಯಲ್ಲಿ ಸುಗಂಧ ದ್ರವ್ಯಗಳನ್ನು ಎರಡು ವಿಧವಾಗಿ ವಿಂಗಡಿಸಲಾಯಿತು. ಸುಗಂಧ ತೈಲಗಳು ಮತ್ತು ಆಲ್ಕೆಮಿ (ಕ್ಷುದ್ರ ಲೋಹಗಳನ್ನು ಚಿನ್ನವನ್ನಾಗಿ ಪರಿವರ್ತಿಸುವ ವಿಧಾನ) ಎಂದು ಎರಡು ಬಗೆಯಾಗಿ ಬೇರ್ಪಡಿಸಲಾಯಿತು.

೧೯೨೮ರಲ್ಲಿ ಫ್ರೆಂಚ್ ರಸಾಯನ ಶಾಸ್ತ್ರಜ್ಞ ಗಾಟ್ಟೆ ಫೊಸ್ಸೊ ಈ ಸುಗಂಧ ಚಿಕಿತ್ಸೆಯನ್ನು ಪುನರುಜ್ಜೀವನಗೊಳಿಸಿದ. ಡಾ|| ಜೀನ್ ವಾಲ್ನೆಟ್ ಆರೋಮ ಚಿಕಿತ್ಸೆಯ ಕುರಿತು ೧೯೬೪ರಲ್ಲಿ ಪ್ರಚಾರಪಡಿಸಿದ. ಈತನ ಶಿಷ್ಯೆ ಮೇಡಂ ಮಾರ್ಗರೇಟ್ ಮೇರಿ ಚಂಚಲ ತೈಲಗಳನ್ನು ಅದರಲ್ಲಿನ ಸುಗಂಧ ಗುಣ ಮತ್ತು ಔಷಧೀಯ ಗುಣಗಳಿಗಾಗಿ ಕಾಂತಿವರ್ಧಕಗಳಲ್ಲಿ ಉಪಯೋಗಿಸಲು ಪ್ರಾರಂಭ ಮಾಡಿದರು. ಇತ್ತೀಚೆಗೆ ಮತ್ತೆ ಚಂಚಲ ತೈಲಗಳನ್ನು ಕಾಂತಿ ವರ್ಧಕಗಳಲ್ಲಿ ಶೃಂಗಾರಗಳಲ್ಲಿ ಸಾಮಗ್ರಿಗಳ ತಯಾರಿಕೆಯಲ್ಲಿ ಹೆಚ್ಚು ಬಳಸಲಾಗುತ್ತಿದೆ. ಆದ್ದರಿಂದ ಸುಗಂಧ ದ್ರವ್ಯಗಳು ಮತ್ತೆ ತಮ್ಮ ಮಹತ್ವವನ್ನು ಮರಳಿ ಪಡೆಯುತ್ತಿವೆ.

ಭಾರತದಲ್ಲಿ ೫೦೦೦ ವರ್ಷಗಳ ಹಿಂದೆಯೇ ಶುದ್ಧೀಕರಿಸಿದ ಚಿಕಿತ್ಸೆಯಲ್ಲಿ ಪುಷ್ಪದ್ರವಗಳನ್ನು ಬಳಸುತ್ತಿದ್ದರೆಂದು ತಿಳಿದುಬರುತ್ತದೆ. ಇತ್ತೀಚೆಗೆ ಪಾಕಿಸ್ತಾನದಲ್ಲಿ ಸಿಂಧೂ ನದಿಯ ಸಂಸ್ಕೃತಿಯ ಕುರುಹಾಗಿ ಪ್ರಕೃತ ಶುದ್ಧೀಕರಣ ಯಂತ್ರವೊಂದು ಉತ್ಖನನ ಶಾಸ್ತ್ರಜ್ಞರಿಗೆ ದೊರೆತಿದೆ. ಅಲ್ಲದೇ ನೀಡುತ್ತವೆ, ಜ್ಞಾನೇಂದ್ರಿಯಗಳನ್ನು ಪ್ರಚೋದಿಸುತ್ತವೆ. ಅನೇಕ ಚಂಚಲ ತೈಲಗಳು ಕ್ರಿಮಿಹರ ಮತ್ತು ಸೋಂಕು ರೋಧಕಗಳಾಗಿಯೂ ಕೆಲಸ ಮಾಡುತ್ತವೆ. ಕೆಲವು ತೈಲಗಳು ದೇಹದ ರೋಗ ನಿರೋಧಕ ಶಕ್ತಿ ಹೆಚ್ಚಿಸಿ ವೈರಸ್ ಸೋಂಕು ರೋಧಕಗಳಾಗಿಯೂ ಕಾರ್ಯ ನಿರ್ವಹಿಸುತ್ತವೆ. ಇನ್ನು ಕೆಲವು ತೈಲಗಳು ಆರೋಗ್ಯವಂತ ಜೀವಕೋಶಗಳ ಬೆಳವಣಿಗೆಗೆ ಮತ್ತು ಅಂತಹ ಜೀವಕೋಶಗಳ ಪುನರುತ್ಪತ್ತಿಗೆ ಸಹಾಯ ಮಾಡುತ್ತವೆ. ಇವು ದೈಹಿಕ ಆರೋಗ್ಯವನ್ನು ಉತ್ತಮವಾಗಿಸುವುದರೊಂದಿಗೆ ಮಾನಸಿಕ ಸಾಮರ್ಥ್ಯವನ್ನು ಹೆಚ್ಚಿಸುತ್ತವೆ. ಆದ್ದರಿಂದ ಈ ಚಂಚಲ ತೈಲಗಳಲ್ಲಿ ಅಡಗಿರುವ ಔಷಧೀಯ ಗುಣಗಳು ಅಗಾಧ ಮತ್ತು ಅಪೂರ್ವವೆಂದೇ ಹೇಳಬಹುದು. ಇಂದು ಅವುಗಳಿಗೆ ವೈದ್ಯಕೀಯ ಶಾಸ್ತ್ರದಲ್ಲಿ ಮತ್ತೆ ಮೊದಲಿನ ಮತ್ತು ಸರಿಯಾದ ಸ್ಥಾನ ದೊರಕುತ್ತಿರುವುದು ಸಂತಸದ ಸಂಗತಿ. ಯೂರೋಪಿನಲ್ಲಿಯೂ ಸುಗಂಧ ಚಿಕಿತ್ಸೆ ತನ್ನದೇ ಆದ ಛಾಪು ಮೂಡಿಸುತ್ತಿದೆ.

**ಗುಣಗಳು :** ಚಂಚಲ ತೈಲಗಳು ದೈಹಿಕ ಮತ್ತು ಮಾನಸಿಕ ಆರೋಗ್ಯದ ಮೇಲೆ ಬಹಳ ಪ್ರಭಾವ ಬೀರುತ್ತವೆ. ಇವು ಚರ್ಮದ ಮುಖಾಂತರ ಮತ್ತು ಮೂಗಿನ ಮುಖಾಂತರ ದೇಹದೊಳಕ್ಕೆ ಪ್ರವೇಶಿಸುತ್ತವೆ. ಸುಗಂಧ ತೈಲ, ಲೋಶನ್, ಸಿಂಪಡಿಕೆ, ದೇಹಕ್ಕೆ ಲೇಪಿಸುವ ತೈಲ, ಸ್ನಾನಕ್ಕೆ ಬಳಸುವ ನೀರಿನಲ್ಲಿ ಬೆರೆಸುವ ಹನಿಗಳು ಮುಂತಾದವುಗಳಿಂದ ಚರ್ಮದ ಮೂಲಕ ದೇಹವನ್ನು ಸೇರುತ್ತವೆ. ಬಹಳ ಸುಲಭವಾಗಿ ರೋಮಕೂಪಗಳು, ರಂಧ್ರಗಳು, ಚರ್ಮದ ಜೀವಕೋಶಗಳ ಸುತ್ತಲೂ ಇರುವ ದ್ರವದ ಮೂಲಕ ಅತಿ ಚಿಕ್ಕ ರಕ್ತನಾಳಗಳನ್ನು ಮತ್ತು ದುಗ್ಧನಾಳಗಳನ್ನು ಸೇರುತ್ತದೆ. ಈ ರೀತಿಯಾಗಿ ದೇಹದ ಎಲ್ಲ ಜೀವಕೋಶಗಳನ್ನು ತಲುಪುತ್ತವೆ.

ನಾವು ಯಾವುದಾದರೂ ಸುಗಂಧ ತೈಲವನ್ನು ಆಘ್ರಾಣಿಸಿದಾಗ, ಅಣುವಿಗಿಂತ ಚಿಕ್ಕದಾದ ಹನಿಯು ಗಾಳಿಯ ಮುಖಾಂತರ ಮೂಗಿನೊಳಗೆ ಸೇರುತ್ತದೆ. ನಂತರ ಮೂಗಿನೊಳಗಡೆ ಮೇಲ್ಭಾಗದಲ್ಲಿರುವ ವಾಸನೆಯನ್ನು ಗ್ರಹಿಸುವ ನರವನ್ನು ಸೇರುತ್ತದೆ. ಅಲ್ಲಿಂದ ಮೆದುಳಿಗೆ ತಲುಪುತ್ತದೆ. ದೇಹದ ಚಟುವಟಿಕೆಗಳನ್ನು, ಭಾವನೆಗಳನ್ನು ಮತ್ತು ಜ್ಞಾಪಕಶಕ್ತಿಯನ್ನು ಚುರುಕುಗೊಳಿಸುತ್ತದೆ. ನಂತರ ಪ್ರೇರಕಗಳು ಹೈಪೋಥೆಲಾಮಸ್‌ಗೆ ತಲುಪಿ ದೈಹಿಕ ಚಟುವಟಿಕೆಗಳಾದ ಉಷ್ಣತೆ, ಬಾಯಾರಿಕೆ, ರಕ್ತದಲ್ಲಿನ ಸಕ್ಕರೆ ಅಂಶ, ದೇಹದ ಬೆಳವಣಿಗೆ, ನಿದ್ರೆ ಮತ್ತು ಎಚ್ಚರದ ಸ್ಥಿತಿ, ಲೈಂಗಿಕ ಉದ್ರೇಕ ಮತ್ತು ಭಾವನೆಗಳನ್ನು ಉತ್ತೇಜಿಸುತ್ತವೆ. ಪಿಟ್ಯುಟರಿ ರಸದೂತವನ್ನು ಪ್ರಚೋದಿಸುತ್ತವೆ. ನಂತರದಲ್ಲಿ ಜೀರ್ಣಶಕ್ತಿ, ಭಾವನಾತ್ಮಕ, ಲೈಂಗಿಕ ನಡವಳಿಕೆ, ಮಾನಸಿಕ ಒತ್ತಡ ಮುಂತಾದವುಗಳನ್ನು ಪ್ರಚೋದಿಸುತ್ತವೆ. ಈ ಸುಗಂಧ ತೈಲಗಳು ಕೇವಲ ಹದಿನೈದು ನಿಮಿಷಗಳಲ್ಲಿ ದೇಹ ಮತ್ತು ಮನಸ್ಸಿನ ಮೇಲೆ ಪರಿಣಾಮ ಬೀರುವಂತಹ ಶಕ್ತಿ ಹೊಂದಿರುತ್ತವೆ.

**ಯಾವ ಕಾಯಿಲೆಗೆ ಯಾವುದು ಸೂಕ್ತ?**

* ತೀವ್ರತರವಾದ ಸುಟ್ಟಗಾಯಗಳಿಗೆ ಲ್ಯಾವೆಂಡರ್ ತೈಲ ಲೇಪನ ಉತ್ತಮ.

* ಖಿನ್ನತೆ, ಆತಂಕ ಮುಂತಾದವುಗಳಿಂದ ಬಳಲುವವರು ಗುಲಾಬಿ ತೈಲವನ್ನು ಮಲಗುವ ಮುಂಚೆ ತಲೆದಿಂಬಿಗೆ ಸಿಂಪಡಿಸಿಕೊಳ್ಳುವುದರಿಂದ ಇಲ್ಲವೇ ಕರವಸ್ತ್ರಕ್ಕೆ ಲೇಪಿಸಿ ಮೂಸುವುದರಿಂದ ಮನಸ್ಸಿನ ಭಾವನೆಗಳು ಶಾಂತವಾಗಿ ನಿದ್ರೆಯೂ ಚೆನ್ನಾಗಿ ಬರುತ್ತದೆ. ಇದು ಸೌಮ್ಯ ನಿದ್ರಾಜನಕವಾಗಿ ಕೆಲಸ ಮಾಡುತ್ತದೆ.
* ತಲೆನೋವಿಗೆ – ತಲೆನೋವು, ಅರೆತಲೆನೋವು (ಮೈಗ್ರೇನ್) ಮತ್ತು ಆತಂಕದಿಂದ ಉಂಟಾಗುವ ತಲೆನೋವು ಮುಂತಾದವುಗಳಿಗೆ ಶ್ರೀಗಂಧದ ತೈಲ, ಲವಂಗದ ತೈಲ, ಮಲ್ಲಿಗೆ ತೈಲ, ಗುಲಾಬಿ ತೈಲ, ಕಿತ್ತಳೆ, ದಾಲ್ಚಿನ್ನಿ ತೈಲಗಳಲ್ಲಿ ಯಾವುದಾದರೊಂದರ ಕೆಲವು ಹನಿಗಳನ್ನು ಲೇಪಿಸಿಕೊಳ್ಳಬೇಕು.

**ಬಾಷ್ಪಚಿಕಿತ್ಸೆ** : ಕುದಿಯುವ ನೀರಿನಲ್ಲಿ ಈ ಸುಗಂಧ ತೈಲದ ಹನಿಗಳನ್ನು ಹಾಕಿ ಅದರ ಬಾಷ್ಪ (ಹಬೆಯನ್ನು) ತೆಗೆದುಕೊಳ್ಳಬೇಕು. ಅಲ್ಲದೇ ಮೂಗಿನ ಎರಡೂ ಬದಿ ಹಾಗೂ ಹಣೆಯ ಮೇಲೆ ಬೆರಳುಗಳಿಂದ ಮೃದುವಾಗಿ ಮಸಾಜ್ ಮಾಡಿಕೊಳ್ಳುವುದರಿಂದ ನೋವು ಕಡಿಮೆಯಾಗುವುದಲ್ಲದೇ ಮನಸ್ಸು ಸಮಾಧಾನಗೊಳ್ಳುತ್ತದೆ.

ಚಂಚಲ ತೈಲಗಳು ನಗರ ಪ್ರದೇಶಗಳಲ್ಲಿ ಅಂಗಡಿಗಳಲ್ಲಿ ದೊರೆಯುತ್ತವೆ. ಗ್ರಾಮೀಣ ಪ್ರದೇಶಗಳಲ್ಲಿ ಮನೆಯಲ್ಲಿಯೇ ಸುಗಂಧ ತೈಲವನ್ನು ತಯಾರಿಸಿಕೊಳ್ಳಬಹುದು. ಚಂಚಲ ತೈಲಗಳನ್ನು ಹಬೆ ಬಟ್ಟಿಗೆ ಹಾಕಿ ತಯಾರಿಸುತ್ತಾರೆ. ಆದರೆ ಮಲ್ಲಿಗೆ ಹೂ, ಗುಲಾಬಿ, ಕಮಲ ಮುಂತಾದವುಗಳನ್ನು ರಸ ತೆಗೆದು ಎಳ್ಳೆಣ್ಣೆಯಲ್ಲಿ ಬೆರೆಸಿ ಒಲೆಯ ಮೇಲೆ ಸಣ್ಣಗಿನ ಉರಿಯಲ್ಲಿ ಕಾಯಿಸಬೇಕು. ನೀರಿನಂಶ ಹೋಗುವವರೆಗೂ ಕಾಯಿಸಬೇಕು. ನಂತರ ಆರಿಸಿ ಗಾಜಿನ ಬಾಟಲಿಯಲ್ಲಿ ತೆಗೆದಿಟ್ಟುಕೊಳ್ಳಬೇಕು.

**ನೆಗಡಿ, ಕೆಮ್ಮು, ಸೈನುಸೈಟಿಸ್** ಮುಂತಾದವುಗಳಿಂದ ಬಳಲುವವರು ನೀಲಗಿರಿ, ತಾಳೆ, ಪಚೋಲಿ, ನಿಂಬೆಹಣ್ಣು, ಮಲ್ಲಿಗೆ ಮುಂತಾದವುಗಳಲ್ಲಿ ಯಾವುದಾದರೊಂದರ ಚಂಚಲ ತೈಲವನ್ನು ಎದೆಯ ಭಾಗದಲ್ಲಿ ಲೇಪಿಸುವುದರಿಂದ ಕಫ ಕರಗುತ್ತದೆ. ಎದೆಯ ಮೇಲ್ಭಾಗದಲ್ಲಿ ಮಾತ್ರವಲ್ಲ ಬೆನ್ನಿನ ಭಾಗ, ಹಣೆ ಮತ್ತು ಮೂಗಿನ ಮೇಲ್ಭಾಗ, ಬದಿಯಲ್ಲಿಯೂ ಲೇಪಿಸಿ ಮೃದುವಾಗಿ ಉಜ್ಜಬೇಕು.

**ಬಾಷ್ಪ ಚಿಕಿತ್ಸೆ** – ಕುದಿಯುವ ನೀರಿನಲ್ಲಿ ೪-೫ ಹನಿ ಚಂಚಲ ತೈಲವನ್ನು ಹಾಕಿ ಅದರ ಹಬೆ ತೆಗೆದುಕೊಳ್ಳಬೇಕು.

**ಹರ್ಪಿಸ್ ಮತ್ತು ಇತರ ಗುಳ್ಳೆಗಳು** – ಗುಲಾಬಿ, ಮಲ್ಲಿಗೆ, ನೀಲಗಿರಿ, ಶ್ರೀಗಂಧ ಮುಂತಾದವುಗಳಲ್ಲಿ ಯಾವುದಾದರೊಂದು ಸುಗಂಧ ತೈಲವನ್ನು ಹರ್ಪಿಸ್ ಮತ್ತು ಇತರ ಕಾರಣಗಳಿಂದ ಉಂಟಾದ ಗುಳ್ಳೆಗಳಿಗೆ ಲೇಪಿಸುವುದರಿಂದ ಉರಿ, ನೋವು ಕಡಿಮೆ ಯಾಗುವುದಲ್ಲದೆ ಗುಳ್ಳೆಗಳು ಬೇಗನೆ ಒಣಗುತ್ತವೆ.

**ಚಂಚಲ ತೈಲಗಳನ್ನು ಉಪಯೋಗಿಸುವ ಇತರ ವಿಧಾನಗಳು**

* ಗಾಜಿನ ಬಾಟಲಿಯಲ್ಲಿ ಚಂಚಲ ತೈಲವನ್ನು ತುಂಬಿಸಿಟ್ಟು ಸಣ್ಣದೊಂದು ರಂಧ್ರವನ್ನು ಗಾಳಿಗಾಗಿ ಬಿಟ್ಟು ಕೋಣೆಯಲ್ಲಿಟ್ಟಲ್ಲಿ ಇದು ಕೋಣೆಯ ಗಾಳಿಯನ್ನು ಶುದ್ಧೀಕರಿಸುವುದಲ್ಲದೇ ಮನಸ್ಸಿಗೆ ಮುದ ನೀಡುವ ಪರಿಮಳ ಬೀರುತ್ತದೆ. ಇದರಿಂದಾಗಿ ಇಡೀ ಕೋಣೆಯ ವಾತಾವರಣವೇ ಸುಮಧುರವಾಗಿ ಬದಲಾಗಿಬಿಡುತ್ತದೆ.
* ಕೋಣೆಯಲ್ಲಿ ಒಂದು ಪಾತ್ರೆಯಲ್ಲಿ ನೀರು ಮತ್ತು ಚಂಚಲ ತೈಲವನ್ನು ಬೆರೆಸಿಟ್ಟು ದೀಪ ಹಚ್ಚಿಟ್ಟಲ್ಲಿ, ಅದು ನಿಧಾನವಾಗಿ ಉರಿಯುತ್ತ ಕೋಣೆಯಲ್ಲಿ ಪ್ರಶಾಂತ ವಾತಾವರಣ ಉಂಟಾಗಿ ಸುಗಂಧ ತುಂಬಿಕೊಂಡು ಮನಸ್ಸು ಸಮಾಧಾನದಿಂದ ಇರುವುದಲ್ಲದೇ ನಿದ್ರೆಯೂ ಚೆನ್ನಾಗಿ ಬರುತ್ತದೆ.
* **ಆರೋಮ್ಯಾಟಿಕ್ ಕುಡಿಕೆ** – ಚಿಕ್ಕ ಜೇಡಿಮಣ್ಣಿನ ಕುಡಿಕೆಗಳಲ್ಲಿ ಚಂಚಲ ತೈಲ ತುಂಬಿಸಿಟ್ಟು ಕಾರ್‌ನಲ್ಲಿ ಮತ್ತು ಕೋಣೆಯಲ್ಲಿಡಬಹುದು.
* **ಧೂಪ** – ಚಂಚಲ ತೈಲವನ್ನು ಲೇಪಿಸಿದ ಧೂಪದ ಕಡ್ಡಿ ಮತ್ತು ಊದುಬತ್ತಿಗಳನ್ನು ದೇವರಮನೆಯಲ್ಲಿ ಉರಿಸಿದಲ್ಲಿ ಮನೆಯ ಮತ್ತು ಮನಸ್ಸಿನ ವಾತಾವರಣ ನಿರ್ಮಲವಾಗಿರುತ್ತದೆ. ಔಷಧೀಯ ಮತ್ತು ಸುಗಂಧದ್ರವ್ಯಗಳಿಂದ ತಯಾರಿಸಿದ ಧೂಪ ಮತ್ತು ಊದುಬತ್ತಿಗಳನ್ನು ಉರಿಸುವುದರಿಂದ ಸೊಳ್ಳೆ, ನೊಣ, ಕ್ರಿಮಿ ಕೀಟಗಳು ದೂರವಾಗುವುದಲ್ಲದೇ ಪ್ರಾರ್ಥನೆ, ಧ್ಯಾನ ಮಾಡುವಾಗ ನಮ್ಮ ಮನಸ್ಸು ಪ್ರಶಾಂತವಾಗಿರುತ್ತದೆ. ಟಿಬೆಟಿಯನ್ ಸಾಂಪ್ರದಾಯಿಕ ಚಿಕಿತ್ಸೆಯಲ್ಲಿ ವಿಶಿಷ್ಟ ಔಷಧೀಯ ಊದುಬತ್ತಿ ಉಪಯೋಗಿಸುವುದು ಒಂದು ಪದ್ಧತಿ.
* ತಲೆಗೂದಲಿಗೆ ಬಳಸುವ ತೈಲಗಳು, ಲೋಶನ್‌ಗಳು, ಶಾಂಪೂಗಳು, ಕಂಡೀಶನರ್, ಹಬೆ, ಜೆಲ್, ಮುಖಕ್ಕೆ ಲೇಪಿಸುವ ಕ್ರೀಂಗಳಲ್ಲಿ ಚಂಚಲ ತೈಲಗಳನ್ನು ಬಳಸುತ್ತಾರೆ. ಚಂಚಲ ತೈಲಗಳಲ್ಲಿ ಚರ್ಮದ ಎಲ್ಲಾ ಒಳಪದರುಗಳಿಗೆ ವಿಸ್ತರಿಸುವ ಗುಣವಿದೆ. ಎಲ್ಲ ಬಗೆಯ ಕಾಂತಿವರ್ಧಕ (ಕಾಸ್ಮೆಟಿಕ್ಸ್)ಗಳಲ್ಲಿ ಚಂಚಲ ತೈಲ ಬಳಸುತ್ತಾರೆ. ಇವು ಮಾಯಿಶ್ಚರೈಸರ್ ಆಗಿಯೂ ಕೆಲಸ ಮಾಡುತ್ತವೆ. ಉತ್ತಮ ಗುಣಮಟ್ಟದ ಚಂಚಲ ತೈಲಗಳು ಶೃಂಗಾರ ಸಾಧನಗಳಲ್ಲಿ ತಮ್ಮ ಸ್ವಾಭಾವಿಕ ಗುಣಗಳಿಂದ ಸುಲಭವಾಗಿ ಬೆರೆಯುತ್ತವೆ ಮತ್ತು ಉತ್ತಮ ಪರಿಣಾಮ ಬೀರುತ್ತವೆ.

**ಅಂಗಡಿಯಲ್ಲಿ ದೊರೆಯುವ ಚಂಚಲ ತೈಲಗಳು ಉತ್ತಮ ಗುಣಮಟ್ಟದ್ದೆಂದು ತಿಳಿಯುವ ಬಗೆ**

* ತೈಲವನ್ನು ಬೆರಳುಗಳ ಮಧ್ಯೆ ಉಜ್ಜಿದಾಗ ಎಣ್ಣೆಯ ಜಿಡ್ಡು ಭಾಸವಾಗುವುದಿಲ್ಲ (ಭಾಸವಾಗಬಾರದು).
* ಚಂಚಲ ತೈಲ ಬಾಷ್ಪವಾದ ನಂತರ ಅಂಟಂಟಾಗಿರುವ ಚುಕ್ಕೆ ಬ್ಲಾಟರ್ ಅಥವಾ ಟಿಶ್ಯು ಪೇಪರ್‌ನಲ್ಲಿ ಉಳಿಯಬಾರದು.
* ನೀರಿನಲ್ಲಿ ಹಾಕಿದಾಗ ಹಾಲಿನಂತೆ ಪದರು ಉಂಟಾಗಬಾರದು.
* ಆಲ್ಕೋಹಾಲ್ ವಾಸನೆ ಇರಬಾರದು.
* ಕೋಣೆಯ ಉಷ್ಣತೆಯಲ್ಲಿಯೇ ಸಂಗ್ರಹಿಸಿಡಬೇಕು. ಅಲ್ಲಿ ತಂಪು ವಾತಾವರಣ ಇರಬೇಕು.

**ಡಾ|| ವಸುಂಧರಾ ಭೂಪತಿ**
ನಂ. ೨೨೨, ೨ನೇ 'ಇ' ಅಡ್ಡರಸ್ತೆ, ೩ನೇ ಹಂತ, ೩ನೇ ಘಟ್ಟ, ಬಸವೇಶ್ವರನಗರ, ಬೆಂಗಳೂರು - ೭೯

# ಗ್ರಂಥಾಲಯ ಚಳುವಳಿಯಲ್ಲಿ ಭಾರತದ ಪುಸ್ತಕೋದ್ಯಮದ ಪಾತ್ರ



ನಾರಾಯಣಮೂರ್ತಿ ಹೆಚ್. ಆರ್.

**''ರಾಷ್ಟ್ರಾಭಿವೃದ್ಧಿಯ ಚಟುವಟಿಕೆಯ ಎಲ್ಲ ಕ್ಷೇತ್ರಗಳ ಮೇಲೂ ಪುಸ್ತಕಗಳು ದೂರಗಾಮಿ ಪರಿಣಾಮ ಉಂಟುಮಾಡಿದ್ದರೂ ದೇಶದ ಸಂಪನ್ಮೂಲಗಳಿಂದ ಅವು ಪಡೆಯುವ ಭಾಗ ತೀರಾ ಕಡಿಮೆಯೆ.''**

ಗ್ರಂಥಾಲಯ ಅಂದಾಕ್ಷಣ ಗ್ರಂಥಗಳು ಇರುವ ಆಲಯವೇ ಗ್ರಂಥಾಲಯ ಎಂದು ತಿಳಿಯುತ್ತದೆ. ಗ್ರಂಥಗಳೇ ಇಲ್ಲದೆ ಹೋದರೆ ಗ್ರಂಥಾಲಯ ಹೇಗೆ ಆಗುತ್ತೆ? ಎಷ್ಟೇ ಆಧುನಿಕತೆ ಬರಲಿ ಗ್ರಂಥಗಳಿಗೆ ಸಾವಿಲ್ಲವೆಂದು ಹೇಳಬಹುದು. ಗ್ರಂಥಾಲಯದಲ್ಲಿ ಓದುಗರು, ಗ್ರಂಥಗಳು, ಸಿಬ್ಬಂದಿಗಳು ಮತ್ತು ಕಟ್ಟಡ ಇವುಗಳು ಅವಶ್ಯವಾಗಿ ಇರಲೇಬೇಕಾದವು. ಡಾ|| ರಂಗನಾಥನ್‌ರವರ ಪಂಚಮ ಸೂತ್ರ ಗ್ರಂಥಾಲಯ ಬೆಳೆಯುವ ಶಿಶು. ಗ್ರಂಥಾಲಯಕ್ಕೆ ಪ್ರತಿದಿನ ಪ್ರತಿವರ್ಷ ಪುಸ್ತಕಗಳು ಸೇರುತ್ತಾ ಹೋದಂತೆ ಗ್ರಂಥಾಲಯ ಬೆಳೆಯುತ್ತದೆ. ಗ್ರಂಥಾಲಯಕ್ಕೆ ಪುಸ್ತಕಗಳು ಬರಬೇಕಾದರೆ ಹೊಸ ಪುಸ್ತಕಗಳು ಪ್ರಕಟವಾಗಬೇಕು. ಹೊಸ ಶೀರ್ಷಿಕೆಗಳು, ನಿಯತಕಾಲಿಕೆಗಳು ಬರಬೇಕು. ಹಾಗಾದರೆ ಮಾತ್ರ ಗ್ರಂಥಾಲಯಗಳು ಬೆಳೆಯಲು ಸಾಧ್ಯ. ಪುಸ್ತಕೋದ್ಯಮವು ಎಲ್ಲಾ ದೇಶಗಳಲ್ಲಿ ಈ ದಿಸೆಯಲ್ಲಿ ಪ್ರಮುಖ ಪಾತ್ರವನ್ನು ವಹಿಸಿದೆ. ಇದಕ್ಕೆ ಮುಂದುವರಿದ ದೇಶಗಳೇ ಸಾಕ್ಷಿ. ಬನ್ನಿ, ಈ ದಿಸೆಯಲ್ಲಿ ನಮ್ಮ ದೇಶದಲ್ಲಿ ಪುಸ್ತಕೋದ್ಯಮ ಯಾವ ರೀತಿಯ ಪಾತ್ರವನ್ನು ವಹಿಸಿದೆ ಮತ್ತು ಯಾವ ದಿಕ್ಕಿನಲ್ಲಿ ನಡೆದಿದೆ ಎಂದು ತಿಳಿಯೋಣ.

ಭಾರತದಲ್ಲಿ ಪುಸ್ತಕೋದ್ಯಮವು ಪ್ರತಿವರ್ಷ ೭೦ ಮಿಲಿಯನ್ ರೂಪಾಯಿಗಳಷ್ಟು ವಹಿವಾಟು ನಡೆಸುತ್ತಿದೆ; ಬಹುದೊಡ್ಡ ಸಂಖ್ಯೆಯಲ್ಲಿ ಉದ್ಯೋಗವನ್ನು ಸೃಷ್ಟಿಸಿದೆ. ದೇಶದಲ್ಲಿ ಈಗ ಒಟ್ಟು೧೬,೦೦೦ ಪ್ರಕಾಶಕರಿದ್ದು ಈಚಿನ ವರ್ಷದಲ್ಲಿ ಅಂದಾಜು ೭೦,೦೦೦ದಷ್ಟು ಶೀರ್ಷಿಕೆಗಳು ಪ್ರಕಟವಾದವು. ಇದರಲ್ಲಿ ಶೇ. ೪೨ರಷ್ಟು ಇಂಗ್ಲಿಷ್ ಭಾಷೆಯ ಪುಸ್ತಕಗಳಾದರೆ ಹಿಂದಿ ಶೇ. ೧೫, ತಮಿಳು ಶೇ. ೮, ಮಲಯಾಳಂ ಶೇ. ೫, ಕನ್ನಡ ಶೇ. ೩. ಇವುಗಳ ಪೈಕಿ ಒಟ್ಟಾರೆಯಾಗಿ ಎಲ್ಲೋ ಕೆಲವು ಪುಸ್ತಕಗಳನ್ನು ಬಿಟ್ಟರೆ ಉಳಿದವು ಅಷ್ಟೇನೂ ಉತ್ತಮ ಮಟ್ಟದಲ್ಲಿರುವುದಿಲ್ಲ ಎಂದು ಅಭಿಪ್ರಾಯವಿದೆ. ನಮ್ಮ ದೇಶದಲ್ಲಿ ಪ್ರಾಂತೀಯ ಭಾಷೆಯಲ್ಲಿ ಪಶ್ಚಿಮ ಬಂಗಾಳ ಮತ್ತು ಕೇರಳ ರಾಜ್ಯಗಳನ್ನು ಬಿಟ್ಟರೆ ಉಳಿದ ರಾಜ್ಯಗಳಲ್ಲಿ ಪುಸ್ತಕ ಓದುವವರು ಮತ್ತು ಕೊಳ್ಳುವವರು ಬಹಳ ಕಡಿಮೆ. ಕೇರಳ ಮತ್ತು ನಮ್ಮ ರಾಜ್ಯದ ಜನಸಂಖ್ಯೆ ಹೋಲಿಸಿಕೊಂಡರೆ ಬಹಳಷ್ಟು ವ್ಯತ್ಯಾಸವಿದೆ. ಆದರೆ ಕೇರಳದಲ್ಲಿ ಕಡಿಮೆ ಎಂದರೆ ಒಂದು ಹೊಸ ಪುಸ್ತಕ ೧೦,೦೦೦ ಪ್ರತಿಗಳಷ್ಟು ಪ್ರಕಟವಾಗುತ್ತದೆ. ಅದೇ ನಮ್ಮ ರಾಜ್ಯದಲ್ಲಿ ೨೦೦೦ ಪ್ರತಿಗಳು ಪ್ರಕಟಿಸಿ ಖರ್ಚಾದರೆ ಅದೇ ಉತ್ತಮ ಸಾಧನೆ ಎನ್ನುತ್ತಾರೆ.

ಪಾಶ್ಚಿಮಾತ್ಯ ದೇಶಗಳಲ್ಲಿ ನಮ್ಮ ದೇಶದ ಜನಸಂಖ್ಯೆಗಿಂತ ಬಹಳ ಕಡಿಮೆ ಇರುವ ದೇಶಗಳಲ್ಲಿ ಸಾಧಾರಣವಾಗಿ ಪುಸ್ತಕ ಪ್ರತಿಗಳು ೩೦೦೦-೫೦೦೦ಕ್ಕಿಂತ ಕಡಿಮೆ ಮಾರಾಟವಾಗುವುದೇ ಅಪರೂಪ. ನಮ್ಮ ದೇಶದಲ್ಲಿ ಪುಸ್ತಕ ಕೊಳ್ಳುವುದು ತೀರಾ ಅಗತ್ಯವಿದ್ದಾಗ ಮಾತ್ರ.

**ಮುದ್ರಣ ಯಂತ್ರದ ಇತಿಹಾಸ**

ನಮ್ಮ ದೇಶಕ್ಕೆ ಮುದ್ರಣ ಯಂತ್ರದ ಪ್ರವೇಶವಾಗಿದ್ದು ಒಂದು ಆಕಸ್ಮಿಕ. ಅಬಿಸೀನಿಯಾಗೆ (ಇಥೋಪಿಯಾ ದೇಶ) ಹೋಗುತ್ತಿದ್ದ ಹಡಗೊಂದು ಕೆಟ್ಟು ಗೋವಾ ಬಳಿ ಬಂದು ನಿಂತಿತು. ಹಾಗಾಗಿ, ನಮ್ಮ ದೇಶಕ್ಕೆ ಮುದ್ರಣವು ಕಾಲಿಟ್ಟದ್ದು ೧೫೫೭ರಲ್ಲಿ ಎಂದು ಮುದ್ರಣದ ಇತಿಹಾಸ ಹೇಳುತ್ತದೆ. ನಂತರ ೨೫೦ ವರ್ಷಗಳಲ್ಲಿ ಅದು ಬೆಳೆದು ಹೊಸ ನೋಟವನ್ನು ಕಂಡುಕೊಂಡು, ಜ್ಞಾನಿಗಳ, ಋಷಿಮುನಿಗಳ ಮತ್ತು ಗತಕಾಲದ ಸಾಹಿತ್ಯ ಸಾರವು ಕಾಗದದ ಮೇಲೆ ಮುದ್ರಣಗೊಳ್ಳತೊಡಗಿತು. ಇದರಿಂದ ಓಲೆಗರಿಯ ಶಿಕ್ಷಣದಿಂದ ಕೆಲವೇ ಜನರಿಗೆ ದೊರೆಯುತ್ತಿದ್ದ ಜ್ಞಾನವು ಜನಸಮೂಹಕ್ಕೆ ದೊರೆಯುವಂತಾಯಿತು. ಅದನ್ನು ಕ್ರೈಸ್ತಧರ್ಮ ಪ್ರಚಾರಕರು ಚೆನ್ನಾಗಿ ಬಳಸಿಕೊಂಡರು. ಇಲ್ಲಿಗೆ ಬಂದ

*ಇಂದಿಗೂ ಗ್ರಂಥಾಲಯಗಳು ಪುಸ್ತಕ ಪ್ರಕಾಶಕರಿಗೆ ಮತ್ತು ಲೇಖಕರಿಗೆ ಆಶ್ರಯ ನೀಡುತ್ತಿರುವ ಪ್ರಮುಖ ಸಂಸ್ಥೆಗಳು. ನಮ್ಮ ದೇಶದಲ್ಲಿ ಗ್ರಂಥಾಲಯ ಸೇವೆಗಾಗಿ ಕೇವಲ ವಾರ್ಷಿಕ ತಲಾ ೫ ಪೈಸೆಯಷ್ಟನ್ನು ಸರಕಾರ ಖರ್ಚು ಮಾಡುತ್ತಿದೆ. ಇಷ್ಟು ಕಡಿಮೆ ಮೊತ್ತದಲ್ಲಿ ಗ್ರಂಥಾಲಯಗಳನ್ನು ಬಲಗೊಳಿಸಿ ಓದುಗರ ಆಸಕ್ತಿ ಪೂರೈಕೆಮಾಡಲು ಸಾಧ್ಯವಿಲ್ಲ. ಆದುದರಿಂದ ಕೇಂದ್ರ ಸರಕಾರವಾಗಲೀ, ರಾಜ್ಯ ಸರಕಾಗಳಾಗಲೀ ವಾರ್ಷಿಕ ಬಜೆಟ್‌ನಲ್ಲಿ ಗ್ರಂಥಾಲಯಗಳಿಗೆ ಹೆಚ್ಚಿನ ಹಣ ಒದಗಿಸಿದರೆ ಗ್ರಂಥಾಲಯ ಸೇವೆಯನ್ನು ಉತ್ತಮಪಡಿಸಬಹುದು. ಆದರೆ ಕೇಂದ್ರ ಸರಕಾರವಾಗಲೀ, ರಾಜ್ಯ ಸರಕಾರಗಳಾಗಲೀ ಈ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸಿದಂತಿಲ್ಲ. ೧೯೯೦ರ ಯುನೆಸ್ಕೋ ಅಂಕಿಅಂಶಗಳ ಪ್ರಕಾರ ಜಗತ್ತಿನಲ್ಲಿ ಪ್ರಕಟವಾಗಿರುವ ಶೀರ್ಷಿಕೆಗಳು ೮,೪೨,೦೦೦. ಇವುಗಳಲ್ಲಿ ೨,೪೨,೦೦೦ ಶೀರ್ಷಿಕೆಗಳು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಪ್ರಕಟವಾಗಿವೆ. ಈ ದೃಷ್ಟಿಯಿಂದ ನೋಡಿದಾಗ ಅಭಿವೃದ್ಧಿ ಆಗುತ್ತಿರುವಂತಹ ಭಾರತದಲ್ಲಿ ಪ್ರಕಟವಾಗುತ್ತಿರುವ ಶೀರ್ಷಿಕೆಗಳ ಸಂಖ್ಯೆ ಪ್ರೋತ್ಸಾಹದಾಯಕವಾಗಿಲ್ಲ.*

ಮುದ್ರಣ ಯಂತ್ರವು ಮುದ್ರಿಸುವ ಕಾರ್ಯವನ್ನು ೧೫೭೩ರಲ್ಲಿ ಸ್ಥಗಿತಗೊಳಿಸಿತು. ತಮಿಳು ನಾಡಿನಲ್ಲಿ ೧೭೧೩ರಲ್ಲಿ ಪ್ರಥಮವಾಗಿ ಮುದ್ರಣಗೊಂಡ ಪುಸ್ತಕ ಪ್ರಕಟವಾಯಿತು. ಇಲ್ಲಿಂದ ತಮಿಳಿನಲ್ಲಿ ಪುಸ್ತಕಗಳ ಪ್ರಕಟಣೆಯು ಬೆಳೆಯತೊಡಗಿತು. ಬೇರೆ ಸ್ಥಳಗಳಲ್ಲಿಯೂ ಮುದ್ರಣ ಯಂತ್ರ ಸ್ಥಾಪನೆಗೊಂಡಿತು. ಬಂಗಾಳದಲ್ಲಿ ಪುಸ್ತಕವು ಪ್ರಕಟವಾಗಿದ್ದು ೧೭೭೮ರಲ್ಲಿ (ಹೂಗ್ಲಿಯಲ್ಲಿ ಸ್ಥಾಪನೆಗೊಂಡ ಮುದ್ರಣಾಲಯದಿಂದ). ಭಾರತಕ್ಕೆ ವಿಲಿಯಂ ಕೇರಿ, ವಿಲಿಯಂ ವಾರ್ಡ್ ಮತ್ತು ಜೋಷಾ ಹರ್ಷಮನ್ ಧರ್ಮ ಪ್ರಚಾರಕ ತಂಡವು ೧೭೯೯ರಲ್ಲಿ ಸೆರಾಂಪುರ್‌ಗೆ ಬಂದಿಳಿಯಿತು. ಇದರ ಗುರಿ ಭಾರತದಲ್ಲಿರುವ ಭಾಷೆಗಳಲ್ಲಿ ಕ್ರೈಸ್ತ ಧರ್ಮ ಗ್ರಂಥಗಳನ್ನು ಜನಪ್ರಿಯಗೊಳಿಸುವುದಾಗಿತ್ತು. ಹಾಗಾಗಿ ೩೧ ವರ್ಷಗಳಲ್ಲಿ ೪೦ ಭಾಷೆಗಳಲ್ಲಿ ೨,೧೨,೦೦೦ ಪುಟಗಳಷ್ಟನ್ನು ಮುದ್ರಿಸಿದರು.

ದಕ್ಷಿಣದಲ್ಲಿ ಪೋರ್ಚುಗೀಸ್ ಪಾದ್ರಿಗಳು ಧರ್ಮಪ್ರಚಾರ ಕಾರ್ಯವನ್ನು ಕೈಗೊಂಡಿದ್ದರು. ಕೊಂಕಣಿಯಲ್ಲಿ ಕ್ರೈಸ್ತ ಧರ್ಮ ಪುಸ್ತಕ ಅಚ್ಚು ಮಾಡಿದರು. ಕೊಂಕಣಿಗೆ ಲಿಪಿ ಇರಲಿಲ್ಲ. ಆದ್ದರಿಂದ ಕನ್ನಡದಲ್ಲಿ ಅಚ್ಚಾಗಬೇಕಾಯಿತು. ಪೋರ್ಚುಗೀಸರಿಗೆ ದೇಶೀಯ ಭಾಷೆಯಲ್ಲಿ ಮುದ್ರಣ ಅಗತ್ಯವಾಗಿತ್ತು. ದೇಶೀಯ ಭಾಷೆಯನ್ನು ಕಲಿಯಬೇಕಾಯಿತು. ಹಾಗಾಗಿ ಕನ್ನಡದ ಮೊಟ್ಟಮೊದಲ ಕೃತಿ ವಿಲಿಯಂ ಕೇರಿಯ 'ಎ ಗ್ರಾಮರ್ ಆಫ್ ಕೆನರೀಸ್ ಲ್ಯಾಂಗ್ವೇಜ್'. ಅದು ಮುದ್ರಣಗೊಂಡಿದ್ದು ಕಲ್ಕತ್ತೆಯ ಸೆರಾಂಪುರದಲ್ಲಿ, ವರ್ಷ ೧೮೧೭.

ಇದೇ ಸಮಯದಲ್ಲಿ ೧೮೧೮ರಲ್ಲಿ ಶಾಲಾ ಪುಸ್ತಕಗಳಿಗೆ ಹೆಚ್ಚು ಬೇಡಿಕೆ ಬಂದಿತು. ಇದರಿಂದ ೧೮೧೮ ರಿಂದ ೧೮೨೫ರವರೆಗೆ ಒಂದು ಲಕ್ಷಕ್ಕೂ ಹೆಚ್ಚು ಪುಸ್ತಕಗಳು ಮುದ್ರಣಗೊಂಡು ಮಾರಾಟವಾದವು.

**ವಯಸ್ಕರಿಗಾಗಿ ಪುಸ್ತಕಗಳು**

ಸಾರ್ವಜನಿಕ ಗ್ರಂಥಾಲಯವೆಂದರೆ ಒಂದು ಸಾರ್ವಜನಿಕ ವಿಶ್ವವಿದ್ಯಾಲಯವಿದ್ದಂತೆ. ಇಲ್ಲಿ ಎಲ್ಲರಿಗೂ ತಮಗೆ ಬೇಕಾದಂತಹ ಸಾಹಿತ್ಯವನ್ನು ಓದುವಂತಿರಬೇಕು. ಹಾಗಾಗಿ ನವ ಸಾಕ್ಷರರಿಗೆ ಪೂರಕವಾದಂತೆ ಸಾಹಿತ್ಯಕ ಪುಸ್ತಕಗಳು ಗ್ರಂಥಾಲಯದಲ್ಲಿರಬೇಕಾಗುತ್ತದೆ.

ಭಾರತವು ಸ್ವಾತಂತ್ರ್ಯ ಬಂದಂದಿನಿಂದ ಅನಕ್ಷರತೆಯನ್ನು ತೊಡೆದುಹಾಕಲು ಸಾಕಷ್ಟು ಶ್ರಮಿಸುತ್ತಿದೆ. ಆದರೆ ಬೆಳೆಯುತ್ತಿರುವ ಜನಸಂಖ್ಯೆಯಿಂದ ದೇಶವು ಬಹಳಷ್ಟು ತೊಡಕನ್ನು ಎದುರಿಸಬೇಕಾಗಿದೆ.

ಸ್ವಾತಂತ್ರ್ಯಪೂರ್ವದ ೧೯ ಮತ್ತು ೨೦ನೇ ಶತಮಾನದಲ್ಲಿ ಭಾರತದಲ್ಲಿ ಎಲ್ಲಾ ಭಾಷೆಗಳಲ್ಲಿ ಅನೌಪಚಾರಿಕ ಶಿಕ್ಷಣವನ್ನು ಕೊಡುವುದರ ಬಗ್ಗೆ ರಾಷ್ಟ್ರೀಯ ಚಳುವಳಿಯು ಪ್ರಮುಖ ಪಾತ್ರವನ್ನು ವಹಿಸಿತು. ೧೯೩೭ರಲ್ಲಿ ಸಾಕ್ಷರತೆಯ ಕಾರ್ಯಾಚರಣೆಯನ್ನು ದೇಶದ ಪ್ರಮುಖ ಕೇಂದ್ರಗಳಲ್ಲಿ ದೇಶದ ಸ್ವಾತಂತ್ರ್ಯ ಹೋರಾಟಗಾರರಾದ ಜಿ.ಬಿ.ಪಂತ್, ರಾಜಗೋಪಾಲಾಚಾರಿ, ಎಸ್. ಆರ್. ಭಾಗವತ್ ಮುಂತಾದವರು ಬೀದಿಯಲ್ಲಿ ನಿಂತು ಹಲಗೆ

## ಹೆಬ್ಬಾಳ



ಹೆಬ್ಬಾಳದ ಮರಕೆ
ಹತ್ತುತಿದೆ ಹುತ್ತ
ಚಾಚಿದ ರೆಂಬೆಕೊಂಬೆಯಲಿ
ಇಳೆಬಿದ್ದ ಬಿಳಿಲು
ಬಯಲು ತುಂಬಿದ ಮರಕೆ
ಸಂಭ್ರಮದ ನೆರಳು
ಕರಿನೆರಳಲ್ಲಿ ಹಬ್ಬುವ ಬಳ್ಳಿಗೆ
ಹೂವಿಲ್ಲ ಮುಳ್ಳು

ಹಾರಾಡುವ ಹಕ್ಕಿಗೆ
ಗೂಡು ಕಟ್ಟುವ ಬಯಕೆ
ಕಟ್ಟಿದ ಗೂಡಲ್ಲಿ
ಇಣುಕಿ ನೋಡುವ ಕಬ್ಬೆಕ್ಕು

ನೆತ್ತಿಯಲ್ಲಿ ತೂಗುವ
ಹೆಜ್ಜೇನ ಹುಟ್ಟೆ
ಎಡಬಿಡದೆ ಸಾಗುವ
ಕಟ್ಟಿರುವೆ ಸಾಲು

ಬುಡದ ಪೊಟರೆಯಲಿ
ಕೊಂಡಿ ಚೇಳಿಗೂ ಸಂತಾನ
ಹೊಂಚು ಹಾಕುವ ಜೇಡಕ್ಕೆ
ಹಾವುರಾಣಿಯ ಕಾಟ

ಮರ ತಬ್ಬಿದ ಹೆಬ್ಬಾವಿಗೆ
ಕಿಬ್ಬೊಟ್ಟೆ ಭಾರ
ಗೂಳಿಯಾಳದ ಕಣ್ಣು ಗೂಬೆಗೆ
ಇರುಳೆಲ್ಲ ಹಗಲು

ಡೊಗರು ಬಿದ್ದ ಬೇರು
ಮುಗಿಲ ನೋಡುವ ಚಿಗುರು

ಡಾ|| ವಸು
ಇತಿಹಾಸ ಪ್ರಾಧ್ಯಾಪಕರು, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು - ೫೬೦ ೦೫೬

ಮತ್ತು ಸೀಮೆಸುಣ್ಣದಿಂದ ಪಾಠಗಳನ್ನು ಮಾಡುತ್ತಿದ್ದರು.

ಕ್ರೈಸ್ತ ಮಿಷನರಿಗಳು ಕೂಡ ದೇಶದಲ್ಲಿ ಅನಕ್ಷರತೆಯನ್ನು ತೊಡೆಯಲು ಅನೌಪಚಾರಿಕ ಶಿಕ್ಷಣ ಕಾರ್ಯಕ್ರಮಗಳನ್ನು ನಡೆಸುತ್ತಿದ್ದರು. ಇದರ ಫಲವಾಗಿಯೇ ದೇಶದ ವಿವಿಧ ಪ್ರದೇಶಗಳಲ್ಲಿ ಪ್ರಾಂತೀಯ ಭಾಷೆಗಳಲ್ಲಿ ನವಸಾಕ್ಷರರಿಗೆ ಸಂಬಂಧಿಸಿದಂತೆ ವಿವಿಧ ವಿಷಯಗಳಲ್ಲಿ ಪುಸ್ತಕಗಳು ಪ್ರಕಟಗೊಳ್ಳತೊಡಗಿದುವು.

ಸ್ವಾತಂತ್ರ್ಯಾನಂತರ ಸರಕಾರವು ಯೋಜಿತವಾದಂಥ ರಾಷ್ಟ್ರೀಯ ವಯಸ್ಕರ ಶಿಕ್ಷಣ ಕಾರ್ಯಕ್ರಮ ಎಂಬ ಸಂಸ್ಥೆಯನ್ನು ೧೯೭೮ರಲ್ಲಿ ಸ್ಥಾಪಿಸಿತು. ೧೯೮೮ರಲ್ಲಿ ರಾಷ್ಟ್ರೀಯ ಸಾಕ್ಷರತಾ ಕಾರ್ಯಕ್ರಮವನ್ನು ಪ್ರಾರಂಭಿಸಿತು.

ನಮ್ಮ ದೇಶದ ಪ್ರತಿಷ್ಠಿತ ಸಂಸ್ಥೆಯಾದ ನ್ಯಾಷನಲ್ ಬುಕ್ ಟ್ರಸ್ಟ್ ಗ್ರಾಮೀಣ ಪ್ರದೇಶದ ಓದುಗರಿಗಾಗಿ ೧೯೮೦ರಿಂದ ಪುಸ್ತಕಗಳನ್ನು ಪ್ರಕಟಿಸಲು ಪ್ರಾರಂಭಿಸಿತು. ೧೯೮೮ರಿಂದ ನವಸಾಕ್ಷರರಿಗೆ ಪುಸ್ತಕಗಳನ್ನು ಪ್ರಕಟಿಸಲು ಪ್ರಾರಂಭಿಸಿತು. ಈಗ ಈ ರೀತಿಯ ಪುಸ್ತಕಗಳನ್ನು ಪ್ರಕಟಿಸುತ್ತಿರುವುದು ಸರ್ಕಾರದ ಸಹಾಯದಿಂದ ಮತ್ತು ಸರ್ಕಾರೇತರ ಸಂಸ್ಥೆಗಳಿಂದ ಮಾತ್ರ. ಖಾಸಗಿ ಪ್ರಕಾಶಕರು ಎಲ್ಲರಿಗೆ ತಿಳಿದಿರುವಂತೆ ಪಠ್ಯಪುಸ್ತಕಗಳು, ಸಾಮಾನ್ಯ ಪುಸ್ತಕಗಳು, ವೈಜ್ಞಾನಿಕ ಪುಸ್ತಕಗಳು ಮತ್ತು ಮಕ್ಕಳ ಸಾಹಿತ್ಯದ ಪುಸ್ತಕಗಳ ಕಡೆ ಗಮನ ಕೊಡುತ್ತಿದ್ದಾರೆ.

**ಮಕ್ಕಳ ಸಾಹಿತ್ಯದ ಪುಸ್ತಕಗಳು**

ನಮ್ಮ ದೇಶದಲ್ಲಿ ಬಹಳ ಕಾಲದವರೆಗೆ ಮಕ್ಕಳ ಸಾಹಿತ್ಯಕ್ಕೆ ಅದರದೇ ಆದಂತಹ ಸ್ಥಾನವನ್ನು ಕೊಟ್ಟಿರಲಿಲ್ಲ. ಹಿಂದೆ ಅಜ್ಜ, ಅಜ್ಜಿಯರು, ಹಿರಿಯರು ಕಥೆ ಹೇಳುವ ಮೂಲಕ ಹಳ್ಳಿಗಳಲ್ಲಿ ಜನಪದ ಹಾಡುಗಳ ಮೂಲಕ ಮಕ್ಕಳಿಗೆ ಸಾಹಿತ್ಯವನ್ನು ಕೊಡುತ್ತಿದ್ದರು. ಮುದ್ರಿತ ಪುಸ್ತಕಗಳು ಬರುವುದು ತಡವೇ ಆಯಿತೆನ್ನಬಹುದು.

ನಮ್ಮ ದೇಶದಲ್ಲಿ ಶಿಶು ಸಾಹಿತ್ಯ ತನ್ನದೇ ಆದ ಸ್ಥಾನವನ್ನು ಪಡೆದುಕೊಂಡಿದ್ದು ಸ್ವಾತಂತ್ರ್ಯಾನಂತರ. ಇದು ಮೂರು ಹಂತಗಳಲ್ಲಿ ಬೆಳೆಯಿತೆಂದು ಶ್ರೀಮತಿ ಗೀತಾ ಮೆನನ್ ವ್ಯಕ್ತಪಡಿಸಿದ್ದಾರೆ.

೧. ಅಜ್ಜ, ಅಜ್ಜಿ ಮತ್ತು ಹಿರಿಯರು ಮಕ್ಕಳಿಗೆ ಜಾನಪದ ಕಥೆ, ಹಾಡುಗಳು, ಪುರಾಣದ ಕಥೆಗಳು ಮತ್ತು ನೀತಿ ಕಥೆಗಳನ್ನು ಹೇಳುವ ಮೂಲಕ.

೨. ಅನ್ಯ ಸಾಹಿತ್ಯವನ್ನು (ಇಂಗ್ಲಿಷ್ ಮತ್ತು ಹೊರದೇಶದ) ಅನುವಾದ ಮತ್ತು ರೂಪಾಂತರ ಮಾಡುವುದರ ಮೂಲಕ.

೩. ಸಾಹಿತಿಗಳು ಮಕ್ಕಳಿಗಾಗಿ ಕ್ರಿಯಾತ್ಮಕ ಸಾಹಿತ್ಯವನ್ನು ರಚಿಸಲು ಪ್ರಾರಂಭಿಸುವ ಮೂಲಕ.

ಪ್ರಸಿದ್ಧ ವ್ಯಂಗ್ಯ ಚಿತ್ರಕಾರ ಶಂಕರ್‌ರವರು ೧೯೫೭ರಲ್ಲಿ ಚಿಲ್ಡ್ರನ್ಸ್ ಬುಕ್ ಟ್ರಸ್ಟ್‌ನ್ನು ಸ್ಥಾಪಿಸಿದರು. ಜೊತೆಗೆ ಮಕ್ಕಳ ಗ್ರಂಥಾಲಯವನ್ನೂ ಸ್ಥಾಪಿಸಿದರು. ಇದು ೧೯೬೭ರಷ್ಟು ಹೊತ್ತಿಗೆ ೪೦,೦೦೦ ಪುಸ್ತಕಗಳುಳ್ಳ ಒಂದು ಉತ್ತಮ ಗ್ರಂಥಾಲಯ ವೆನಿಸಿಕೊಂಡಿತು. ಆಗ ಶಂಕರ್‌ರವರೇ ಬೇರೆ ಬೇರೆ ಹೆಸರಿನಲ್ಲಿ ಪುಸ್ತಕಗಳನ್ನು ರಚಿಸುತ್ತಿದ್ದರು.

ಶಿಶು ಸಾಹಿತ್ಯದಲ್ಲಿ ಚಿತ್ರಗಳುಳ್ಳ ಪುಸ್ತಕ ಪ್ರಥಮವಾಗಿ ಪ್ರಕಟವಾಗಿದ್ದು ಜರ್ಮನಿ ಭಾಷೆಯಲ್ಲಿ (೧೬೫೮), ನಂತರ ಇದು ಇಂಗ್ಲಿಷ್‌ನಲ್ಲಿ ಪ್ರಕಟವಾಯಿತು.

ನಮ್ಮ ದೇಶದಲ್ಲಿ ಪ್ರಥಮವಾಗಿ ಹಿಂದಿಯಲ್ಲಿ ಸಚಿತ್ರ ಪುಸ್ತಕ ಪ್ರಕಟವಾಗಿದ್ದು ೧೯೬೧ರಲ್ಲಿ. ಪ್ರಕಾಶಕರು ೧೯೭೧ರಿಂದ ನೆಹರು ಬಾಲ ಪುಸ್ತಕಾಲಯದ ಹೆಸರಿನಲ್ಲಿ ಮಕ್ಕಳ ಸಾಹಿತ್ಯದ ಪುಸ್ತಕಗಳನ್ನು ಪ್ರಕಟಿಸಲು ತೊಡಗಿದರು. ಭಾರತ ಸರ್ಕಾರ ಕೂಡ ವಿವಿಧ ಸಾಹಿತ್ಯ ಪ್ರಕಾರಗಳೇ ಅಲ್ಲದೆ ಶಿಶು ಸಾಹಿತ್ಯದ ಪುಸ್ತಕಗಳನ್ನು ಸೇರಿಸಿ ಇದುವರೆಗೆ ೭೫೦೦ ಶೀರ್ಷಿಕೆಗಳನ್ನು ಪ್ರಕಟಿಸಿದೆ.

**ವೈಜ್ಞಾನಿಕ ಸಾಹಿತ್ಯದ ಪುಸ್ತಕಗಳು**

ವೈಜ್ಞಾನಿಕ, ತಾಂತ್ರಿಕ ಮತ್ತು ವೈದ್ಯಕೀಯ ಪುಸ್ತಕ ಪ್ರಕಟಣೆಯ ಬಗ್ಗೆ ನಮ್ಮ ಗಮನಹರಿಸಿದರೆ, ಸ್ವಾತಂತ್ರ್ಯ ಬಂದ ಪ್ರಾರಂಭದಲ್ಲಿ ಭಾರತೀಯ ಗ್ರಂಥಾಲಯಗಳು (ಶೈಕ್ಷಣಿಕ) ಪೂರ್ತಿಯಾಗಿ ಹೊರದೇಶಗಳನ್ನು ಅವಲಂಬಿಸಬೇಕಾಗಿತ್ತು (ಅಮೇರಿಕಾ ಮತ್ತು ಬ್ರಿಟನ್ನಿನ ಪ್ರಕಾಶಕರನ್ನು).

ನಂತರ ಭಾರತೀಯ ಪ್ರಕಾಶಕರು ಅಮೇರಿಕಾ ಮತ್ತು ಯೂರೋಪಿಯನ್ ರಾಷ್ಟ್ರಗಳ ಪುಸ್ತಕಗಳನ್ನು ಮರುಮುದ್ರಣ (ಕಡಿಮೆ ಬೆಲೆಗೆ ದೊರಕುವಂತೆ ಮಾಡಲು) ಮಾಡಿ ಪ್ರಕಟಿಸುವ ಮೂಲಕ ವೈಜ್ಞಾನಿಕ, ತಾಂತ್ರಿಕ ಮತ್ತು ವೈದ್ಯಕೀಯ ಪುಸ್ತಕ ಪ್ರಕಟಣೆಯ ಕ್ಷೇತ್ರಕ್ಕೆ ಪ್ರವೇಶಿಸಿದರು.



ಈ ಕ್ಷೇತ್ರದಲ್ಲಿ ಪ್ರಾಂತೀಯ ಭಾಷೆಗಳಿಗೆ ಬಂದರೆ, ನಾವುಗಳೆಲ್ಲರೂ ಇನ್ನೂ ಬಾಲ್ಯಾವಸ್ಥೆಯಲ್ಲಿಯೇ ಇದ್ದೇವೆಂದು ಹೇಳಬಹುದು.

**ಕಾದಂಬರಿ ಸಾಹಿತ್ಯ**

ಭಾರತದಂತಹ ದೇಶದಲ್ಲಿ ಸಾಮಾನ್ಯ ಪುಸ್ತಕಗಳು ಅಂದರೆ ಕಾದಂಬರಿ. ಕಾವ್ಯ ಮತ್ತು ಇತರ ಪುಸ್ತಕಗಳನ್ನು ಮಾರಾಟ ಮಾಡುವವರ ಅಂಗಡಿಗಳು ಸಾಕಷ್ಟು ಸಂಖ್ಯೆಯಲ್ಲಿ ಇಲ್ಲ ಎನ್ನುವ ಮಾತಿದೆ. ಅಲ್ಲದೆ, ರಾಷ್ಟ್ರಮಟ್ಟದಲ್ಲಾಗಲೀ ರಾಜ್ಯಮಟ್ಟದಲ್ಲಾಗಲೀ ಹೊಸ ಪುಸ್ತಕಗಳು ಪ್ರಕಾಶನಗೊಂಡ ಮೂರರಿಂದ ಆರು ತಿಂಗಳ ನಂತರ ವಿಮರ್ಶೆಯು ಪತ್ರಿಕೆಯಲ್ಲಿ ಪ್ರಕಟವಾಗುತ್ತದೆ. ಇದರಿಂದ ಕೃತಿಗಳಿಗೆ ಸಾಕಷ್ಟು ಪ್ರಚಾರ ಸಿಗುವುದಿಲ್ಲ.

ನಮ್ಮ ದೇಶದ ಯಾವುದೇ ರಾಜ್ಯದ ಸಾರ್ವಜನಿಕ ಗ್ರಂಥಾಲಯ ವ್ಯವಸ್ಥೆಯು ತೃಪ್ತಿಕರವಾಗಿಲ್ಲದಿರುವುದು ಸರ್ವವಿದಿತ. ಕಾರಣ ಹಣದ ಕೊರತೆ, ಸಿಬ್ಬಂದಿಗಳ ಕೊರತೆ. ಗ್ರಂಥಪಾಲಕರು ಇದ್ದ ಕಡೆ ಸರಿಯಾದ ರೀತಿಯಲ್ಲಿ ವಸೂಲಾಗಿ ಇಲಾಖೆಗೆ ತಲುಪದೇ ಇರುವುದು. ಅನುದಾನ ಪದ್ಧತಿಯಲ್ಲಿ ಅನುದಾನ ಕೊಡುವ ಬಗ್ಗೆ ನಿಧಾನಗತಿಗಳು. ಹೆಚ್ಚಿನ ಸಮಯದಲ್ಲಿ ವರ್ಷದ ಕೊನೆಯಲ್ಲಿ ಹಣ ಇಲಾಖೆಗೆ ಬರುವುದರಿಂದ ಅವಸರದಲ್ಲಿ ಲಭ್ಯವಿರುವ ಪುಸ್ತಕಗಳನ್ನು ಖರೀದಿಸಬೇಕಾಗುತ್ತದೆ. ರಾಜಾ ರಾಮಮೋಹನ ರಾಯ್ ಗ್ರಂಥಾಲಯ ಪ್ರತಿಷ್ಠಾನವು ಖಾಸಗಿ ಮತ್ತು ಸಾರ್ವಜನಿಕ ಗ್ರಂಥಾಲಯಗಳಿಗೆ ಪುಸ್ತಕಗಳನ್ನು ಖರೀದಿಸಲು ಅನುದಾನ ಕೊಡುವುದು ಎಲ್ಲರಿಗೂ ತಿಳಿದ ವಿಷಯವೇ.

ಒಂದು ಹೊಸ ಪುಸ್ತಕ ಯಶಸ್ವಿಯಾಗುವುದು ಪ್ರಕಾಶಕರ ಮಾರಾಟ ತಂತ್ರಗಾರಿಕೆ ಮೇಲೆ ನಿಂತಿರುತ್ತದೆ. ಇದಕ್ಕಾಗಿ ಪ್ರಕಾಶಕರ ಪುಸ್ತಕಗಳ ಪಟ್ಟಿಯು ಅದ್ವಿತೀಯವಾಗಿರಬೇಕು. ಆಕರ್ಷಕ ರಕ್ಷಾಪುಟ ಬಹಳ ಪ್ರಮುಖ ಪಾತ್ರವನ್ನು ವಹಿಸುತ್ತದೆ. ಯೋಜಿತ ರೀತಿಯಲ್ಲಿ ಪುಸ್ತಕಗಳನ್ನು ತರಬೇಕು. ಪುಸ್ತಕಗಳ ಬಗ್ಗೆ ಚರ್ಚೆ, ಪುಸ್ತಕ ಪ್ರದರ್ಶನದಲ್ಲಿ ಭಾಗವಹಿಸುವುದು, ಇವೂ ಮುಖ್ಯವೇ.

ವರ್ಷ ಅಥವಾ ಎರಡು ವರ್ಷಕ್ಕೊಮ್ಮೆ ಸಮಗ್ರ ಪುಸ್ತಕಗಳ ಪಟ್ಟಿಯನ್ನು ಹೊರತರಬೇಕು.

**ಪುಸ್ತಕೋದ್ಯಮ ಮತ್ತು ಮುದ್ರಿತ ಪುಸ್ತಕಗಳ ಕಾಯಿದೆ – ಕಾಪಿರೈಟ್ ಕಾಯಿದೆ**

ಬ್ರಿಟಿಷರು ಸಂಪೂರ್ಣವಾಗಿ ಭಾರತವನ್ನು ಹತೋಟಿಗೆ ತೆಗೆದುಕೊಂಡ ಮೇಲೆ ಕೈಗೊಂಡ ಮೊದಲ ಕೆಲಸ ಆಧುನಿಕ ಶಿಕ್ಷಣ ಪ್ರಚಾರ ಕಾರ್ಯ. ಇದಕ್ಕೆ ಪುಸ್ತಕೋದ್ಯಮವು ಸಹಕಾರ ಸಾಧನವಾಯಿತು. ಪುಸ್ತಕಗಳು ಬೇರೆ ಬೇರೆ ಭಾಷೆಗಳಲ್ಲಿ ಮುದ್ರಣಗೊಳ್ಳತೊಡಗಿದವು. ಬ್ರಿಟಿಷರಿಗೆ ದೇಶದಲ್ಲಿ ಯಾವ ರೀತಿಯ ಪುಸ್ತಕಗಳು ಪ್ರಕಟಗೊಳ್ಳುತ್ತಿವೆ ಎಂದು ತಿಳಿದುಕೊಳ್ಳುವ ಕುತೂಹಲ (ಅನುಮಾನವೂ ಇದ್ದಿರಬಹುದು). ಈ ಕುತೂಹಲವೇ ದೇಶದಲ್ಲಿ ೧೮೬೭ರಲ್ಲಿ ಮುದ್ರಿತ ಪುಸ್ತಕಗಳ ಕಾಯಿದೆ ಜಾರಿಗೆ ಬರಲು ಕಾರಣವಾಯಿತು. ಈ ಹಿಂದೆ ಇಂಗ್ಲೆಂಡ್‌ನಲ್ಲಿ ೧೭೦೯ರಲ್ಲಿಯೇ ಬ್ರಿಟಿಷ್ ಕಾಪಿರೈಟ್ ಕಾಯಿದೆ ಬಂದಿತ್ತು, ಇದು ಪ್ರಪಂಚದಲ್ಲಿ ಮೊತ್ತಮೊದಲ ಕಾಪಿರೈಟ್ ಕಾಯಿದೆ ಎನ್ನಬಹುದು.

೧೮೬೭ರ ಮುದ್ರಿತ ಪುಸ್ತಕಗಳ ಕಾಯಿದೆ ಪ್ರಕಾರ ಲೇಖಕರಾಗಲೀ, ಪ್ರಕಾಶಕರಾಗಲೀ ಹೊಸದಾಗಿ ಪ್ರಕಟಗೊಂಡ ಪುಸ್ತಕಗಳ ಮೂರು ಪ್ರತಿಗಳನ್ನು ಉಚಿತವಾಗಿ ಸರ್ಕಾರಕ್ಕೆ ಸಲ್ಲಿಸಬೇಕಾಯಿತು. ಅವುಗಳಲ್ಲಿ ಒಂದನ್ನು ಪ್ರಾಂತೀಯ ಸರಕಾರವು ಕಾಪಿರೈಟ್ ಗ್ರಂಥಾಲಯದಲ್ಲಿರಿಸಿ, ಇನ್ನೆರಡು ಪ್ರತಿಗಳನ್ನು ಕೇಂದ್ರ ಸರ್ಕಾರಕ್ಕೆ ಕಳುಹಿಸಬೇಕಾಯಿತು. ಹೀಗೆ ಗ್ರಂಥ ಸ್ವಾಮ್ಯ ರೀತಿಯಲ್ಲಿ ಗ್ರಂಥಾಲಯಕ್ಕೆ ಸೇರಬೇಕಾಯಿತು.

೧೮೮೫ರಲ್ಲಿ ಬರ್ನೆಯಲ್ಲಿ ನಡೆದ ಸಮ್ಮೇಳನದಲ್ಲಿ ಅಂತರರಾಷ್ಟ್ರೀಯ ಮಟ್ಟದಲ್ಲಿ ಒಂದೇ ತೆರನಾದ ಏಕರೂಪ ಕಾಪಿರೈಟ್ ವ್ಯವಸ್ಥೆಯನ್ನು ಜಾರಿಗೆ ತರಲು ಪ್ರಯತ್ನಿಸಲಾಯಿತು. ನಂತರ ಬಂದದ್ದು ೧೯೫೨ರಲ್ಲಿ ಯುನೆಸ್ಕೋ ಏಕರೂಪ ಕಾಪಿರೈಟ್ ಒಡಂಬಡಿಕೆ.

ಭಾರತೀಯ ಕಾಪಿರೈಟ್ ಕಾಯಿದೆ ಜಾರಿಗೆ ಬಂದಿದ್ದು ೧೯೫೭ರಲ್ಲಿ. ನಂತರ ೧೯೮೩, ೧೯೮೪, ೧೯೯೪ ಮತ್ತು ೧೯೯೯ರಲ್ಲಿ ತಿದ್ದುಪಡಿಯನ್ನು ತರಲಾಯಿತು.

### ಕನ್ನಡ ಪುಸ್ತಕೋದ್ಯಮ

ರಾಷ್ಟ್ರಮಟ್ಟದಲ್ಲಿ ಮ್ಯಾಕ್‌ಮಿಲನ್ ಇಂಡಿಯಾ ಲಿ., ಪೆಂಗ್ವಿನ್ ಪಬ್ಲಿಕೇಷನ್ಸ್, ಆಕ್ಸ್‌ಫರ್ಡ್ ಯೂನಿವರ್ಸಿಟಿ ಪ್ರೆಸ್ ಲಿ., ಸುರ್ಜಿತ್ ಪಬ್ಲಿಕೇಷನ್ಸ್ ಇನ್ನು ಮುಂತಾದವು ಹೆಸರು ಮಾಡಿದ್ದರೆ, ಪಠ್ಯಪುಸ್ತಕಗಳಿಗೆ ಸಂಬಂಧಿಸಿದಂತೆ ಸುಲ್ತಾನ್ ಚಾಂದ್ ಅಂಡ್ ಸನ್ಸ್, ಎಸ್ ಚಾಂದ್ ಅಂಡ್ ಸನ್ಸ್, ಹಿಮಾಲಯ ಪಬ್ಲಿಕೇಷನ್ಸ್ ಲಿಮಿಟೆಡ್, ಟಾಟಾ ಮಕ್‌ಗ್ರಾಹಿಲ್, ಕಲ್ಯಾಣ್ ಪಬ್ಲಿಕೇಷನ್ಸ್ ಮತ್ತು ಕರ್ನಾಟಕದಲ್ಲಿಯ ಯುನೈಟೆಡ್ ಪಬ್ಲಿಕೇಷನ್ಸ್ ಹೆಸರು ಮಾಡಿವೆ.

ಕನ್ನಡ ಪುಸ್ತಕೋದ್ಯಮಕ್ಕೆ ಸಂಬಂಧಿಸಿದಂತೆ ಕರ್ನಾಟಕದಲ್ಲಿ ೩೦೦೦ ಪ್ರಕಾಶಕರಿದ್ದಾರೆ. ಇದರಲ್ಲಿ ಒಳ್ಳೆಯ ಹೆಸರನ್ನು ಪಡೆದಿರುವವರು, ಮನೋಹರ ಗ್ರಂಥಾಲಯ, ಸಮಾಜ ಪುಸ್ತಕಾಲಯ, ನವಕರ್ನಾಟಕ ಪಬ್ಲಿಕೇಷನ್ಸ್, ಕಾವ್ಯಾಲಯ ಪ್ರಕಾಶನ, ಗೀತಾ ಬುಕ್ ಹೌಸ್, ಅಕ್ಷರ ಪ್ರಕಾಶನ ಪುಸ್ತಕ, ಪುಸ್ತಕ ಪ್ರಕಾಶನ (ಮೂಡಿಗೆರೆ). ಇನ್ನು ಪಠ್ಯ ಪುಸ್ತಕಗಳಿಗೆ ಸಂಬಂಧಿಸಿದಂತೆ ವಿದ್ಯಾನಿಧಿ ಪ್ರಕಾಶನ (ಗದಗ), ವಿದ್ಯಾವಾಹಿನಿ ಪ್ರಕಾಶನ (ಹುಬ್ಬಳ್ಳಿ), ಸುನಿಲ್ ಪ್ರಕಾಶನ (ಬೆಂಗಳೂರು).

**ಕಾರಬಾರ**

ಆತಂಕದಲ್ಲೂ<br>
ನಮ್ಮ ಸಮ್ಮಿಶ್ರ<br>
''ಸರಕಾರ'' !<br>
ನಿರಾತಂಕವಾಗಿ<br>
ನಡೆಸಿದೆ ದೋಚುವ<br>
''ಕಾರಬಾರ'' !!

**ಅಶೋಕ ಯ. ಪತ್ತಾರ**<br>
ಸ.ಕಿ.ಕ.ಗಂ.ಶಾಲೆ, ನಂ. ೧೯, ಡಿ.<br>
ಆರ್. ಪಾಟೀಲನಗರ ಹಮಾಲರ

ನವಕರ್ನಾಟಕದವರು ವರ್ಷಪೂರ್ತಿ ರಾಜ್ಯದ ವಿವಿಧ ಕಡೆ ಪುಸ್ತಕ ಪ್ರದರ್ಶನ ಏರ್ಪಡಿಸುತ್ತಾ ಉತ್ತಮವಾದ ಕೆಲಸವನ್ನು ಮಾಡುತ್ತಿದ್ದಾರೆ. ಇನ್ನು ಪುಸ್ತಕಗಳನ್ನು ಅಂದವಾಗಿ ಮುದ್ರಿಸುವಲ್ಲಿ ಪ್ರಕಟಿಸುವಲ್ಲಿ ಮತ್ತು ಪುಸ್ತಕಗಳ ಪಟ್ಟಿಯನ್ನು ಹೊರತರುವಲ್ಲಿ ನವಕರ್ನಾಟಕ ಮತ್ತು ಪುಸ್ತಕ ಪ್ರಕಾಶನ (ಮೂಡಿಗೆರೆ) ಇವರುಗಳು ಉತ್ತಮವಾದ ಪ್ರಯತ್ನವನ್ನು ಮಾಡುತ್ತಿದ್ದಾರೆ.

ಶ್ರೀ ಪೂರ್ಣಚಂದ್ರ ತೇಜಸ್ವಿಯವರ ಪ್ರಕಾರ ಕನ್ನಡ ಪುಸ್ತಕೋದ್ಯಮದ ಇಂದಿನ ಸ್ಥಿತಿಗೆ ಲೇಖಕರು ಮತ್ತು ಪ್ರಕಾಶಕರೇ ಕಾರಣ ಎನ್ನುತ್ತಾರೆ. ಕೆಲವರು ಪುಸ್ತಕಗಳನ್ನು ಶೇ. ೬೦ರಷ್ಟು ಕಡಿಮೆ ಬೆಲೆಗೆ ಯಾವುದೇ ಪುಸ್ತಕ ವ್ಯಾಪಾರಿಗಳಿಗೆ ದಾಟಿಸಿ ಕೈತೊಳೆದುಕೊಳ್ಳುತ್ತಾರೆ.



ಅವರು ಅವುಗಳನ್ನು ಸಗಟು ಖರೀದಿಯ ವ್ಯವಹಾರದಲ್ಲಿ ಸಾರ್ವಜನಿಕ ಗ್ರಂಥಾಲಯಗಳಿಗೆ ವರ್ಗಾಯಿಸುತ್ತಾರೆ. ಹಾಗಾಗಿ ನಮ್ಮ ಗ್ರಂಥಾಲಯಗಳು ಗೋಡೌನುಗಳಾಗಿ ಪರಿವರ್ತಿತವಾಗಿವೆ ಎಂದು ದೂರಿದ್ದಾರೆ (ಪುಸ್ತಕ ಮಾಹಿತಿ ೨೦೦೪, ಮಾರ್ಚ್-ಮೇ).

''ಜಾಗತೀಕರಣದಿಂದ ಇಡೀ ಪ್ರಪಂಚವೇ 'ಗ್ಲೋಬಲ್ ವಿಲೇಜ್' ಆಗುತ್ತಿದೆ ಎಂದು ಪ್ರಚಾರವಿದೆ. ಇದರಿಂದ ಸಂಪನ್ಮೂಲಗಳುಳ್ಳ ಮತ್ತು ಪರಿಣತರಿಂದ ಕೂಡಿದ ದೇಶವು ಬೇರೆ ದೇಶಗಳೊಂದಿಗೆ ಪರಸ್ಪರ ಕಲೆತು ತಮ್ಮ ತಮ್ಮ ಅಗತ್ಯಕ್ಕೆ ಬೇಕಾದಂತಹ ಅನುಕೂಲತೆಗಳನ್ನು ಪಡೆಯಬಹುದೆನ್ನುತ್ತಾರೆ.''

ಭಾರತವು ಇಂದಿನ ಕಂಪ್ಯೂಟರ್ ಯುಗದಲ್ಲಿ ಯಾವುದೇ ಮುಂದುವರಿದ ದೇಶಗಳಿಗಿಂತ ಕಡಿಮೆ ಇಲ್ಲವೆಂದು ತೋರಿಸಿಕೊಟ್ಟಿದೆ. ಈ ತಾಂತ್ರಿಕತೆಯನ್ನು ಈಗ ಪುಸ್ತಕಗಳ ಮುದ್ರಣಕ್ಕೂ ಉಪಯೋಗಿಸಿಕೊಳ್ಳುತ್ತಿದ್ದಾರೆ. ಹಿಂದಿನ ಕಂಪ್ಯೂಟರಿಂಗ್ ಟೈಪ್ ಸೆಟ್ಟಿಂಗ್‌ಗಳು ಬಹಳ ಕಾಲ ತೆಗೆದುಕೊಳ್ಳುತ್ತಿದ್ದವು. ಇಂದಿನ ಡಿಟಿಪಿಗಳು, ಸಿಡಿಗಳು, ಓಸಿಆರ್‌ಗಳು ನಮಗೆ ಬೇಕಾದ ಮಾಹಿತಿಯನ್ನು ಕೂಡಲೇ ಸರಿಪಡಿಸಿ ಮರುಮುದ್ರಣಗೊಳ್ಳಲು ಸಿದ್ಧಮಾಡಬಹುದಾಗಿದೆ.

ಇಂದು ಮುದ್ರಣ ಯಂತ್ರಗಳಲ್ಲೂ ಕೂಡ ಅಗಾಧವಾದ ಬದಲಾವಣೆಯಾಗಿದೆ. ಆಫ್‌ಸೆಟ್ ಮುದ್ರಣ ಯಂತ್ರಗಳನ್ನು ಕಂಪ್ಯೂಟರೀಕರಿಸಲಾಗಿರುವುದರಿಂದ ಸಾವಿರಾರು ಪ್ರತಿಗಳನ್ನು ಒಂದು ಗಂಟೆಯ ಒಳಗೆಯೇ ಮುದ್ರಿಸಬಹುದಾಗಿದೆ. ಜೊತೆಯಲ್ಲಿ ಬಣ್ಣದ ಚಿತ್ರಗಳನ್ನು ಹೊಂದಿಸಬಹುದಾಗಿದೆ.

ಮುದ್ರಣ ಯಂತ್ರದ ಜಗತ್ತು ಯಾವ ರೀತಿ ಬದಲಾಗುತ್ತಿದೆ ಎಂದರೆ, ಮುಂದಿನ ಐದಾರು ವರ್ಷಗಳಲ್ಲಿ ಸಾಕಷ್ಟು ಬದಲಾವಣೆಯಾಗಬಹುದು. ಅವಶ್ಯಕತೆ ಬಂದಹಾಗೆ ಮುದ್ರಿಸುತ್ತಾ ಹೋಗುವ ಕಾಲವೂ ಬರಬಹುದು.

ವಿಶ್ವದ ಸುಮಾರು ಶೇ. ೧೫ರಷ್ಟು ಜನಸಂಖ್ಯೆ ಹೊಂದಿರುವ ಭಾರತ ಜಾಗತಿಕ ಪುಸ್ತಕಗಳಲ್ಲಿ ಶೇ. ೩ರಷ್ಟನ್ನು ಪ್ರತಿನಿಧಿಸುತ್ತಿದೆ.

### ಸರಕಾರಿ ಸಂಸ್ಥೆಗಳು, ವಿಶ್ವವಿದ್ಯಾಲಯಗಳ ಪ್ರಕಟಣೆಗಳು

ದೇಶದಲ್ಲಿ ಸರಕಾರಿ ಸ್ವಾಯತ್ತ ಸಂಸ್ಥೆಗಳು, ರಾಜ್ಯದ ಸ್ವಾಯತ್ತ ಸಂಸ್ಥೆಗಳು ಮತ್ತು ಪ್ರತಿಯೊಂದು ರಾಜ್ಯದ ವಿಶ್ವವಿದ್ಯಾಲಯಗಳು ಪ್ರಸರಣ ವಿಭಾಗವನ್ನು ಹೊಂದಿವೆ. ಕೇಂದ್ರದಲ್ಲಿ ಕೇಂದ್ರ ಸಾಹಿತ್ಯ ಅಕಾಡೆಮಿಯು ಉತ್ತಮ ಪುಸ್ತಕಗಳನ್ನು ಒಂದು ಭಾಷೆಯಿಂದ ದೇಶದ ಇತರೆ ಭಾಷೆಗಳಿಗೆ ಅನುವಾದಮಾಡಿಸಿ ಪ್ರಕಟಣೆಯ ಕೆಲಸವನ್ನು ಮಾಡುತ್ತಿದೆ. ಪುಸ್ತಕ ಪ್ರದರ್ಶನ ಮತ್ತು ಮಾರಾಟದ ಕೆಲಸವನ್ನು ಮಾಡುತ್ತಿದೆ. ಆದರೆ ಹೆಚ್ಚು ಪ್ರಚಾರವಿಲ್ಲದೆ ಇರುವುದರಿಂದ ಪುಸ್ತಕಗಳ ಬಗ್ಗೆ ಸಾಮಾನ್ಯ ಜನರಿಗೆ ತಿಳಿಯುವುದಿಲ್ಲ. ಕರ್ನಾಟಕದಲ್ಲಿ ಕನ್ನಡ ಸಾಹಿತ್ಯ ಪರಿಷತ್ತು, ಕರ್ನಾಟಕ ಸಾಹಿತ್ಯ ಅಕಾಡೆಮಿ, ಕನ್ನಡ ಪುಸ್ತಕ ಪ್ರಾಧಿಕಾರ ಮತ್ತು ಕನ್ನಡ ಸಂಸ್ಕೃತಿ ಇಲಾಖೆ ಇವುಗಳೂ ಕೂಡ ಪ್ರಕಟಣಾ ಕೈಂಕರ್ಯವನ್ನು ಕೈಗೊಂಡು ಉತ್ತಮ ಕೆಲಸವನ್ನು ಮಾಡುತ್ತಿವೆ. ಕನ್ನಡ ಪುಸ್ತಕ ಪ್ರಾಧಿಕಾರವು ತನ್ನ ಪುಸ್ತಕ ಮಾರಾಟ ಮಳಿಗೆಯನ್ನು ವಾಹನ ರೂಪದಲ್ಲಿ ಗ್ರಾಮಾಂತರ ಪ್ರದೇಶಗಳಿಗೆ ತಲುಪಿಸಲು ಪ್ರಯತ್ನ ನಡೆಸುತ್ತಿರುವುದು ಬಹು ಸಂತೋಷದಾಯಕವಾದದ್ದು. ಆದರೆ ಈ ಎಲ್ಲಾ ಸಂಸ್ಥೆಗಳಿಂದ ಪ್ರಕಟವಾಗುವ ಪುಸ್ತಕಗಳ ಬಗ್ಗೆ ಪ್ರಚಾರ ಸಾಲದು ಎಂಬ ಮಾತಿದೆ.

ಕರ್ನಾಟಕದ ಎಲ್ಲ ವಿಶ್ವವಿದ್ಯಾಲಯಗಳ ಪ್ರಸಾರಾಂಗಗಳೂ ಕೂಡ ಪುಸ್ತಕ ಪ್ರಕಟಣೆ ಬಗ್ಗೆ ಸರಿಯಾದ ಮಾಹಿತಿಯನ್ನು ಕೊಡುವುದಿಲ್ಲ. ಅಲ್ಲದೆ, ಯಾವುದೇ ಪುಸ್ತಕಗಳ ಬಗ್ಗೆ ಮರುಮುದ್ರಣ ಮಾಡುವುದು ಬಹಳ ತಡವಾಗಿ ಆಗುತ್ತದೆ. ಇಲ್ಲದೆಯೂ ಇರಬಹುದು. ಆದರೆ ಕನ್ನಡ ವಿಶ್ವವಿದ್ಯಾಲಯ, ಹಂಪಿ ಮಾತ್ರ ಬಹಳ ಒಳ್ಳೆಯ ಕೆಲಸಗಳನ್ನು ಮಾಡುತ್ತಿದೆ.

### ಪುಸ್ತಕ ಪ್ರಕಟಣೆಯಲ್ಲಿ ಭಾರತದ ಸ್ಥಾನ

ವಿಶ್ವಮಟ್ಟದ ಪುಸ್ತಕ ಪ್ರಕಟಣೆಯಲ್ಲಿ ಭಾರತವು ಇತ್ತೀಚೆಗೆ ೩ನೇ ಸ್ಥಾನವನ್ನು ಪಡೆದುಕೊಂಡಿದೆ. ಆದರೆ ವಿಜ್ಞಾನ ಮತ್ತು ತಾಂತ್ರಿಕ ವಿಷಯಗಳಲ್ಲಿ ೧೮ನೇ ಸ್ಥಾನದಲ್ಲಿದೆ. ೧೯೮೪ರಲ್ಲಿ ೯೯೫೪ ಪುಸ್ತಕಗಳು ಪ್ರಕಟಗೊಂಡವು. ಭಾರತದಲ್ಲಿ ೧೯೮೮ರಲ್ಲಿ ೨೦,೦೦೦ ಪುಸ್ತಕಗಳನ್ನು (೧೮ ಭಾಷೆಗಳಲ್ಲಿ) ಪ್ರಕಟಿಸಲಾಯಿತು. ಇದರಲ್ಲಿ ಶೇ. ೮೦ರಷ್ಟು ಆಂಗ್ಲ ಭಾಷೆಯ ಪುಸ್ತಕಗಳಿದ್ದವು. ೬೪,೦೦೦ ಪುಸ್ತಕಗಳು ೧೮ ಭಾಷೆಗಳಲ್ಲಿ ೧೯೯೯ರಲ್ಲಿ ಪ್ರಕಟವಾದವು. ಇದರಲ್ಲಿ ೧೬,೦೨೬ ಹಿಂದಿ, ಇಂಗ್ಲಿಷ್ ೧೨,೫೨೮, ತಮಿಳು ೫,೮೭೯. ಪಾಟೀಲ ಪುಟ್ಟಪ್ಪನವರು ಧಾರವಾಡದಲ್ಲಿ ನಡೆದ 'ಪುಸ್ತಕ ಪೂರ್ಣಿಮ ೨೦೦೩' ಎಂಬಲ್ಲಿ ಮಾತನಾಡುತ್ತ ''ಸ್ಪೇನ್‌ನಂತಹ ಚಿಕ್ಕ ದೇಶದಲ್ಲಿ ಪ್ರತಿವರ್ಷ ೨೨,೦೦೦ ಕೃತಿಗಳು ಪ್ರಕಟವಾಗುತ್ತವೆ. ನಮ್ಮಲ್ಲಿ ಓದುವ ಹವ್ಯಾಸದ ಕೊರತೆ ಇದೆ. ಕರ್ನಾಟಕದಲ್ಲಿ ಪ್ರತಿವರ್ಷ ೧೫-೧೬ ಸಾವಿರ ಪುಸ್ತಕಗಳು ಪ್ರಕಟವಾಗುತ್ತಿವೆ'' ಎಂದು ತಿಳಿಸಿದರು (ವಿಜಯ ಕರ್ನಾಟಕ ೧೩ ಜನವರಿ ೨೦೦೩). ಒಟ್ಟಿನಲ್ಲಿ ಪುಸ್ತಕ ಪ್ರಕಟಣೆಯಲ್ಲಿ ಕನ್ನಡದ ಪಾಲು ಶೇ. ೩ ಅಥವಾ ಇಂಗ್ಲಿಷ್ ಶೇ. ೪೨, ಹಿಂದಿ ಶೇ. ೧೫, ತಮಿಳು ಶೇ. ೮, ಮಲೆಯಾಳಂ ಶೇ. ೫. ಇದು ೧೦ ವರ್ಷಗಳ ಹಿಂದಿನ ವರದಿ. ಆನಂತರ ಸ್ವಲ್ಪಮಟ್ಟಿನ ಮುಂದುವರಿಕೆಯಾಗಿರಬಹುದು.

ಕೇರಳದಲ್ಲಿ ಪುಸ್ತಕ ಪ್ರಕಟಣೆಗಳು ಹೆಚ್ಚಾಗಲು ಕಾರಣ ಅಲ್ಲಿನ ಓದುಗರು ಪ್ರಕಟಣೆಯಲ್ಲಿ ಸಹಕಾರಿ ಭಾಗಿತ್ವವನ್ನು ಮಾಡಿಕೊಂಡಿರುವುದು. ೧೯೪೫ರಲ್ಲಿ ಸ್ಥಾಪಿಸಿದ ಸಾಹಿತ್ಯ ಪ್ರವರ್ತಕ ಕೋ-ಆಪರೇಟೀವ್ ಸೊಸೈಟಿ ಇಂದು ಕೇರಳದ ಅತಿ ದೊಡ್ಡ ಖಾಸಗಿ ಸಂಸ್ಥೆ. ೫೦೦ ಜನ ಸಿಬ್ಬಂದಿಯನ್ನು ಹೊಂದಿದೆ. ಲೇಖಕರಿಗೆ ಶೇ. ೩೦ರಷ್ಟು ಗೌರವಧನವನ್ನು ನೀಡುವ ಮೂಲಕ ದೇಶದಲ್ಲಿ ಅತಿ ಹೆಚ್ಚಿನ ಗೌರವಧನ ನೀಡುವ ಕೀರ್ತಿ ಈ ಸಂಸ್ಥೆಗೆ ಸಲ್ಲುತ್ತದೆ.

### ಕೊಳ್ಳುವಿಕೆಯಲ್ಲಿ ಗ್ರಂಥಾಲಯದ ಪಾತ್ರ

ಇಂದಿಗೂ ಗ್ರಂಥಾಲಯಗಳು ಪುಸ್ತಕ ಪ್ರಕಾಶಕರಿಗೆ ಮತ್ತು ಲೇಖಕರಿಗೆ ಆಶ್ರಯ ನೀಡುತ್ತಿರುವ ಪ್ರಮುಖ ಸಂಸ್ಥೆಗಳು. ನಮ್ಮ ದೇಶದಲ್ಲಿ ಗ್ರಂಥಾಲಯ ಸೇವೆಗಾಗಿ ಕೇವಲ ವಾರ್ಷಿಕ ತಲಾ ೫ ಪೈಸೆಯಷ್ಟನ್ನು ಸರಕಾರ ಖರ್ಚು ಮಾಡುತ್ತಿದೆ. ಇಷ್ಟು ಕಡಿಮೆ ಮೊತ್ತದಲ್ಲಿ ಗ್ರಂಥಾಲಯಗಳನ್ನು ಬಲಗೊಳಿಸಿ ಓದುಗರ ಆಸಕ್ತಿ ಪೂರೈಕೆಮಾಡಲು ಸಾಧ್ಯವಿಲ್ಲ. ಆದುದರಿಂದ ಕೇಂದ್ರ ಸರಕಾರವಾಗಲೀ, ರಾಜ್ಯ ಸರಕಾರಗಳಾಗಲೀ ವಾರ್ಷಿಕ ಬಜೆಟ್‌ನಲ್ಲಿ ಗ್ರಂಥಾಲಯಗಳಿಗೆ ಹೆಚ್ಚಿನ ಹಣ ಒದಗಿಸಿದರೆ ಗ್ರಂಥಾಲಯ ಸೇವೆಯನ್ನು ಉತ್ತಮ ಪಡಿಸಬಹುದು. ಆದರೆ ಕೇಂದ್ರ ಸರಕಾರವಾಗಲೀ, ರಾಜ್ಯ ಸರಕಾರಗಳಾಗಲೀ ಈ ಬಗ್ಗೆ ಹೆಚ್ಚಿನ ಆಸಕ್ತಿ ತೋರಿಸಿದಂತಿಲ್ಲ. ೧೯೯೦ರ ಯುನೆಸ್ಕೋ ಅಂಕಿಅಂಶಗಳ ಪ್ರಕಾರ ಜಗತ್ತಿನಲ್ಲಿ ಪ್ರಕಟವಾಗಿರುವ ಶೀರ್ಷಿಕೆಗಳು ೮,೪೨,೦೦೦. ಇವುಗಳಲ್ಲಿ ೨,೪೨,೦೦೦ ಶೀರ್ಷಿಕೆಗಳು ಅಭಿವೃದ್ಧಿ ಹೊಂದುತ್ತಿರುವ ದೇಶಗಳಲ್ಲಿ ಪ್ರಕಟವಾಗಿವೆ. ಈ ದೃಷ್ಟಿಯಿಂದ ನೋಡಿದಾಗ ಅಭಿವೃದ್ಧಿ ಆಗುತ್ತಿರುವಂತಹ ಭಾರತದಲ್ಲಿ ಪ್ರಕಟವಾಗುತ್ತಿರುವ ಶೀರ್ಷಿಕೆಗಳ ಸಂಖ್ಯೆ ಪ್ರೋತ್ಸಾಹದಾಯಕವಾಗಿಲ್ಲ.

### ಪುಸ್ತಕೋದ್ಯಮ ಬೆಳೆಯಲು ಏನು ಮಾಡಬಹುದು

ಪುಸ್ತಕೋದ್ಯಮ ಬೆಳೆಯಲು ಓದುವ ಅಭ್ಯಾಸ ಬೆಳೆಸುವ ಕೆಲಸ ಆಗಬೇಕಿದೆ. ಹೊಸ ಪುಸ್ತಕಗಳು ಪ್ರಕಟವಾದಾಗ ವೃತ್ತಪತ್ರಿಕೆಗಳಲ್ಲದೆ ಟಿ.ವಿ., ರೇಡಿಯೋಗಳಂತಹ ಮಾಧ್ಯಮಗಳನ್ನು ಬಳಸಿಕೊಳ್ಳಬಹುದು. ಪುಸ್ತಕಗಳನ್ನು ಹೆಚ್ಚು ಆಕರ್ಷಕವಾಗುವಂತೆ ಮಾಡಬೇಕು ಮತ್ತು ಓದುಗರಿಗೆ ಕೈಗೆಟಕುವ ಬೆಲೆಯಲ್ಲಿ ಪುಸ್ತಕಗಳ ಬೆಲೆ ಇರಬೇಕು.

ಪುಸ್ತಕಗಳನ್ನು ಗ್ರಂಥಾಲಯಗಳು ಕೊಳ್ಳುವಾಗ ಪುಸ್ತಕದ ಗಾತ್ರ, ಅದರಲ್ಲಿ ಉಪಯೋಗಿಸಿದ ಕಾಗದ, ಇಂತಹ ಮುದ್ರಣವಿದ್ದರೆ ಇಷ್ಟು ಬೆಲೆ ಎಂದು ನಿಗದಿ ಪಡಿಸಿದರೆ, ಭ್ರಷ್ಟಾಚಾರನನ್ನು ಆದಷ್ಟು ಕಡಿಮೆಮಾಡಬಹುದು.

ಪುಸ್ತಕಗಳನ್ನು ಕೊಳ್ಳುವಾಗ ಯಾವ ಗ್ರಂಥಾಲಯಗಳಿಗೆ ಯಾವ ರೀತಿಯ ಪುಸ್ತಕಗಳು ಅಗತ್ಯ ಎಂಬುದನ್ನು ನಿರ್ಧರಿಸಬೇಕು. ಇದಕ್ಕೆ ಅಲ್ಲಿನ ಓದುಗರನ್ನು ಸಂಪರ್ಕಿಸಿ, ಸಲಹೆಗಳನ್ನು ಪಡೆಯಬೇಕು.

ಡೆಲಿವರಿ ಆಫ್ ಬುಕ್ಸ್ ಆಕ್ಟ್ ೧೯೫೪ರ ಪ್ರಕಾರ ನಮ್ಮ ದೇಶದಲ್ಲಿ ಪ್ರಕಟವಾದ ಹೊಸ ಪುಸ್ತಕಗಳ ಎರಡು ಕೃತಿಗಳನ್ನು ಲೇಖಕರಾಗಲಿ, ಪ್ರಕಾಶಕರಾಗಲಿ, ನಮ್ಮ ರಾಷ್ಟ್ರೀಯ ಗ್ರಂಥಾಲಯಕ್ಕೆ ಉಚಿತವಾಗಿ ಮತ್ತು ಕಡ್ಡಾಯವಾಗಿ ಕಳುಹಿಸಬೇಕಾಗುತ್ತದೆ. ಇದರಿಂದ ದೇಶದಲ್ಲಿ ಪ್ರಕಟವಾದ ಎಲ್ಲಾ ಪುಸ್ತಕಗಳ ಗ್ರಂಥಸೂಚಿಯನ್ನು ತರಲು ಅನುಕೂಲವಾಗುತ್ತದೆ ಮತ್ತು ರಾಷ್ಟ್ರೀಯ ಗ್ರಂಥಾಲಯ ಬೆಳೆಯಲು ಸಹಾಯಕವಾಗುತ್ತದೆ. ಆದರೆ ವಾಸ್ತವವಾಗಿ ದೇಶದಲ್ಲಿ ಪ್ರಕಟವಾದ ಪುಸ್ತಕಗಳ ಪೈಕಿ ಶೇ. ೬೦ರಷ್ಟು ಮಾತ್ರ ರಾಷ್ಟ್ರೀಯ ಗ್ರಂಥಾಲಯಕ್ಕೆ ಸೇರುತ್ತವೆ. ಇದರಿಂದಾಗಿ ಒಂದು ರೀತಿಯಲ್ಲಿ ಗ್ರಂಥಾಲಯದ ಬೆಳವಣಿಗೆಗೆ ಹಿನ್ನಡೆಯಾಗುತ್ತಿದೆ. ಆದ್ದರಿಂದ, ಕೇಂದ್ರ ಸರಕಾರವಾಗಲೀ ರಾಜ್ಯ ಸರಕಾರಗಳಾಗಲೀ ಈ ಬಗ್ಗೆ ನಿಯಮಗಳನ್ನು ಗಟ್ಟಿಗೊಳಿಸುವ ಬಗ್ಗೆ ಯೋಚಿಸುವುದು ಒಳ್ಳೆಯದು.

**ನಾರಾಯಣಮೂರ್ತಿ ಹೆಚ್. ಆರ್.**
ಆಯ್ಕೆ ಶ್ರೇಣಿ ಗ್ರಂಥಪಾಲಕರು, ತುಂಗಾ ಮಹಾವಿದ್ಯಾಲಯ, ತೀರ್ಥಹಳ್ಳಿ



## ಎರಡು ಗಜಲುಗಳು

ಮಾತಲ್ಲದ ಮಾತಿನಲ್ಲಿ ಹೇಳಬೇಕಾಗಿದೆ
ದಾರಿಯಲ್ಲದ ದಾರಿಯಲ್ಲಿ ತೆವಳಬೇಕಾಗಿದೆ
ಕಣ್ಣಲ್ಲದ ಕಣ್ಣಿನಿಂದ ಕಾಣಬೇಕಾಗಿದೆ

ಹೃದಯ ಬಡಿತವಿಲ್ಲದೆ ಬಾಳಬೇಕಾಗಿದೆ
ಮರಕ್ಕೊಂದು ಎಲೆಯಿಲ್ಲ, ನೆಲದಲ್ಲಿ ಹುಲ್ಲಿಲ್ಲ

ಇಂಥಲ್ಲಿ ಗೂಡು ಕಟ್ಟಲು ಅಳಬೇಕಾಗಿದೆ
ದೀಪಗಳು ಬೆಳಗಲಿಲ್ಲ, ದಾರಿ ಗೋಚರಿಸಲಿಲ್ಲ
ನಮ್ಮನು ನಾವು ಉರಿಸಿ ದಾರಿ ಬೆಳಗಬೇಕಾಗಿದೆ

ಊರೆಲ್ಲಾ ನೆಂಟರು, ಮನೆ ತುಂಬಾ ಬಳಗದವರು
ಇಂಥಲ್ಲಿ ಅಪರಿಚಿತನಂತೆ ಬಾಳಬೇಕಾಗಿದೆ

೨

ದೀಪ ಹಚ್ಚಿ ಮನೆ ಬೆಳಗಲು ಹೇಳಿದರೆ
ಬೆಂಕಿ ಹಚ್ಚಿ ಮನೆ ನೀವು ಬೆಳಗುವಿರಿ

ಮನೆ ಹೊಕ್ಕ ಕಳ್ಳನನ್ನು ಹಿಡಿಯಲು ಹೇಳಿದರೆ
ಮನೆ ಮಂದಿಯನು ಬಂಧಿಸಿ ಜೇಲಿಗೆ ತಳ್ಳುವಿರಿ

ಮಾನವತೆ ಮತಗ್ರಂಥ ನಿಮಗರ್ಪಿಸಿದರೆ
ಕೋಮುವಾದಿ ಗಲ್ಲಿಗಳಲ್ಲಿ ಗ್ರಂಥವನು ಸುಡುವಿರಿ

ಮಾನವತೆ, ಮಾನವತೆ ಎಂದು ನಾವು ಬೊಬ್ಬೆ ಹಾಕಿದರೆ
ಇವನ್ಯಾವ ದಾನವನೆಂದು ಕೆಕ್ಕರಿಸಿ ನೋಡುವಿರಿ

ಹೂವಿನ ಗಂಧವೆಂದು ಮೂಸಿ ನೋಡಿದರೆ ನಾವು
ಹೂ ಬಾಂಬು ಸಿಡಿಸಿ ಹೆಣದ ವಾಸನೆ ಹರಡುವಿರಿ

ಪ್ರವಾದಿಗಳು ಬರುವರೆಂದು ಕಾದು ಕುಳಿತೆವು ನಾವು
ಆಗಲೇ ಶಿಲುಬೆ, ತ್ರಿಶೂಲ ಹೊತ್ತು ನೀವು ನಿಂತಿರುವಿರಿ

**ಜಂಬಣ್ಣ ಅಮರಚಿಂತ**
ನಂ. ೮-೧೧-೧೮೧/೭೯-ಎಲ್, ವಿದ್ಯಾನಗರ, ರಾಯಚೂರು - ೫೮೪ ೧೦೩



# ಶ್ರಮಿಕ ದಿನಾಚರಣೆ ಹಾಗೂ ವಿಜ್ಞಾನ

ಅನೇಕ ಸಂದರ್ಭಗಳಲ್ಲಿ ಅತ್ಯಂತ ಸರಳ, ನೇರ ಪ್ರಶ್ನೆಗೆ ಸಂಕೀರ್ಣ ಹಾಗೂ ಗೋಜಲು ಉತ್ತರಗಳಿರುವುದುಂಟು. ಕೈಗಾರಿಕೀಕರಣವಾದದ್ದಾದರೂ ಏಕೆ ? ಅದರಲ್ಲೂ ಅದು ಹತ್ತೊಂಬತ್ತನೇ ಶತಮಾನದಲ್ಲೇ ಆದದ್ದೇಕೆ ? – ಎಂಬ ಸರಳ ಪ್ರಶ್ನೆಗಳಿಗೆ ನೇರವಾಗಿ ಒಂದೇ ಉತ್ತರ ಹೇಳಲು ಸಾಧ್ಯವೇ ?

ಹದಿನೆಂಟನೆಯ ಶತಮಾನದವರೆಗೆ ಆದ ವಿಜ್ಞಾನದ ಬೆಳವಣಿಗೆಗಳಿಲ್ಲದೆ ಯಂತ್ರ ನಿರ್ಮಿತಿ ಸಾಧ್ಯವಿಲ್ಲ. ಹೀಗಾಗಿ ವಿಜ್ಞಾನ ಪ್ರಗತಿಗೂ ಅದು ಯಂತ್ರಬಳಕೆಯ ತಂತ್ರಜ್ಞಾನವಾಗುವುದಕ್ಕೂ, ಕೈಗಾರಿಕೀಕರಣಕ್ಕೂ ಸಂಬಂಧವಿದೆ. ಆದ್ದರಿಂದ ಕೈಗಾರಿಕೀಕರಣದ ಉಗಮವನ್ನು ನಿರ್ಧರಿಸಿದ್ದು ವಿಜ್ಞಾನ ಮತ್ತು ತಂತ್ರಜ್ಞಾನ ಬೆಳವಣಿಗೆ – ಎಂದು ಉತ್ತರಿಸಲು ಸಾಧ್ಯ.

ಮೇಲಿನ ಉತ್ತರ ತಪ್ಪಲ್ಲದಿದ್ದರೂ ಬೇರೆ ಉತ್ತರಗಳೂ ಸಾಧ್ಯ. ಕೈಗಾರಿಕೆಗಳನ್ನು ಸ್ಥಾಪಿಸಲು ಬೇಕಾಗುವ ಬಂಡವಾಳದ ಹೂಡಿಕೆ ಅಧಿಕ. ಈ ಅಗಾಧ ಬಂಡವಾಳ ಸೃಷ್ಟಿಯಾದದ್ದು ಅನೇಕ ದೇಶಗಳನ್ನು ವಸಾಹತುಗಳನ್ನಾಗಿಸಿಕೊಂಡ, ಅಂದಿಗೂ ಪ್ರಗತಿ ಹೊಂದಿದ ರಾಷ್ಟ್ರವಾಗಿದ್ದ ಬ್ರಿಟನ್‌ನ ರಾಜಕೀಯ ನೀತಿ ಎಂಬುದೂ ಉತ್ತರವೇ ! ಎಲ್ಲೆಲ್ಲಿ ಕೈಗಾರಿಕಾ ಉನ್ನತಿಯಾಗಿದೆಯೋ ಆ ರಾಷ್ಟ್ರಗಳು ವೈಜ್ಞಾನಿಕವಾಗಿ/ತಂತ್ರಜ್ಞಾನದಲ್ಲಿ ಮುಂದುವರಿದಿದ್ದ ಜೊತೆ ಜೊತೆಗೇ ಶ್ರೀಮಂತ ದೇಶಗಳಾಗಿದ್ದವು; ಆ ಶ್ರೀಮಂತಿಕೆಗೆ ವಸಾಹತು ಧೋರಣೆ ಕಾರಣ ಎಂಬುದು ಸ್ವವಿದಿತ.

ಈಗ ಈ ಸಮಸ್ಯೆಯ ಇನ್ನೊಂದು ಮಗ್ಗುಲನ್ನು ಗಮನಿಸೋಣ. ಮಾನವ ತನ್ನ ಭೋಗಲಾಲಸೆಗಳಿಗಾಗಿ ಪರಿಸರದ ನಿರ್ಜೀವಿ ಲೋಕದ ಶೋಷಣೆಗೆ ಪಶುಪ್ರಾಣಿಗಳನ್ನು ಸಾಕಿ ಬಳಕೆ ಮಾಡತೊಡಗಿದ. ಆದರೆ ಅದು ಸಾಲದೆಹೋದಾಗ ಪಶುಪ್ರಾಣಿಗಳಂತೆಯೇ ಸಹಮಾನವರೊಂದಿಗೆ ವರ್ತಿಸಿ ಗುಲಾಮಗಿರಿ ಪದ್ಧತಿಯನ್ನು ಜಾರಿಗೆ ತಂದ. ಈ ತಂತ್ರದಲ್ಲಿ ಬಲಿಯಾದ ಜನರು ಬೇಸತ್ತು ಪ್ರತಿಭಟಿಸಿದರು. ಕಡಿಮೆ ಶ್ರಮ ಹಾಗೂ ಹೆಚ್ಚಿನ ಸವಲತ್ತುಗಳಿಗಾಗಿ ಒತ್ತಡ ತಂದರು. ಇದರಿಂದ ಭೋಗಸಾಮಗ್ರಿ ಉತ್ಪಾದಕರ ಆದಾಯ ಕಡಿಮೆಯಾಗತೊಡಗಿತು. ಬಂಡವಾಳ ಹೂಡಿಕೆಯ ಮೂಲಕ ಯಂತ್ರಗುಲಾಮನನ್ನು ತರಲು ಮುಂದಾದರು. ಯಂತ್ರಗುಲಾಮ ಮುಷ್ಕರ ಹೂಡುವುದಿಲ್ಲ; ಕ್ರಾಂತಿಕಾರಿಯಾಗಿ ಸಿಡಿದೇಳುವುದಿಲ್ಲ. ಯಂತ್ರಗುಲಾಮನನ್ನು ಕೊಳ್ಳಲು ಹಣಹೂಡಿದ್ದೇನೆಂದು ಹೇಳಿ ಮಾಲಿಕನು ಲಾಭವನ್ನು ಕೊಳ್ಳೆಹೊಡೆಯಲು ಸದವಕಾಶವಿದೆ. ಗ್ರಾಹಕರಿಗೆ ಭೋಗಸಾಮಗ್ರಿ ತೀವ್ರವೇಗದಲ್ಲಿ, ಉತ್ತಮ ಗುಣಮಟ್ಟದಲ್ಲಿ ಒದಗಿಸಿದ ಹಾಗೂ ಆಯಿತು; ಬಡವರಿಗೆ ಉದ್ಯೋಗಾವಕಾಶವೂ ಆಯಿತು; ಬಂಡವಾಳ ಹೂಡುವ ಮಂದಿಗೆ ಲಾಭವೂ ಆಯಿತು. 'ಯಂತ್ರಗುಲಾಮ' ಸಮುಚ್ಚಯವೇ ಕೈಗಾರಿಕೆ.

ಪಶು, ಪ್ರಾಣಿ ಹಾಗೂ ಅಸಹಾಯಕ ದೀನದಲಿತರನ್ನು ಶೋಷಿಸಿ ತನ್ನ ಲಾಭ ಪೋಷಿಸಿಕೊಂಡ ಉದ್ದಿಮೆದಾರರು ಹೊಸ 'ಯಂತ್ರಗುಲಾಮ'ನನ್ನು ಶೋಷಿಸ ತೊಡಗಿದಮೇಲೆ ಮಾನವನು ಗುಲಾಮಗಿರಿಯ ಬಗ್ಗೆ ಸಹಾನುಭೂತಿ ತಳೆದನೆ ? ಅಸಹಾಯಕ ಮಾನವ ತನ್ನ ಜೀತದ ಸಂಕೋಲೆಯಿಂದ ಹೊರಬಂದನೆ ?

ಹಾಗಾಗಿದ್ದಿದ್ದರೆ ಕೈಗಾರಿಕೀಕರಣವನ್ನು ಮತ್ತಷ್ಟು ಸಂಭ್ರಮದಿಂದ ಆಚರಿಸಬಹುದಾಗಿತ್ತು. ಯಂತ್ರಗುಲಾಮನೂ ಮಾನವ/ಪಶುಪ್ರಾಣಿಗಳ ಗುಲಾಮಗಿರಿಗೆ ಪರ್ಯಾಯವಾಗುವ ಬದಲು, ಪರಿಹಾರವಾಗುವ ಬದಲು ದುಡಿವ ವರ್ಗದ ಅಳಲನ್ನು ಅಧಿಕಗೊಳಿಸಿದ. ಹೀಗಾದದ್ದಾದರೂ ಹೇಗೆ ?

ಯಂತ್ರದಿಂದ ಮಾನವರ ದೈಹಿಕ ಶ್ರಮ ಕಡಿಮೆಯಾಗಿದೆ ಎಂಬ ನೆಪವೊಡ್ಡಿ ಉದ್ದಿಮೆದಾರರು ಅವನಿಗೆ ನೀಡಲಾಗುತ್ತಿದ್ದ ಕೂಲಿಯ ಕಡಿತ ಹಾಗೂ ದುಡಿಮೆಯ ಅವಧಿಯನ್ನು ಹೆಚ್ಚಿಸುವ ಕೆಲಸ ಮಾಡಿದರು. ಇನ್ನೂ ಹೆಚ್ಚು ದುಡಿದು 'ಅಧಿಕ ವೇಳೆ'ಯ ದುಡಿತದ ಮೂಲಕ ಹೆಚ್ಚು ಉತ್ಪಾದಿಸಲು ಒತ್ತಾಯ ಹೇರಿದರು. ಎಲ್ಲಕ್ಕೂ ಮಿಗಿಲಾಗಿ ಯಂತ್ರ ಗುಲಾಮನ ಉತ್ಪಾದಕತೆಯಿಂದಾದ ಸಿಂಹಪಾಲು ಬಂಡವಾಳ ಹೂಡಿಕೆದಾರರಿಗೆ ತಲುಪಿತೇ ವಿನಾ ದುಡಿಯುವ ವರ್ಗ ಈ ಲಾಭದಿಂದ ವಂಚಿತರಾದರು. ಈ ನವೀನ ಶೋಷಣೆಯ ವಿರುದ್ಧ ಮತ್ತೆ ಪ್ರತಿಭಟನೆಯ ಅಲೆ ಎದ್ದಿತು. ಶ್ರಮಿಕರನ್ನು ಒಗ್ಗೂಡಿಸಲು ಸಾಂಕೇತಿಕವಾಗಿ ಮೇ ಒಂದರಂದು 'ಶ್ರಮಿಕರ ದಿನಾಚರಣೆ' ಮಾಡುವುದು ಈ ಸಂಘಟನೆಯ ಅನಿವಾರ್ಯತೆಯನ್ನು ನೆನಪಿಸುವ ಸಲುವಾಗಿ.

ಒಟ್ಟಾರೆ ಹೇಳುವುದಾದರೆ, ಕೈಗಾರಿಕೀಕರಣದಿಂದ ಶ್ರಮಿಕರ ಶ್ರಮ ಪರಿಹಾರ ಅತ್ಯಲ್ಪ; ಅವರು ಹೆಚ್ಚು ಅವಧಿ ದುಡಿಯುವಂತಾಯಿತು. ಕೈಗಾರಿಕೀಕರಣದಿಂದಾಗಿ ಶ್ರಮಿಕರ ಜೀವನಶೈಲಿ ಸುಧಾರಿಸಿ ಸುಖಮಯವಾದದ್ದು ಅತ್ಯಲ್ಪ; ಆದರೆ ಹೆಚ್ಚು ಸಂಖ್ಯೆಯ ಶ್ರಮಿಕರು ರೂಪುಗೊಂಡರು. ಒಟ್ಟಿಗೆ ಸೇರಿ ದುಡಿಯುವ ಸಂದರ್ಭದಿಂದಾಗಿ ಸಂಘಟಿತರಾಗಲು ಸಾಧ್ಯವಾಯಿತು.

ಇಷ್ಟೆಲ್ಲಾ ಶ್ರಮಿಕರ ಸಂಖ್ಯೆಯ ಹೆಚ್ಚಳ ಆಗಿಯೂ ಸಂಘಟನೆ ಉಂಟಾಗಿಯೂ ಶ್ರಮಿಕರ ಸಮಸ್ಯೆಗಳು ಹೆಚ್ಚುತ್ತಲೇ ಇವೆ. ಯಂತ್ರಗುಲಾಮನೊಂದಿಗೆ ಸಮಾಂತರವಾಗಿ ಹೆಚ್ಚು ಅವಧಿ ಪರ್ಯಂತ ಮಾನವ ಗುಲಾಮರೂ ದುಡಿಯುವಂತಾಗಿದೆ. ಸರ್ಕಾರವೂ ದುಡಿಮೆಯ ಅವಧಿಯ ಮಿತಿಯನ್ನು ಕಂಪ್ಯೂಟರ್ ಉದ್ದಿಮೆಯಂತಹ ಉದ್ದಿಮೆಗಳ ಸಲುವಾಗಿ ಸಡಿಲಗೊಳಿಸಿದೆ. ಉದ್ಯೋಗದ ನೇಮಕಾತಿ ಹಾಗೂ ಉದ್ಯೋಗ ಭದ್ರತೆ ಕುರಿತ ನಿಯಮಗಳನ್ನು ಕೆಲವು ಉದ್ದಿಮೆಗಳನ್ನು ಕುರಿತಂತೆ ಸಡಿಲಿಸಿ ಮುಕ್ತ ಸ್ವಾತಂತ್ರ್ಯವನ್ನು ಒದಗಿಸಿದೆ ! ಸಂಘಟಿತರಾಗಿಯೂ ಅಸಹಾಯಕತೆಯ ನೆರಳಿನಲ್ಲಿ ಬಾಳಬೇಕಾದ ಉದ್ಯಮ ಶ್ರಮಜೀವಿಗಳ ಬದುಕು ಗಮನಿಸಿದರೆ ಗುಲಾಮಗಿರಿ ಮಾರುವೇಷದಲ್ಲಿ ಮರುಹುಟ್ಟು ಕಂಡಿದೆ ಎನ್ನಿಸದಿರದು.

ಸೌಲಭ್ಯದ ಮುಖವಾಡ ಹಾಕಿ ಬಂದ ಕೈಗಾರಿಕೀಕರಣ ಉದ್ಯಮಪತಿಗಳ ಲಾಭವನ್ನು ಹೆಚ್ಚಿಸಿ, ಹಣಬಲ ಹಾಗೂ ದೈಹಿಕ ಶ್ರಮದ ಬಲದ ನಡುವಣ ಸ್ಪರ್ಧೆಯಲ್ಲಿ ದೈಹಿಕಶ್ರಮವನ್ನವಲಂಬಿಸಿರುವವರನ್ನು ಸೋಲಿಸಿ ಅಸಹಾಯಕತೆಯ ನೆರಳಿನಲ್ಲಿ ಬದುಕುತ್ತಾ ಭರವಸೆಯ ಬೆಳಕನ್ನು ಹುಡುಕಿ ಹತಾಶರಾಗಿ ನರಳುವಂತೆ ಮಾಡಿದೆ.

ಮಾಧ್ಯಮ, ಸರ್ಕಾರ ಹಾಗೂ ಆಡಳಿತಯಂತ್ರವನ್ನು ಅಧೀನದಲ್ಲಿರಿಸಿಕೊಂಡಿರುವ ಉದ್ಯಮದೊಡೆಯರ ವಿರುದ್ಧ ಸೆಣಸುವುದು ಸುಲಭವೇನಲ್ಲ. ತಮ್ಮ ಹಕ್ಕಿನ ರಜೆಯನ್ನು ತೆಗೆದುಕೊಳ್ಳಲೂ ಹೆದರಿ ದುಡಿಯುವ ಸ್ಥಿತಿ ಶ್ರಮಿಕರಿಗೆ ಉಂಟಾಗಿದೆ.

ಇದಕ್ಕೆ ಇರುವ ಪರಿಹಾರವೊಂದೇ. ವಿಜ್ಞಾನ ಹಾಗೂ ತಂತ್ರಜ್ಞಾನ ಸೌಲಭ್ಯಗಳನ್ನು ಬಳಕೆ ಮಾಡಿಕೊಳ್ಳುವುದನ್ನು ಶ್ರಮಿಕ ಸಂಘಟನೆಗಳೂ ರೂಢಿಸಿಕೊಳ್ಳಬೇಕು. ಹೀಗೆ ಮಾಡುವ ಮೂಲಕ ತಮ್ಮ ಧ್ವನಿಯನ್ನು ಬಿಂಬಿಸುವಂತೆ ಮಾಧ್ಯಮಗಳ ಮೇಲೆ ಒತ್ತಡ ಹೇರಬೇಕು. ಹಣಬಲವನ್ನು ಮೆಟ್ಟಿನಿಲ್ಲುತ್ತಾ, ಸಂಖ್ಯಾಬಲದಿಂದ ಆಡಳಿತ ಯಂತ್ರ ಹಾಗೂ ಸರ್ಕಾರದ ಮೇಲೆ ಪ್ರಭಾವ ಬೀರುವಷ್ಟು ಪ್ರಬಲವಾಗಬೇಕು. ಇದೆಲ್ಲವನ್ನೂ ಸಾಧಿಸುವ ಮೊದಲು ವರ್ತಮಾನದ ಆಗುಹೋಗುಗಳ ಮೇಲೆ ಪ್ರಭಾವ ಬೀರಿರುವ ಅಂಶಗಳನ್ನು ಕೂಲಂಕಷ ಅಧ್ಯಯನ ಮಾಡಿ ಜನರಿಗೆ ತಲುಪಿಸುವಷ್ಟರಮಟ್ಟಿಗೆ ಸಂಘಟನೆಯು ಸಮರ್ಥವಾಗಬೇಕು. ಇದಕ್ಕೆ ಅಗತ್ಯವಾದ ವೈಜ್ಞಾನಿಕ ಚಿಂತನೆ/ವಿಶ್ಲೇಷಣೆ ಮಾಡುವಷ್ಟರ ಮಟ್ಟಿಗೆ ಜನರಿಗೆ ವಿಜ್ಞಾನ ಹಾಗೂ ವೈಜ್ಞಾನಿಕ ಚಿಂತನಾಕ್ರಮದ ಶಿಕ್ಷಣ ಆಗಬೇಕು.

ಹಾಗೆಯೇ ಜನರೂ ವಿಜ್ಞಾನದ ಭೋಗಸಾಮಗ್ರಿಯ ಬಳಕೆಯ ಅಮಲಿನಿಂದ ಹೊರಬಂದು ಕಟುವಾಸ್ತವವನ್ನು ಆಲೋಚಿಸಲು ಕಟಿಬದ್ಧರಾಗಬೇಕು. ಅವರು ವರ್ತಮಾನವನ್ನು ಐತಿಹಾಸಿಕ ಹಿನ್ನೆಲೆಯಲ್ಲಿ ಅರಿಯುವ ಧೀಮಂತರಾದಾಗ ಮಾತ್ರ ವ್ಯವಸ್ಥೆಯನ್ನು ಬದಲಿಸಲು ಸಾಧ್ಯ.

ಪ್ರೊ|| ಎಮ್. ಆರ್. ನಾಗರಾಜು
ಪ್ರಧಾನ ಸಂಪಾದಕ, ಬಾಲವಿಜ್ಞಾನ, ಎಫ್-೩, ಎಸ್‌ಎಫ್‌ಎಸ್ ನಿವಾಸಗಳು
೭ನೇ 'ಬಿ' ಅಡ್ಡರಸ್ತೆ, ಯಲಹಂಕ ಉಪನಗರ, ಬೆಂಗಳೂರು - ೫೬೦ ೦೬೪

**ಸಿಹಿ ಸಿಹಿಯಾಗಿ**

ಪ್ರೀತಿದುಂಬಿದ ಆ ನೋಟಗಳು
ಚಂದ್ರ ಕೈಗೇ ತಾಗಿದಂತೆ !
ಇರುವ ಕಾಲಕ್ಕೆ ಆ ನೆನಪುಗಳೇ
ಸಿಹಿ ಸಿಹಿಯಾಗಿ ಸಾಗಿದಂತೆ

ಬಂದಗದ್ದೆ ರಾಧಾಕೃಷ್ಣ
'ಪುಸ್ತಕ ಹೊಂಬಾಳೆ', ಕೆಳದಿ ಅಂಚೆ,
ಸಾಗರ ತಾಲ್ಲೂಕು - ೫೭೭ ೪೦೧



# ಪ್ರಸ್ತುತವಿದೆ ಹಿಂದೆಂದಿಗಿಂತಲೂ ಉತ್ತಮವಾದ ಹೊಸ ಸಂತೂರ್

ಇದೀಗ ಹೊಸ ಸಂತೂರ್ ಬಳಸಲು ಇನ್ನಷ್ಟು ಕಾರಣಗಳು

**ನ್ಯಾಚುರಲ್ ಸ್ಕಿನ್ ಸಾಫ್ಟನರ್ಸ್**
ನೀಡುವುದು ಕೋಮಲ
ಹಾಗೂ ನುಣುಪಾದ ತ್ವಚೆ

ಮೈಮರೆಸುವ **ಹೊಸ ಪರಿಮಳ**
ನೀಡುವುದು, ಆಹ್ಲಾದಕರ
ಸ್ನಾನದ ಅನುಭವ

**ಚಂದನ ಮತ್ತು ಅರಿಸಿನದ**
**ಅಡ್ವಾನ್ಸ್ಡ್ ಎಕ್ಸ್‌ಟ್ರಾಕ್ಟ್ಸ್**
ನೀಡುವುದು
ತಾರುಣ್ಯ ಭರಿತ ತ್ವಚೆ




ಹೊಸ **ಸಂತೂರ್**

ನಿಮಗೆಂದೇ ವಿಶೇಷವಾಗಿ

FCB+ULKA-42940

Printed by R. S. Rajaram at Navakarnataka Printers, No. 167 & 168, 10th Main, III Phase, Peenya Industrial Area, Bangalore - 560 058 and Published by him for Navakarnataka Publications (P) Ltd. Embassy Centre, Crescent Road, P. B. 5159, Bangalore - 560 001, Editor : Dr. G. Ramakrishna

**HOSATHU** Kannada Monthly / May 2006 Rs. 12
Registered CPMG / KA / BGE – 7 / 2006-08. Posted at Bangalore PSO on the 3rd of every month
WPP No. 14. Licenced to post without prepayment. RNI Regn. No. KARKAN/1999/614.